

# ಹೊಸತು



ನೆಮ್ಮದಿಯ ನಾಳೆ ನಮ್ಮದು

ಜುಲೈ ೨೦೧೧ ಬೆಲೆ : ರೂ. ೧೨




ಹುಸೇನ್ ಹಿಟ್ಲರ್‌ನನ್ನು ದ್ವೇಷಿಸುತ್ತಾನೆ !!

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಸಂಕೇತ್, ಸುವರ್ಣ, ಶ್ರೀಹರಿ, ಗೋಪಿ, ಜಿ. ಎಂ. ಬೊಮ್ನಳ್ಳಿ,
ರಾಂಚಂದ್ರ ಕೊಪ್ಪಲು, ದೀಪಿಕಾ ವಿಲ್ಸನ್
ಮುಖಚಿತ್ರ : ಹುಸೇನ್ ಅವರ ಕಲಾಕೃತಿಗಳು
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಮೇ ತಿಂಗಳ ಮೂರನೆಯ ವಾರದಲ್ಲಿ ಬೆಂಗಳೂರಿನ ರಾಜಭವನದಲ್ಲಿ ಕುವೆಂಪು ಕುರಿತ ವಿಚಾರಗೋಷ್ಠಿ ನಡೆಯಿತು. ಅದೇನು ವಿಶೇಷವಾಗಿ ಅಲ್ಲಿ ಆಯೋಜಿಸಿದ್ದು? ಕುವೆಂಪು ಅವರ ಸಂಬಂಧದಲ್ಲಿ ಜನಸಾಮಾನ್ಯರು ಕೇಳಿಸಿಕೊಳ್ಳಬಾರದ್ದೇನಾದರೂ ಇದೆಯೆ ಎಂಬ ಅನುಮಾನ ಕೆಲವರಿಗೆ ಎನಿಸುತ್ತದೆ. ಆ ಬಗ್ಗೆ ಓದುಗರೊಬ್ಬರು ದಿನಪತ್ರಿಕೆಯೊಂದಕ್ಕೆ ಪತ್ರ ಬರೆದಿದ್ದು, ಅದು ಪ್ರಕಟವಾಗಲಿಲ್ಲವೆನ್ನಲಾಗಿದೆ. ಅದರ ಪೂರ್ಣಪಾಠ ಕೆಳಗಿನಂತಿದೆ :

ಈಚಿನ ದಿನಗಳಲ್ಲಿ ಕನ್ನಡ ಲೇಖಕರು ತಮ್ಮ ಪುಸ್ತಕಗಳನ್ನು ರಾಜಭವನದಲ್ಲಿ ರಾಜ್ಯಪಾಲರಿಂದ ಬಿಡುಗಡೆ ಮಾಡಿಸಿಕೊಳ್ಳುವ ಸಂಪ್ರದಾಯ ಹೆಚ್ಚಿರುವುದನ್ನು ಕಂಡು ಅಚ್ಚರಿಯುಂಟಾಗಿತ್ತು. ಜನರ ಮಧ್ಯೆ ಹೊರಗೆಲ್ಲಾದರೂ ಪುಸ್ತಕ ಬಿಡುಗಡೆಯಾದರೆ ಸಾಮಾನ್ಯರೂ ಅದರಲ್ಲಿ ಕೆಲವೊಮ್ಮೆ ಭಾಗಿಗಳಾಗಬಹುದು. ಮೈಯೆಲ್ಲಾ ತಡಕಿಸಿಕೊಂಡು, ಆಮೇಲೆ ಒಳಗೆ ಹೋಗಿ, ಆ ಪುಸ್ತಕವನ್ನೋದಲಾರದ ರಾಜ್ಯಪಾಲರು ಪುಸ್ತಕ ಬಿಡುಗಡೆ ಮಾಡುವ ವೈಭವ ಏಕೆ ಬೇಕು! ಅಥವಾ ಅವರಿಂದ ಬಿಡುಗಡೆಯಾದರೆ ಗ್ರಂಥದ ಮೌಲ್ಯವೇನಾದರೂ ವರ್ಧಿಸುತ್ತದೋ? ಪುಸ್ತಕ ಬಿಡುಗಡೆಯಿಂದ ಈಗ ವಿಚಾರಗೋಷ್ಠಿಯತ್ತ ರಾಜಭವನದ ಕಾರ್ಯಕ್ರಮ ವಿಸ್ತರಿಸಿದೆ. ಪ್ರವೇಶ 'ಆಹ್ವಾನವಿರುವವರಿಗೆ ಮಾತ್ರ' ಎಂದಿರುವಾಗ ಅದು ಸಾರ್ವಜನಿಕ ಸಭೆಯಾಗುವುದಿಲ್ಲ. ಕಳೆದ ವಾರ ಕುವೆಂಪು ದರ್ಶನವನ್ನು ಕುರಿತ ಗೋಷ್ಠಿ ರಾಜಭವನದಲ್ಲಿ ಜರುಗಿದುದಾಗಿ ವರದಿಯಾಗಿದೆ. ಪ್ರಸಿದ್ಧ ವಿದ್ವಾಂಸರು ಅದರಲ್ಲಿ ಭಾಗವಹಿಸಿದ್ದಾರೆ. ಕುವೆಂಪು ದರ್ಶನದಲ್ಲಿನ ಆಸಕ್ತಿಯಿಂದಲೋ, ರಾಜಭವನದ ಆಹ್ವಾನಕ್ಕೆ ಗೌರವ ಸಲ್ಲಿಸಬೇಕೆಂದೋ, ಆಹ್ವಾನಿತರು ಕೆಲವರು ಭಾಗವಹಿಸಿದ್ದಾರೆ. ಹೊರಗೆಲ್ಲಾದರೂ ಇದೇ ಗೋಷ್ಠಿ ಸಾರ್ವಜನಿಕವಾಗಿ ನಡೆದಿದ್ದರೆ ಹೆಚ್ಚು ಜನಕ್ಕೆ ಉಪಯುಕ್ತವಾಗುವ ಸಾಧ್ಯತೆ ಇರುತ್ತಿತ್ತು. ರಾಜ್ಯಪಾಲರು ತಮ್ಮ ರಾಜಭವನದಲ್ಲಿ ಬಂಧನದಲ್ಲಿರುವುದಾಗಿ ಅಳಲು ತೋಡಿಕೊಂಡರಂತೆ. ಅದನ್ನು ಕುವೆಂಪು ಅವರ 'ಅನಿಕೇತನ' ತತ್ವಕ್ಕೆ ಅದೆಷ್ಟು ಜಾಣತನದಿಂದ ಹೊಂದಿಸಿದರೋ ತಿಳಿಯದು. ಅಲ್ಲಿ ಉಪಸ್ಥಿತರಿದ್ದ ಆಹ್ವಾನಿತರಿಗೆ ತಿಳಿದಿರಬಹುದು.

ಮುಖ್ಯಮಂತ್ರಿ ಯಡಿಯೂರಪ್ಪನವರ ಸರ್ಕಾರವನ್ನು ಕಿತ್ತೊಗೆಯುವ ಯತ್ನದಲ್ಲಿ ಭರದ್ವಾಜರು ವಿಫಲರಾದ ತರುವಾಯದಲ್ಲೇ ರಾಜಭವನಕ್ಕೆ ಕುವೆಂಪು ದರ್ಶನದಲ್ಲಿ ಆಸಕ್ತಿ ಹೊಮ್ಮಿರುವುದು ಸ್ವಾರಸ್ಯವಾಗಿದೆ. ಕುವೆಂಪು ಮತ್ತು ಅವರನ್ನು ಕುರಿತು ಉಪನ್ಯಾಸ ನೀಡಿದ ವಿದ್ವಾಂಸರು ರಾಜ್ಯಪಾಲರಿಗೆ ಸಾಂಸ್ಕೃತಿಕ ಗುರಾಣಿಗಳಾಗಿ ಕಂಡಿದ್ದರೆ ವಿಷಾದನೀಯ. ವರ್ಚಸ್ಸಿನ ವರ್ಧನೆಗೆ ಕುವೆಂಪು ಕಿರೀಟ ಧರಿಸುವುದು ಒಂದು ಸಾಂಸ್ಕೃತಿಕ ವ್ಯಂಗ್ಯ. ಅಲ್ಲದೆ, ಸಾರ್ವಜನಿಕರ ಖರ್ಚಿನಲ್ಲಿ ನಡೆಯುವ ವಿಚಾರಗೋಷ್ಠಿಗೆ ಸಾರ್ವಜನಿಕರು ಹೋಗಲಾಗದಂತೆ ಮಾಡುವುದು ಅನೈತಿಕ ಮತ್ತು ಅಸಂಗತ. ಕನ್ನಡ ವಿದ್ವಾಂಸರು ಮತ್ತು ರಾಜಭವನಕ್ಕೆ ಆಹ್ವಾನ ಪಡೆಯುವವರು ಆಲೋಚಿಸಬೇಕಾದ ಸಂಗತಿ ಇದು ಎನಿಸುತ್ತದೆ.

* * *

ಪಡಿತರ ಪದ್ಧತಿಯನ್ನು ಹೇಗಾದರೂ ಸಾಯಿಸಬೇಕೆಂದು ಮಾಂಟೆಕ್ ಸಿಂಗ್ ಅಹ್ಲುವಾಲಿಯಾ ಪ್ರಯತ್ನಿಸುತ್ತಲೇ ಇದ್ದಾರೆ. ಈ ಪ್ರಯತ್ನದಲ್ಲಿ ಅವರು ಸಫಲರಾಗುವವರೆಗೂ ಅವರಿಗೆ ಐ.ಎಂ.ಎಫ್.ನ ಉನ್ನತ ಹುದ್ದೆ ಸಿಗುವಂತಿಲ್ಲ. ಆಮೇಲೂ ಸಿಕ್ಕುವುದು ಅಸಂಭವವೇ! ಪವಾಡವೆಂಬಂತೆ ಸಿಕ್ಕಿಬಿಟ್ಟರೆ, ಅಲ್ಲಿಂದ ನೇರವಾಗಿ ಮನಮೋಹನರ ಸ್ಥಾನ ಖಾಲಿಯಾದಾಗ, ಭಾರತದ ವಾಣಿಜ್ಯ ಮಂಡಲಿಯ ಪ್ರತಿನಿಧಿಯಾಗಿ ಪ್ರಧಾನಿಯಾಗಬಹುದು. ನಮ್ಮ ಪಡಿತರ ವ್ಯವಸ್ಥೆಯನ್ನು ಪರಿಶೀಲಿಸಿ ಎಂದು ವಿಶ್ವಬ್ಯಾಂಕಿಗೆ ಈತ ಕೇಳಿಕೊಂಡರು. ಈಗಾಗಲೇ ದೇಸೀ ವಿದ್ವಾಂಸರೇ ಹಲವಾರು ಪರಿಶೀಲನೆಗಳನ್ನು ಮಾಡಿ, ಅದನ್ನು ಹೇಗೆ ಸರಿಪಡಿಸಬಹುದು, ಅದು ಏಕೆ ಮುಂದುವರಿಯಬೇಕು, ಅದನ್ನು ಏಕೆ ಸಾರ್ವತ್ರಿಕವಾಗಿಸಬೇಕು ಎಂಬುದನ್ನು ವಿಶ್ಲೇಷಿಸಿ ತಿಳಿಸಿದ್ದಾರೆ. ಆದರೂ ದೊಡ್ಡಣ್ಣನ ಕಡೆಯಿಂದ ಇದು ಬೇಡವೆಂದೇನಾದರೂ ಬಂದರೆ! ಸರಿ, ಈಗ ವರದಿ ಬಂದಿದೆ. ವಿಪರೀತ ಸೋರಿಕೆಯಿಂದ ಪಡಿತರ ವ್ಯವಸ್ಥೆ, ಸಮರ್ಥನೀಯವಾದರೂ, ಪರಿಣಾಮ ಬೀರುತ್ತಿಲ್ಲ ಎನ್ನುತ್ತದೆ ಅದು. ಈ ಅವಲೋಕನವನ್ನು ನೀತಿ ನಿರೂಪಕರು ಹೇಗೆ ಬಳಸಬೇಕು? ಸೋರಿಕೆ ಯಾಕೆ, ಹೇಗೆ ಎಂದು ಗಮನಿಸಿ, ಅದನ್ನು ಸರಿಪಡಿಸುವುದು ಎಂದು ಸಾಮಾನ್ಯ ಜ್ಞಾನ ಇರುವವರೂ ಹೇಳಿಯಾರು. ಕಾರಣ, ವಿಶ್ವ ಬ್ಯಾಂಕ್ ಆ ವ್ಯವಸ್ಥೆ ಸಮರ್ಥನೀಯವೆಂದೂ ಹೇಳಿದೆ. ಆದರೆ

*(೬ನೇ ಪುಟಕ್ಕೆ)*



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೧೨ ಜುಲೈ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

## ಸಂಪಾದಕೀಯ

# ಮೂರು ವರ್ಷ – ನೂರಾರು ಹಗರಣಗಳು

**ಕ**ರ್ನಾಟಕದಲ್ಲಿ ಭಾಜಪ ಆಡಳಿತ ಮೂರುವರ್ಷ ಮುಗಿಸಿದೆ ಮೊನ್ನೆ ತಾನೆ. ಪತ್ರಿಕೆಗಳಲ್ಲಿ ಪುಟಗಟ್ಟಲೆ ಜಾಹೀರಾತುಗಳು ಮೊಳಗಿದುವು. ಮೂರು ವರ್ಷಗಳ ಸಾಧನೆ ಕುರಿತ ಹೊತ್ತಗೆಯೊಂದನ್ನು ಬಾಜಾಬಜಂತ್ರಿಯಿಂದ ಸರಕಾರ ಹಂಚಿತು. ಆದರೆ ಜನಸಾಮಾನ್ಯರ ಮಟ್ಟಿಗೆ ಈ ವಿಜೃಂಭಣೆಯೆಲ್ಲ ಒಂದು ಅಣಕ. ಕಾರಣ ಕರ್ನಾಟಕದ ಜನ ಅರ್ಧ ಶತಮಾನದಲ್ಲಿ ಇಂಥ ಕೆಟ್ಟ ಸರಕಾರ ಕಂಡಿದ್ದಿಲ್ಲ. ಮೂರು ವರ್ಷಗಳಲ್ಲಿ ನೂರಾರು ಹಗರಣಗಳು, ಮುಗಿಲು ಮುಟ್ಟಿದ ಭ್ರಷ್ಟಾಚಾರ, ಮಾರಾಟದ ಸರಕಾದ ಶಾಸಕರು, ರಾಜ್ಯಪಾಲರು ಮತ್ತು ರಾಜ್ಯಸರಕಾರದ ಜಟಾಪಟಿ, ನಾಲ್ಕು ಬಾರಿ ವಿಶ್ವಾಸಮತ ಯಾಚನೆ, ಇವೇ ಮೊದಲಾದವು ಸರಕಾರದ 'ಸಾಧನೆ'. ಇನ್ನೆರಡು ವರ್ಷ ಸರಕಾರ ಸುರಕ್ಷಿತವೆ ? ಹೇಳುವಂತಿಲ್ಲ, ಯಾವಾಗ ಏನಾಗುವುದೋ !

ಭಾಜಪ ಸರಕಾರ ಅಸ್ತಿತ್ವಕ್ಕೆ ಬಂದದ್ದೇ ಚುನಾವಣೆಯಲ್ಲಿ ಕಣ್ಣೀರು ಹರಿಸಿ, ಅನುಕಂಪದ ಅಲೆಯ ಮೇಲೆ. ಅಧಿಕಾರ ವಂಚನೆ, ಕೊಟ್ಟ ಮಾತು ಉಳಿಸಿಕೊಳ್ಳದೆ ಬಗೆದ ದ್ರೋಹ – ಇವೇ ಪ್ರಯೋಗಿಸಿದ ಬಾಣ. ಚುನಾವಣೆಯ ಪರಿಣಾಮ ಬರುತ್ತಿದ್ದಂತೆಯೇ ಶುರುವಾಯಿತು ಬಹುಮತಕ್ಕೆ ಸರ್ಕಸ್ಸು. ಮಂತ್ರಿಗಿರಿ ಹರಾಜು ಹಾಕಿ ಪಕ್ಷೇತರರನ್ನು ಒಲಿಸಿಕೊಂಡು ಸರಕಾರ ರಚಿಸಿ ಬಹುಮತ ಸಾಬೀತು ಮಾಡಿಕೊಂಡರು ಯಡಿಯೂರಪ್ಪ. ರೈತರ ಹೆಸರಿನಲ್ಲಿ ಪ್ರಮಾಣವಚನ ತೆಗೆದುಕೊಂಡ ಸರಕಾರ ಮೊದಲು ನಡೆಸಿದ ದಬ್ಬಾಳಿಕೆ, ಗೋಳಿಬಾರು; ಹಾವೇರಿ ರೈತ ಸಮೂಹದ ಮೇಲೆ. ಅದೇ ರೈತ ವಿರೋಧಿನೀತಿ ಇವತ್ತೂ ಮುಂದುವರಿಯುತ್ತಿದೆ. ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಕುರ್ಚಿ ಭದ್ರಮಾಡಿಕೊಳ್ಳಲು ಭಾಜಪ ಅನುಸರಿಸಿದ ವಾಮಮಾರ್ಗ 'ಆಪರೇಶನ್ ಕಮಲ' ಎಂದು ಕುಖ್ಯಾತವಾಗಿರುವ ಪ್ರತಿಪಕ್ಷಗಳ ಶಾಸಕರ ಕೊಳ್ಳಾಟ. ಈಗಲೂ ಈ ಅಸಹ್ಯಕರ ಕಲಾಪವನ್ನು ಭಾಜಪ ನಾಚಿಕೆ ಇಲ್ಲದೆ ಮುಂದುವರಿಸಿದೆ. ಹೀಗೆ ಭ್ರಷ್ಟಾಚಾರದಿಂದ ಭದ್ರತೆ ಪಡೆದುಕೊಂಡಿರುವ ಸರಕಾರ ಅದರಲ್ಲೇ ಮುಳುಗಿಹೋಗಿದೆ. ಉತ್ತಮ ಆಡಳಿತ, ಅಭಿವೃದ್ಧಿ ಕಾರ್ಯ ಎಲ್ಲ ಬಾಯಿಮಾತಿನಲ್ಲಷ್ಟೆ, ಅಧಿಕಾರ ಉಳಿಸಿಕೊಳ್ಳುವುದೇ ದೊಡ್ಡದು. 'ಸರಕಾರದ ಕೆಲಸ ದೇವರ ಕೆಲಸ' ಹಣೆಪಟ್ಟಿ ವಿಧಾನಸೌಧದ ಮೇಲೆ, ಅದಕ್ಕೆ ಯಡಿಯೂರಪ್ಪ ಕಂಡ ಕಂಡ ದೇವರಿಗೆಲ್ಲ ಕೈಮುಗಿಯುತ್ತಾರೆ. ಅವರ ಅನುಯಾಯಿಗಳು ಶಿವರಾತ್ರೆ ಜಾತ್ರೆ ನಡೆಸುತ್ತಾರೆ, ಗಂಗಾಜಲ ಹಂಚಿ; ಲಾಡು ಹಂಚಿ ವೈಕುಂಠ ತೋರಿಸುತ್ತಾರೆ. ಸರಕಾರದ 'ಸಾಧನೆ' ಪಟ್ಟಿಗೆ ಗುಜರಿಗೆ ಹೋಗುವ ಅಗ್ಗದ ಬೈಸಿಕಲ್ಲು ವಿದ್ಯಾರ್ಥಿಗಳಿಗೆ, ಅಗ್ಗ ಸೀರೆ ಮಹಿಳೆಯರಿಗೆ, ನಮ್ಮೂರಿನ ಮಗ್ಗದವರಿಗೆ ನಾಮ ಹಾಕಿ. ಪ್ರವಾಹ ಸಂತ್ರಸ್ತರಿಗಾಗಿ ಸರಕಾರ ಕಟ್ಟಿ 'ಕೊಟ್ಟ' ಗೂಡು ಇನ್ನೊಂದು ಮಳೆಗಾಲ ಬಂದರೂ ಕನಸಿನ ಗಂಟು.

'ಆಪರೇಶನ್ ಕಮಲಕ್ಕೆ', ಸ್ವತಂತ್ರರನ್ನು ಬಲೆಗೆ ಹಾಕಿಕೊಳ್ಳಲು ರೆಡ್ಡಿತ್ರಯರು ಮಾಡಿದ ಉಪಕಾರಕ್ಕೆ, ಸಂದಿದ್ದು ಅಕ್ರಮ ಗಣಿಗಾರಿಕೆ. ಸಾವಿರಾರು ಕೋಟಿ ಲೂಟಿ. ಯಡಿಯೂರಪ್ಪನ ಸ್ವಜನ ಪಕ್ಷಪಾತ, ಭೂಹಗರಣ, ಪುತ್ರವ್ಯಾಮೋಹ ಬಯಲಾದಾಗ ಕಕ್ಕಾಬಿಕ್ಕಿ. ಭಾಜಪದಲ್ಲಿ ಕೋಲಾಹಲ. ತಿರುಗಿಬಿದ್ದ ರೆಡ್ಡಿ ಸೋದರರು, 'ರೆಸಾರ್ಟ್ ರಾಜಕಾರಣ'. ರಾಷ್ಟ್ರೀಯ ಅಧ್ಯಕ್ಷ ನಿತಿನ್ ಗಡ್ಕರಿ ಎಂಬಾತ ಕೈಬೆಚ್ಚಗೆ ಮಾಡಿಕೊಂಡು, ರಾಜಕೀಯ ಮಾಡಿ, ಸ್ವರಾಜ್-ಜೇಟ್ಲಿ ಜುಗ್ಗಾಟ ಬಳಸಿಕೊಂಡು ಯಡಿಯೂರಪ್ಪನಿಗೆ ಜೀವದಾನ ಮಾಡಿ, ಕೃತಾರ್ಥನಾದ. ಯಡಿಯೂರಪ್ಪ ತನಗೆ ಆಪ್ತರಾಗಿದ್ದ ಏಕೈಕ ಮಹಿಳಾ ಸಚಿವೆಯನ್ನು ಕೊಡವಿಕೊಂಡು ಬಚಾವು. ಇದು ಮೊದಲನೆಯ ಅಂಕ. ಎರಡನೇ ಅಂಕ ಸಂಪುಟ ಪುನಾರಚನೆ ಎಂಬ ಹುತ್ತಕ್ಕೆ ಕೈಯಿಟ್ಟಾಗ. ಅಷ್ಟರಲ್ಲಿ 'ಆಡಳಿತ ನಡೆಸಿ' ಎರಡು ವರ್ಷವಾಗುತ್ತ ಬಂದಿತ್ತು. ಉಂಡುಬಲಿತಿದ್ದ ಗೊದ್ದಗಳು ಕೈಕಚ್ಚಿದುವು. ಸಚಿವ ಸ್ಥಾನ ಕಳೆದುಕೊಂಡವರು ಮೈಮೇಲೆ ಬಿದ್ದರು. ಸ್ವತಂತ್ರರು ತಿರುಗಿಬಿದ್ದರು, ಜೊತೆಗೆ ಹನ್ನೊಂದು ಭಾಜಪ ಸದಸ್ಯರು ಸೇರಿಕೊಂಡರು. ಹೊಸಬರು ಹಳಬರ ಕಚ್ಚಾಟ. ಮುಖ್ಯಮಂತ್ರಿ ಯಡಿಯೂರಪ್ಪ ಬಹುಮತ ಕಳೆದುಕೊಂಡು ಕಂಗಾಲಾದರು. ವಿಶ್ವಾಸಮತ ಗಳಿಸಲು ರಾಜ್ಯಪಾಲರಿಂದ ಬುಲಾವ್. ಶಾಸನ ಸಭೆಯಲ್ಲಿ ಗೊಂದಲ, ತಿರುಗಿಬಿದ್ದ ಶಾಸಕರ ಅಮಾನತು. ಸಭಾಧ್ಯಕ್ಷರಿಂದ 'ಬಹುಮತ' ಸಾಬೀತು ಪ್ರಕಟಣೆ. ಇದನ್ನು ಒಪ್ಪದ ರಾಜ್ಯಪಾಲರಿಂದ ವಿಧಾನಸಭೆ ವಿಸರ್ಜನೆ, ರಾಷ್ಟ್ರಪತಿ ಆಡಳಿತಕ್ಕೆ ಶಿಫಾರಸು. ರಾಜಕೀಯ ಲೆಕ್ಕಾಚಾರ ಹಾಕಿದ ಕೇಂದ್ರದಿಂದ ಇದಕ್ಕೆ ನಕಾರ. ಮತ್ತೆ ಬಹುಮತ ಯಾಚಿಸುವಂತೆ ಸೂಚನೆ. ಮೂರನೇ ಬಾರಿಯೂ ಉಳಿದುಕೊಂಡಿತು ಸರಕಾರ. ಕತೆ ಇಲ್ಲಿಗೇ ಮುಗಿಯಲಿಲ್ಲ. ಅಮಾನತುಗೊಂಡವರು ಕೋರ್ಟು ಮೆಟ್ಟಲೇರಿದರು. ವರ್ಷ ಒಪ್ಪತ್ತಿನಲ್ಲಿ ಜಯ ಕಂಡರು. ಮತ್ತೆ ಶುರುವಾಯಿತು ಬಹುಮತದ ಕಸರತ್ತು. ಗಡಿಬಿಡಿಯಲ್ಲಿ ರಾಜ್ಯಪಾಲರಿಂದ ಮತ್ತೆ ಹೋಯಿತು ಶಿಫಾರಸು ಕೇಂದ್ರಾಡಳಿತೆಗೆ. ಆಳೆದೂ ಸುರಿದೂ ಕೇಂದ್ರದಿಂದ ನಕಾರ, ರಾಜ್ಯಸಭೆಯಲ್ಲಿ ಅದಕ್ಕೆ ಬಹುಮತ ಇಲ್ಲದ ಕಾರಣ ! ನಾಲ್ಕನೇ ಸಲವೂ ಉಳಿದುಕೊಂಡರು ಮುಖ್ಯಮಂತ್ರಿ ಮಾನಮರ್ಯಾದೆ ಎಲ್ಲ ಕಳೆದುಕೊಂಡು. ಭಂಡ ಧೈರ್ಯ ಈತನದು. ಈ ಅಂಕ ಮುಗಿದ ಮೇಲೆ ಶಾಸನ ಸಭೆ ಅಧಿವೇಶನ ಹತ್ತು ದಿನ ನಡೆಯಬೇಕಿದ್ದುದು ನಾಲ್ಕೇ ದಿನಕ್ಕೆ ಖಲಾಸು. ಪ್ರತಿಪಕ್ಷಗಳ ಬಹಿಷ್ಕಾರದ ಮಧ್ಯೆ ಹತ್ತಾರು ವಿಧೇಯಕಗಳ ಅನುಮೋದನೆ. ಇದು ಭಾಜಪ ಸರಕಾರದ ಮೂರು ವರ್ಷಗಳ ಮಹತ್ ಸಾಧನೆ. ಒಂದುಕಡೆ ತಿಂಗಳುಗಟ್ಟಲೆ ಎಳೆದಾಡಿದ ಈ ಹಗರಣಗಳು, ಭಾಜಪದಿಂದ ಸಾಧನೆಯ ಸಮಾವೇಶ, 'ರಾಜ್ಯಪಾಲರ ವಿರುದ್ಧ' ಹೋರಾಟ ಇತ್ಯಾದಿ ಕೋಟಿಗಟ್ಟಳೆ ಹಣ ಚೆಲ್ಲಿ ಜನ ಜಮಾಯಿಸಿ. ಪ್ರತಿಪಕ್ಷಗಳೂ ಹಿಂದೆ ಬೀಳಲಿಲ್ಲ, ಪಾದಯಾತ್ರೆ, ಪಾತ್ರೆಯಾತ್ರೆ ಎಲ್ಲ ಆಯಿತು. ಯಡಿಯೂರಪ್ಪನವರಿಂದ ದೂರಸರಿದು, ಹಗರಣವೊಂದರಲ್ಲಿ ಸಿಕ್ಕಿಕೊಂಡರೂ, ಮಂತ್ರಿಗಿರಿ ಮತ್ತೆ ಗಿಟ್ಟಿಸಿಕೊಂಡ ರೇಣುಕಾರಾಧ್ಯ ಬೆಂಬಲವಾಗಿ 'ಪಾದಯಾತ್ರೆ' ನಡೆಸಿದ್ದು ಒಂದು ಪ್ರಹಸನ ಮೂರನೇ ಅಂಕದಲ್ಲಿ. ರಾಜ್ಯದ ಬೊಕ್ಕಸದ ಲೂಟಿಯಲ್ಲಿ ಎಲ್ಲರಿಗೂ ಪಾಲು. ಶಾಸಕರು ಸಚಿವರಿಗೆ ಭಾರಿ ವೇತನ, ಭತ್ಯೆ ಹೆಚ್ಚಳದ ಭೂರಿಭೋಜನ.

ಕರ್ನಾಟಕ ಇಂಥ ಸರಕಾರವನ್ನು ಹಿಂದೆಂದೂ ಕಂಡಿದ್ದಿಲ್ಲ. ಭ್ರಷ್ಟಾಚಾರ ಇದ್ದಿತಾದರೂ ಅಷ್ಟೋ ಇಷ್ಟೋ ಕೆಲಸಕಾರ್ಯಗಳು ನಡೆಯುತ್ತಿದ್ದವು. ದೇಶದಲ್ಲೇ ಅತ್ಯಂತ ಭ್ರಷ್ಟ ರಾಜ್ಯವೆಂಬ ಕುಖ್ಯಾತಿ ಪಟ್ಟ ಗಳಿಸಿಕೊಟ್ಟ ಕೀರ್ತಿ ಸಲ್ಲುವುದು ಭಾಜಪ ಸರಕಾರಕ್ಕೆ.

ಇನ್ನೊಂದು ಅಂಕ ಪ್ರಾರಂಭವಾಗುವವರೆಗೆ ಈಗ ಅಲ್ಪವಿರಾಮ. ಅಕ್ರಮ ಗಣಿಗಾರಿಕೆ ಕುರಿತ ಲೋಕಾಯುಕ್ತರ ವರದಿ, ನ್ಯಾಯಾಲಯಗಳಲ್ಲಿ ಕಾದುಕುಳಿತಿರುವ ಹಗರಣಗಳು – ಸರಕಾರಕ್ಕೆ ತಲೆನೋವು. ಪಕ್ಷದಲ್ಲಿ ಹೊಗೆಯಾಡುತ್ತಿರುವ ಅತೃಪ್ತಿ ಯಾವಾಗ ಭುಗಿಲೇಳುವುದೋ ಕಾದುನೋಡಬೇಕಿದೆ. ಮಾತೆತ್ತಿದರೆ 'ಗುಜರಾತ್' ಮಾಡುತ್ತೇನೆ ಎಂದು ಹೇಳುತ್ತಿದ್ದ ಮುಖ್ಯಮಂತ್ರಿ ಸದ್ಯ ಇನ್ನೊಂದು 'ಗೋಧ್ರ'ಕ್ಕೆ ಕೈಹಾಕಲಿಲ್ಲ. ಆದರೆ ಮೊದಲ ಬಾರಿಗೆ ಕರ್ನಾಟಕದಲ್ಲಿ ಕ್ರೈಸ್ತರ ಮೇಲೆ ನಡೆಯಿತು ಹಲ್ಲೆ. ಇನ್ನು ಮುಂದೆ ರಾಜ್ಯದ ಜನ ಏನು ಅನುಭವಿಸಬೇಕೋ ಯಾರಿಗೆ ಗೊತ್ತು?

## ಭ್ರಷ್ಟತೆಯ ವ್ಯಾಪ್ತಿ

ಪ್ರಧಾನಿ, ಉಚ್ಚ-ಸರ್ವೋಚ್ಚ ನ್ಯಾಯಾಧೀಶರು, ಕಾರ್ಪೊರೇಟ್ ಕಂಪನಿಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಜನ - ಲೋಕಪಾಲ ಮಸೂದೆಯ ವ್ಯಾಪ್ತಿಗೆ ಬರದಿದ್ದರೆ ಅದೊಂದು ಶುದ್ಧ ಅಪ್ರಯೋಜಕ ಶಾಸನವಾಗುತ್ತದೆಂಬ ಆಗ್ರಹ ಅರ್ಥಪೂರ್ಣವಾದ್ದು. ಇಂದಿನ ದೊಡ್ಡ ಹಗರಣಗಳಲ್ಲಿ ಲಕ್ಷಗಟ್ಟಲೆ ಕೋಟಿ ಹಣವನ್ನು ಲೂಟಿ ಮಾಡಲಾಗಿದೆ. ರಾಜ, ಮಾರನ್, ಅಂಬಾನಿ, ಇಸ್ರೋ ಹೀಗೆ ಪಟ್ಟಿ ದೊಡ್ಡದಾಗಿದೆ. ಇವಾವುವೂ ಪ್ರಧಾನಿಯ ಗಮನಕ್ಕೆ ಬರದೆ ಇರುವಂಥವಲ್ಲ. ಆದ್ದರಿಂದ ಪ್ರಧಾನಿಯು ಲೋಕಪಾಲ ಮಸೂದೆಯ ವ್ಯಾಪ್ತಿಗೆ ಬರಬೇಕು. ಕಾರ್ಪೊರೇಟ್ ಕಂಪನಿಗಳಿಲ್ಲದಿದ್ದರೆ ರಾಜ-ಅಂಬಾನಿ-ಇಸ್ರೋ-ಮಾರನ್ ಕೇವಲ ಗಾಳಿಯಲ್ಲಿ ಭ್ರಷ್ಟರಾಗಲು ಸಾಧ್ಯವಿಲ್ಲ. ನೀರಾ ರಾಡಿಯ ಸಹ ಒಪ್ಪುತ್ತಾಳೆ, ಕಾರ್ಪೊರೇಟುಗಳೇ ಭ್ರಷ್ಟ ಸರ್ವಸ್ವದ ಮೂಲವೆಂದು. ಆದ್ದರಿಂದ ಅವು ಲೋಕಪಾಲ ಮಸೂದೆಯ ವ್ಯಾಪ್ತಿಯಲ್ಲಿರಬೇಕು. ಎಲ್ಲ ಹಗರಣಗಳೂ ಕೊನೆಗೆ ನ್ಯಾಯಾಲಯಗಳ ಮೆಟ್ಟಿಲೇರುವಂಥವೇ. ಅಲ್ಲಿ ಎಂತೆಂಥವರು ಏನೇನು ಕೈಚಳಕ ಮಾಡುತ್ತಾರೆ ಎಂಬುದನ್ನು ಶ್ರೀ ವಿ. ಆರ್. ಕೃಷ್ಣ ಅಯ್ಯರ್ ಅವರಂಥವರು ವಿವರಿಸಿದ್ದಾರಾದ್ದರಿಂದ ಅಲ್ಲಿಯ ನ್ಯಾಯಾಧೀಶರ ಪೂರ್ಣ ಪ್ರಮಾಣದ ತನಿಖೆ ಮತ್ತು ಶಿಕ್ಷೆಗೆ ಲೋಕಪಾಲ ಮಸೂದೆ ಅವಕಾಶ ಕಲ್ಪಿಸಬೇಕು. ಅದಕ್ಕೆ ಸಂವಿಧಾನದ ತಿದ್ದುಪಡಿ ಮಾಡಬೇಕು. ಇನ್ನು ಸರ್ಕಾರೇತರ ಸಂಸ್ಥೆಗಳು : ಅವು ಸಮಾನಾಂತರ ಸರ್ಕಾರದ ಮಟ್ಟಕ್ಕೇರಿವೆ. ಅವಕ್ಕೆ ಹಣ ಎಲ್ಲಿಯದು ಮತ್ತು ಏತಕ್ಕೆ ಎಂಬುದು ಸಾಕಷ್ಟು ನಿಗೂಢ. ಸರ್ಕಾರವೂ ಅವಕ್ಕೆ ಹೇರಳ ಹಣ ಹರಿಸಲು ಯೋಜನೆಗಳಿವೆ. ಸಾರ್ವಜನಿಕ ಚಳುವಳಿಗಳ ದಾರಿತಪ್ಪಿಸುವ ಕೆಲಸವನ್ನು ಮಾಡುವ ಎನ್‌ಜಿಓಗಳಿವೆ, ದೇಶವನ್ನು ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಂಡು ವಿದೇಶಗಳ ಮುಂದೆ ಹಲ್ಲುಗಿಂಜುವ ಎನ್‌ಜಿಓಗಳೂ ಇವೆ. ಸಹಜವಾಗಿಯೇ ಅವುಗಳ ಎಲ್ಲ ಚಟುವಟಿಕೆಗಳ ಮೇಲೆ ಕ್ಷ-ಕಿರಣ ಬೇಕು. ಲೋಕಪಾಲ ಮಸೂದೆ ಅದನ್ನು ಮಾಡಬೇಕು.

ಇಷ್ಟು ಮಾಡಿದರೆ ಭ್ರಷ್ಟಾಚಾರ ಇಲ್ಲವಾಗುವುದೆ? ಖಂಡಿತ ಇಲ್ಲ. ಏಕೆಂದರೆ ಕಾನೂನುರೀತ್ಯಾ ಭ್ರಷ್ಟಾಚಾರಕ್ಕೆ ಅವಕಾಶವಿರುವಾಗ ಅದು ಹೇಗೆ ತಾನೆ ನಿಯಂತ್ರಣಕ್ಕೆ ಬರಲು ಸಾಧ್ಯ? ಇದಕ್ಕೆ ನೂರು ಉದಾಹರಣೆಗಳಿವೆ. ಅರುಣ್ ಶೌರಿಗೂ ಮುಂಚೆ ಅದಿತ್ತು, ಆದರೆ ಆತನ ಶೌರ್ಯದಿಂದ ಅದು ನೂರುಪಟ್ಟು ಹೆಚ್ಚುತ್ತಾ ಬಂದಿದೆ. ಸಾರ್ವಜನಿಕ ಆಸ್ತಿಯನ್ನು, ಸೇವಾಘಟಕಗಳನ್ನು, ಉತ್ಪಾದನಾ ಕೇಂದ್ರಗಳನ್ನು, ಕೊಲ್ಲುವುದು ಭ್ರಷ್ಟತನದ ಮೊದಲ ಮೆಟ್ಟಿಲು. ಕೋಟಿಗಟ್ಟಲೆ ಆಸ್ತಿಯನ್ನು ಖಾಸಗಿಗೆ ಹಸ್ತಾಂತರಿಸುವುದು ಕೇವಲ ಭ್ರಷ್ಟತನವಲ್ಲ, ಅದು ದೇಶದ್ರೋಹವೂ ಹೌದು. ಜನರಿಂದ ಚುನಾಯಿತರಾಗಿದ್ದಾರೆಂಬ ಒಂದೇ ಕಾರಣಕ್ಕೆ ಈ ನಾಯಕರು ನೂರಾರು ಅಧಿಕಾರಿಗಳ ಸಹಾಯದಿಂದ ಇದನ್ನು ಮಾಡಿದಾಗ ಅದು ಆಡಳಿತಾತ್ಮಕ ನೀತಿಯೆಂಬ ಹಣೆಪಟ್ಟಿ ಧರಿಸುತ್ತದೆ, ಆದರೆ ನಿಜಕ್ಕೂ ಅದು ಭ್ರಷ್ಟತನದ ಪರಮಹಂತ. ಭಾರತ್ ಅಲ್ಯೂಮಿನಂ ಕಂಪನಿಯನ್ನು ಅರುಣ್ ಶೌರಿ ಮಾರಿದ್ದು ಎಷ್ಟು ರೂಪಾಯಿಗೆ? ಅಶೋಕ ಹೋಟೇಲ್‌ಗಳನ್ನು ಹಸ್ತಾಂತರಿಸಿದ್ದು ಎಷ್ಟು ರೂಪಾಯಿಗೆ? ಅಂಬಾನಿಗೆ ಅನಿಲ ಕೊಟ್ಟ ಭ್ರಷ್ಟತನಕ್ಕಿಂತಲೂ ಇವು ಕಡಿಮೆಯಲ್ಲ. ಆದರೆ ಅವಕ್ಕೆ ''ಭ್ರಷ್ಟ'' ಎಂಬ ಗುಣವಾಚಕ ಕೊಡದೆ ಅದನ್ನು ಪ್ರಜಾಪ್ರಭುತ್ವದಡಿಯ ಕ್ರಮಬದ್ಧ ನೀತಿಯೆಂದು ಬಣ್ಣಿಸಲಾಗುತ್ತದೆ. ಹಾಗೆ ಬಣ್ಣಿಸುವುದು ಇನ್ನೊಂದು ಭ್ರಷ್ಟತನ, ಅಷ್ಟೆ

ಬ್ಯಾಂಕುಗಳು ಮತ್ತು ಇಡೀ ದೂರವಾಣಿ ವ್ಯವಸ್ಥೆ ಇಂದು ಮನಮೋಹನ ಸಿಂಗ್ ನೇತೃತ್ವದಲ್ಲಿ ಖಾಸಗಿ ಬಕಾಸುರ ಸಂತಾನದ ಪಾಲಾಗುವ ದುರವಸ್ಥೆಯನ್ನು ಎದುರಿಸುತ್ತಿವೆ. ಅವು ''ಚೆನ್ನಾಗಿ'' ಕೆಲಸ ಮಾಡುತ್ತಿಲ್ಲವೆಂಬ ತೀರ್ಮಾನ ಪ್ರಕಟಿಸಿ, ಅವುಗಳ ''ಚೇತರಿಕೆ''ಗೆಂದು ಅವನ್ನು ನುಂಗಣ್ಣಗಳಿಗೆ ಕೊಡುವುದು ಭ್ರಷ್ಟತನವಲ್ಲದೆ ಮತ್ತೇನು? ಅವನ್ನು ಚೆನ್ನಾಗಿಲ್ಲದಂತೆ ಮಾಡುವುದು ಮೊದಲ ಹೆಜ್ಜೆ, ಆಮೇಲೆ ಅವನ್ನು ಸೂರೆಮಾಡುವುದು ಇದ್ದೇ ಇದೆ. ಬ್ಯಾಂಕು - ದೂರವಾಣಿ ನಂತರ ರೈಲ್ವೆಯ ಸರದಿ ಬಂದರೆ? ಇವೆಲ್ಲ ಲೆಕ್ಕ ಹಾಕಲು ಸಾಧ್ಯವಾಗದಷ್ಟು ಅಗಾಧ ಸಂಪತ್ತು ಹೊಂದಿವೆ. ಅಲ್ಲಿ ಕೇವಲ ಹಣ ಮಾತ್ರವೇ ಅಲ್ಲ, ಭೂಮಿ- ಯಂತ್ರಗಳು-ಕಟ್ಟಡಗಳು-ಪರಿಕರಗಳು- ಕೆಲಸಗಾರರು-ಸೇವಾಗ್ರಾಹಕರು ಹೀಗೆ ಇಡೀ ದೇಶದ ಸೌಭಾಗ್ಯವೇ ಅಲ್ಲಿದೆ. ಅವುಗಳ ಕತ್ತುಕೊಯ್ದು ತಿನ್ನಲು ಹವಣಿಸುತ್ತಿರುವ ರಣಹದ್ದುಗಳೆಂದರೆ ಭ್ರಷ್ಟ ದೇಶದ್ರೋಹಿಗಳಲ್ಲದೆ ಮತ್ತೇನು?

ಇವನ್ನೆಲ್ಲಾ ಜನ ತಮ್ಮದನ್ನಾಗಿ ರಕ್ಷಿಸಿಕೊಳ್ಳುವುದು ಹೇಗೆ? ಲೋಕಪಾಲ ಅದನ್ನು ಮಾಡುವುದಿಲ್ಲ, ಏಕೆಂದರೆ ಜನಪಾಲರು ಅದನ್ನೆಲ್ಲಾ ಸಂವಿಧಾನ ರೀತ್ಯಾ, ಕಾನೂನು ರೀತ್ಯಾ, ಮಾಡುತ್ತಿದ್ದಾರೆಂದು ಅವನು ಅಥವಾ ಅವಳು ಹೇಳಿ ನಿಸೂರಾಗಿ ಕೂಡಬಹುದು. ನ್ಯಾಯಾಲಯ ಅದಕ್ಕಿಂತಲೂ ಹೆಚ್ಚೇನೂ ಮಾಡುವುದಿಲ್ಲ. ಸಂವಿಧಾನಕ್ಕೆ ಹೊಸ ಅರ್ಥಗಳನ್ನು ನೀಡುವ ಹಕ್ಕುಳ್ಳವರು ಜನರ ಹಕ್ಕುಗಳಿಗೆ ದುಗ್ಗಾಣಿ ಬೆಲೆ ಇಲ್ಲದಂತೆ ಮಾಡಲು ಸಂವಿಧಾನವೇ ಗುರಾಣಿ ಯಾಗುವಂತಿದ್ದರೆ ಸಾರ್ವಜನಿಕ ಸಂಪತ್ತನ್ನು ಭ್ರಷ್ಟರಿಂದ ರಕ್ಷಿಸಿಕೊಳ್ಳುವುದೆಂತು? ಲೋಕಪಾಲ ಮಸೂದೆ ಕುರಿತ ಅವಿರತ ಚರ್ಚೆಯಲ್ಲಿ ನಿರತರಾಗಿರುವ ನೀತಿವಂತರಿಗೆ ಈ ಪ್ರಶ್ನೆ ಅತಿ ಪ್ರಸ್ತುತ. ಆದರೆ ಅವನ್ನವರು ಹಾಕಿಕೊಳ್ಳುತ್ತಿಲ್ಲ. ''ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ನಮ್ಮ ಹೋರಾಟ ಕಾರಣ'' ಎನ್ನುವ ಬ್ಯಾಂಕುಗಳ ನೌಕರರು, ಇಂದು ಬ್ಯಾಂಕುಗಳನ್ನು ಏನೇನೂ ಕಾರಣ

*(೭ನೇ ಪುಟಕ್ಕೆ)*

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ವಿಶ್ವಬ್ಯಾಂಕು ಅಷ್ಟಕ್ಕೆ ನಿಲ್ಲದೆ ಮುಂದುವರಿದು ಪಡಿತರ ಪದ್ಧತಿ ನಿಲ್ಲಿಸಿ, ಅದರ ಬದಲು ಬಡವರಿಗೆ ನೇರ ಹಣ ನೀಡಿ ಎಂದಿದೆ. ಮಾಂಟೆಕ್ ಸಿಂಗ್‌ಗೆ ಇದು ಇಷ್ಟವಾಗುತ್ತದೆ. ಆದರೆ ಆತ ಹಾಗೆ ಮಾಡಲು ಬಿಡಕೂಡದು. ಈಗಾಗಲೆ ವಿಧವಾ ಪಿಂಚಣಿ, ವೃದ್ಧಾಪ್ಯ ಪಿಂಚಣಿ ಮುಂತಾದ ನೇರ ನಗದು ನೀಡುವ ವ್ಯವಸ್ಥೆಯನ್ನು ದುರ್ಬಳಕೆ ಮಾಡಿಕೊಂಡು, ಕೆಳಸ್ತರದ ಪುಢಾರಿಗಳು ಈ ಹಣ ಪಡೆಯುತ್ತಿರುವುದು ಎಲ್ಲರಿಗೂ ಗೊತ್ತು. ಮಾರುಕಟ್ಟೆಯಲ್ಲಿ ಆಹಾರ ಬಡವರಿಗೆ ದೊರೆಯುವ ಭರವಸೆ, ಒಂದು ನಿಗದಿತ ಬೆಲೆಯ ಭರವಸೆ ಮತ್ತು ಈ ನಗದೂ ಬಡವರನ್ನೇ ತಲುಪುವ ಭರವಸೆ ಯಾರಿಗಿದೆ, ಹೇಗಿರುತ್ತದೆ? ''ಭರವಸೆ ಇಲ್ಲವೊ ಎನಗೆ'' ಎನ್ನಬೇಕಾಗುತ್ತದೆ ದಾಸರು ಹೇಳುವಂತೆ. ಪಡಿತರ ಸಾರ್ವತ್ರಿಕವಾಗಿದ್ದಾಗ ಅದು ಮಾರುಕಟ್ಟೆಯ ಬೆಲೆಯನ್ನು ಹತೋಟಿಯಲ್ಲಿಡಲು ಸಹಕಾರಿಯಾಗಿತ್ತು, ಅಗತ್ಯವಿದ್ದವರು ಮಾತ್ರ ಕೊಳ್ಳುತ್ತಿದ್ದರು. ಬಡತನ ರೇಖೆಯ ಲೆಕ್ಕದ ಸರ್ಕಸ್ಸಿನ ಅಗತ್ಯವೇ ಇರಲಿಲ್ಲ.

ನಿರ್ದೇಶಿತ ಪಡಿತರ ಪದ್ಧತಿಯಲ್ಲಿ, ಎಲ್ಲಿ ಆಹಾರ ಉತ್ಪತ್ತಿಯ ಕೊರತೆ ಇದೆಯೋ ಅಲ್ಲಿಗೆ ಪೂರೈಕೆ ಮಾಡುತ್ತಿದ್ದಾರೆ. ಆದರೆ ಬಡವರೆಲ್ಲಾ ಒಂದೇಕಡೆ ಇರುವುದಿಲ್ಲವಲ್ಲ! ಅದೇ ವಿಶ್ವಬ್ಯಾಂಕು ಮತ್ತೊಂದು ಪರಿಶೀಲನೆಯಲ್ಲಿ ಹೇಳಿದೆ: ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಸಾರ್ವತ್ರಿಕವಾಗಿರುವುದರಿಂದಲೇ ಅದು ಕಡು ಬಡವರಿಗೆ ದಕ್ಕಿ, ಉದ್ದೇಶ ಸಫಲವಾಗಿದೆ, ಎಂದು. ಇದೇ ತತ್ವ ಪಡಿತರ ಪದ್ಧತಿಗೂ ಅನ್ವಯಿಸುತ್ತದೆ. ಹಾಗಾದಾಗಲೆ ಒಂದಿಷ್ಟು ಆಹಾರ ಸಂರಕ್ಷಣೆಯೂ ಸಾಧ್ಯ.

* * *

ವಿಷ ಔಷಧಿಯಾಗಬಲ್ಲುದು. ಆದರೆ ಎಷ್ಟು, ಹೇಗೆ ಕೊಡಬೇಕು, ಎನ್ನುವುದನ್ನು ವೈದ್ಯರು ನಿರ್ಧರಿಸಿ, ರೋಗಿಯನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತ ಔಷಧೋಪಚಾರ ಮಾಡಬೇಕು. ಮಿಕ್ಕ ಸಂದರ್ಭಗಳಲ್ಲಿ ಇಂತಿಷ್ಟು ವಿಷ ಪರವಾಗಿಲ್ಲ, ಅದರ ಕೆಟ್ಟ ಪರಿಣಾಮ ಸಾಬೀತಾಗಿಲ್ಲ ಎಂದು ಹೇಳಲು ಯಾರಿಗೆ ಅಧಿಕಾರ? ಎಂಡೋಸಲ್ಫಾನ್ ಬಳಸುವಾಗ ತಪ್ಪಾದರೆ, ಅದು ಮಾರಕವೆಂದಾಗ, ಅದನ್ನು ಸಾರ್ವಜನಿಕ ಉಪಯೋಗಕ್ಕೆ ವೈಜ್ಞಾನಿಕ ವಿಷಯಗಳ ತಿಳಿವಿಲ್ಲದ ರೈತನನ್ನು ಬಳಸಲು ಅವಕಾಶ ನೀಡುವುದು ಹೇಗೆ ಸರಿ? ಅಣು ಘಟಕಗಳು ಶೇಕಡ ೧ರಷ್ಟೇ ಆದರೂ ದಾರಿತಪ್ಪಿ, ಪರಿಸರಕ್ಕೂ, ಮಾನವನಿಗೂ ಪೀಳಿಗೆಯಿಂದ ಪೀಳಿಗೆಗೆ ವಿನಾಶ ಉಂಟುಮಾಡುವುದು ಸಾಧ್ಯವೆಂದಾಗ, ಶೇಕಡಾವಾರು ಲೆಕ್ಕಹಾಕಿ ಅಣುಸ್ಥಾವರುಗಳು ಕ್ಷೇಮವೆಂದು ಸಾರುವುದು ಹೇಗೆ ಸಮರ್ಥನೀಯ? ಮೂರ್ಖರು ನದಿಯ ಆಳವನ್ನು ಸರಾಸರಿ ಲೆಕ್ಕ ಹಾಕಿ ದಾಟಲು ಮುಂದಾಗಿ ಮುಳುಗುವಂತೆ ಆಗಿದೆ ಮೂರ್ಖರ ಕೈಗೆ ಸಿಕ್ಕಿಕೊಂಡ ಮಾನವ ಸಮುದಾಯದ ಪರಿಸ್ಥಿತಿ! ಜನರಿಗೆ ನೀಡುವ ಔಷಧಿಗಳನ್ನು ನೇರವಾಗಿ ಮನುಷ್ಯರ ಮೇಲೆ, ಅದರಲ್ಲೂ ಬಡದೇಶಗಳ ಬಡವರ ಮೇಲೆ, ಪ್ರಯೋಗ ಮಾಡುವ ಪ್ರವೃತ್ತಿ ಭಯಂಕರವಾಗಿ ಹೆಚ್ಚಿದೆ. 'ಜನಕ್ಕೆ ಮುಂದೆ ಲಾಭ' ಎಂಬ ನೀತಿಯ ಸಮಾಜ ರಚನೆಯಲ್ಲಿ ಬೇರೆ ಏನನ್ನು ತಾನೆ ನಿರೀಕ್ಷಿಸಬಹುದು? ಸೆಲ್‌ಫೋನ್‌ನಿಂದ ತಲೆ ಕ್ಯಾನ್ಸರ್ ಬರುತ್ತದೆಯೆ? ಬರಬಹುದು. ಅದು ಇನ್ನು ಸಾಬೀತಾಗಿಲ್ಲ, ಅದು ಸಾಬೀತಾಗಬೇಕಾದರೆ ಒಂದು ಪೀಳಿಗೆಯಷ್ಟು ಹಳೆಯದಾಗಬೇಕು ಇದರ ಬಳಕೆ. ಇದು ಇನ್ನು ಈಗತಾನೆ ಬಂದಿದೆ; ಬಂದಾಗ ನೋಡ್ಕೊಂಡ್ರೆ ಆಯ್ತು ಎಂಬ ಧೋರಣೆ. ಸೆಲ್‌ಫೋನ್ ಬಗ್ಗೆ ಒಂದು ಸಂಗತಿ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಬಳಸುವ ಸೆಲ್‌ಫೋನ್‌ಗಳಲ್ಲಿ ವಿಕಿರಣದ ಮಟ್ಟ ಇಂತಿಷ್ಟೇ ಇರಬೇಕೆಂಬ ಗುಣಮಟ್ಟದ ಕಟ್ಟುಪಾಡಿದೆ. ನಮಗಾದರೋ ಚೀನಾದ ಕೆಳಮಟ್ಟದ, ಆದರೆ ತುಂಬ ಕಡಿಮೆ ಬೆಲೆಯ, ಸೆಟ್ಟುಗಳು ಬಂದಿವೆ. ಇವುಗಳ ಮೇಲೆ ಯಾವ ನಿಯಂತ್ರಣವೂ ಇಲ್ಲ, ಇಷ್ಟಕ್ಕು ಅವನ್ನು ಕೊಳ್ಳುವವರು ಬಡವರು ತಾನೆ! ಒಂದು ವಿಷಯ ಎಲ್ಲರೂ ನೆನಪಿನಲ್ಲಿಡಬಹುದು: ಖಂಡಿತ ಸೆಲ್‌ಫೋನನ್ನು ಕೊನೆಯ ಪಕ್ಷ ಐದು ವರ್ಷದವರೆಗೆ ಪುಟ್ಟ ಮಕ್ಕಳ ಕಿವಿಗೆ ಇಡಬಾರದು. ಅದು ಮಿದುಳು ಬೆಳೆಯುವ ಕಾಲ.

* * *

ಗ್ವಿಡೊ ವೆಸ್ಟರ್‌ವಿಲ್ ಎಂಬಾತ ಜರ್ಮನಿಯ ವಿದೇಶಾಂಗ ಸಚಿವ. ಈಚೆಗೆ ಭಾರತಕ್ಕೆ ಭೇಟಿ ನೀಡಿ ಒಂದು ಭರ್ಜರಿ ಲಾಭದಾಯಕ ವ್ಯಾಪಾರ ಕುದುರಿಸಿಕೊಂಡು ಹೋದನೆಂದು ವರದಿಯಾಗಿದೆ. ಅದು ಐದು ಸಾವಿರ ಕೋಟಿ ರೂಪಾಯಿಗಳ ವ್ಯವಹಾರ. ಅದರಲ್ಲಿ ನಮ್ಮ ದೇಶದ ಯಾವ ಅಧಿಕಾರಿ ಮತ್ತು ಯಾವ ಮಂತ್ರಿ ಎಷ್ಟು ಅವ್ಯವಹಾರ ನಡೆಸಿರಬಹುದು ಎಂಬುದನ್ನು ಇನ್ನು ಮೂರು-ನಾಲ್ಕು ವರ್ಷಗಳ ನಂತರ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಬಹಿರಂಗಗೊಳಿಸಬಹುದು. ಅದಿರಲಿ, ಈ ಗ್ವಿಡೊ ಮಹಾನುಭಾವ ಭಾರತಕ್ಕೆ ಆಶ್ವಾಸನೆ ನೀಡಿದ್ದಾನೆ: ತಮ್ಮ ದೇಶದ ಸೈನ್ಯವನ್ನು ಆಫ್ಘಾನಿಸ್ತಾನದಿಂದ ೨೦೧೧ರ ಅಂತ್ಯದೊಳಗಾಗಿ ಹಿಂದಕ್ಕೆ ಕರೆಸಿಕೊಳ್ಳುವುದಾಗಿ. ಅಂದರೆ, ಆ ವೇಳೆಗೆ ಆ ದೇಶದಲ್ಲಿ ಕೊಲ್ಲಿಸಿಕೊಳ್ಳಲು ಯೋಗ್ಯರು ಯಾರೂ ಉಳಿದಿರುವುದಿಲ್ಲವೆಂದು ಅರ್ಥವಿರಬೇಕು. ಇಂಥ ದೇಶಗಳ ಪ್ರತಿನಿಧಿಗಳೊಡನೆ ಒಪ್ಪಂದ ಮಾಡಿಕೊಂಡು ನಾವು ಯುದ್ಧ ವಿಮಾನಗಳನ್ನು ಕೊಳ್ಳುತ್ತೇವೆ, ಅವರ ಕಾರ್ಖಾನೆಗಳಲ್ಲಿ ಉದ್ಯೋಗಾವಕಾಶ ಭದ್ರಗೊಳಿಸುತ್ತೇವೆ, ಕೊಂಡ ವಿಮಾನಗಳನ್ನು ಕೊಳೆಹಾಕುತ್ತೇವೆ. ೨೦೧೧ಕ್ಕೆ ನಾಳೆಯೋ ನಾಡಿದ್ದೋ ಎನ್ನುವಂತೆ ಈ ಗ್ವಿಡೊ ಮಾತನಾಡಿರುವುದು ಅಸಹ್ಯಕರ. ೨೦೧೧ರ ಬದಲು ೨೦೫೦ ಏಕಾಗಬಾರದು ಎಂದು ಆತನನ್ನು ಕೇಳಬೇಕಾಗಿತ್ತು. ಆಫ್ಘಾನಿಸ್ತಾನ, ಇರಾಕ್, ಲಿಬ್ಯ, ಸೂಡಾನ್, ಮುಂತಾದ ದೇಶಗಳಿಗೆ ನ್ಯಾಟೋ ಸೈನ್ಯಗಳು ಇಷ್ಟಬಂದಂತೆ ಹೋಗಬಹುದು, ಬರಬಹುದು. ಯಾರನ್ನೂ ಕೇಳಬೇಕಾಗಿಲ್ಲ. ನಾಳೆ ಆ ಪಟ್ಟಿಗೆ ಪಾಕಿಸ್ತಾನ, ಸಿರಿಯಾ ಸೇರಬಹುದು. ಮನಮೋಹನ ಸಿಂಗರ ನೀತಿ ಮುಂದುವರಿದರೆ ಹತ್ತು ವರ್ಷಗಳಲ್ಲಿ ನಮ್ಮ ದೇಶವೂ ಆ ಪಟ್ಟಿಗೆ ಸೇರಬಹುದೆಂಬ ಭೀತಿ ನಮ್ಮ ಭವಿಷ್ಯದ ದೃಷ್ಟಿಯಿಂದ ಆರೋಗ್ಯಕರ.

* * *

ಯೋಗಿ ರಾಮದೇವರ ''ಕ್ರಾಂತಿಕಾರಿ'' ಚಟುವಟಿಕೆಗಳ ಪರಿಶೀಲನೆಯ ಪ್ರಶ್ನೆ ಅಂತಿರಲಿ; ಅವರು ಮೂಲತಃ ಯೋಗಿ ಎಂಬ ವಿಚಾರ ಸದ್ಯಕ್ಕೆ ಸಾಕು. ಇಡೀ ದೇಶದ ಆರೋಗ್ಯವನ್ನು ಯೋಗದಿಂದ ಸುಧಾರಿಸಿ, ಸುಸ್ಥಿರಗೊಳಿಸಿ, ವಿದೇಶಿ ಔಷಧಿ ಕಂಪನಿಗಳನ್ನು ಬಂಗಾಳ ಕೊಲ್ಲಿಗೆ ಎಸೆಯುವ ಆಶ್ವಾಸನೆ ಅವರು ನೀಡುತ್ತಿರುತ್ತಾರೆ. ಕ್ಯಾನ್ಸರ್‌ಗೆ ಸಹ ಯೋಗದಲ್ಲಿ ಮದ್ದಿದೆಯೆಂದು ಅವರ ತಿಳುವಳಿಕೆ. ಈ ವ್ಯಕ್ತಿ ಕೇವಲ ನಾಲ್ಕು ದಿನಗಳ ಉಪವಾಸದಿಂದ ಚೈತನ್ಯಹೀನರಾಗಿ ಮೂರ್ಛಾವಸ್ಥೆ ತಲುಪಿದ್ದು ಹೇಗೆಂಬುದೇ ಕೌತುಕ. ಯೋಗ ಅವರಿಗೆ ನೀಡಿದ ದೈಹಿಕ ಶಕ್ತಿ ಅಷ್ಟೇಯೇನು? ಯೋಗಿಗಳು ಆಮ್ಲಜನಕವನ್ನು ಬೇರೆಯವರಿಗಿಂತ ಕಡಿಮೆ ಪ್ರಮಾಣದಲ್ಲಿ ಪಡೆದುಕೊಳ್ಳುತ್ತಾರೆ. ಅಂಥವರು ನಾಲ್ಕೇ ದಿನಗಳಲ್ಲಿ ನೆಲ ಕಚ್ಚಿದ್ದು ರಾಮದೇವರ ಅಸಾಮರ್ಥ್ಯವೋ ಅಥವಾ ಯೋಗದ್ದೇ ಏನಾದರೂ ಐಬೋ? ಪತಂಜಲಿಯ ಯೋಗಸೂತ್ರದಲ್ಲಿ 'ಸಂಯಮ' ಕುರಿತ ಶ್ಲಾಘನೆ ಇದೆ. ಧಾರಣ, ಧ್ಯಾನ, ಸಮಾಧಿ ಮೂರನ್ನೂ ಒಟ್ಟಾಗಿಸಿ 'ಸಂಯಮ' ಎನ್ನುತ್ತಾರೆ. ವ್ಯಕ್ತಿಯು ತನ್ನ ನಾಭಿಯನ್ನು ಕೇಂದ್ರೀಕರಿಸಿ ಸಂಯಮ ಮಾಡಿದರೆ ಹಸಿವು ಬಾಯಾರಿಕೆಗಳ ಪೂರ್ಣ ನಿವಾರಣೆಯಾಗುವ ಸಿದ್ಧಿ ಹೊಂದಬಹುದಂತೆ. ರಾಮದೇವ ಬಾಬಾ ಮೊದಲು ಯೋಗಸೂತ್ರ ಓದಿ, ಸಂಯಮ ಅಭ್ಯಾಸ ಮಾಡಿ, ಆಮೇಲೆ ಉಪವಾಸ ಕೈಗೊಂಡಿದ್ದರೆ ಅಮೆರಿಕಾದಲ್ಲಿ ಪ್ರಸಿದ್ಧರಾಗಿದ್ದ ಸ್ವಾಮಿ ರಾಮ ಸ್ಥಾಪಿಸಿದ ಡೆಹರಡೂನ್ ಆಸ್ಪತ್ರೆಗೆ ಹೋಗದಿರಬಹುದಿತ್ತು. ಅದನ್ನು ಮಾಡದೆ, ಭ್ರಷ್ಟಾಚಾರವನ್ನು ಕೇಂದ್ರೀಕರಿಸಿ ಸಂಯಮವಿಲ್ಲದೆ ''ಹೋರಾಟ'' ಆರಂಭಿಸಿಬಿಟ್ಟರೋ ಏನೋ; ಮುಂದಿನ ಬಾರಿ ಅದನ್ನು ಗಣನೆಗೆ ತೆಗೆದುಕೊಳ್ಳುತ್ತಾರೆಂದು ಊಹಿಸಬಹುದು. ಏಕೆಂದರೆ, ರೈತರ ಭೂಮಿ ಕಿತ್ತುಕೊಳ್ಳುವ ಉದಾತ್ತಚರಿತ, ಸೂರ್ಯಸಮಾನ, ಶಂಕರನೇ ಈಗ ಅವರಿಗೆ ಆಚಾರ್ಯರಾಗಿದ್ದಾರಲ್ಲ! ಇಬ್ಬರೂ ಪ್ರಾಣಾಯಾಮ ಸಾಧಕರು; ಒಬ್ಬ ರಾಷ್ಟ್ರೀಯ, ಇನ್ನೊಬ್ಬ ಅಂತರರಾಷ್ಟ್ರೀಯ. ಅಂತರರಾಷ್ಟ್ರೀಯ ಗುರು ರಾಷ್ಟ್ರೀಯ ಗುರುವಿಗೆ ಮಾರ್ಗದರ್ಶನ ನೀಡುವುದು ನ್ಯಾಯಸಮ್ಮತ, ಏಕೆಂದರೆ ರಾಮದೇವರ ಪ್ರಾಣಾಯಾಮ ಸಾಧಾರಣವಾದ್ದು ಮತ್ತು ರವಿಶಂಕರರ ಪ್ರಾಣಾಯಾಮ ಸುದರ್ಶನ ಸಾಮರ್ಥ್ಯದ್ದು. ಇಬ್ಬರೂ ಸೇರಿ ಭ್ರಷ್ಟಾಚಾರ ತೊಲಗಿಸುತ್ತಾರೆ, ಸರಿ; ಆದರೆ ಅವರಿಬ್ಬರ ಆಶ್ರಮಗಳ ಮೂಲದಲ್ಲಿ ಭ್ರಷ್ಟಾಚಾರ ಪರಿಣತ ಉದ್ಯಮಿಗಳಿದ್ದರೆ ಏನು ಮಾಡುವುದು!

* * *

ಈ ಮಧ್ಯೆ ರಾಷ್ಟ್ರೀಯ ಸ್ವಯಂಸೇವಕ ಸಂಘದ ವರಿಷ್ಠ ಮೋಹನ ಭಾಗವತ್ ತಮ್ಮ ''ಅಮೃತ'' ನುಡಿಗಳನ್ನು ಎಂದಿನಂತೆ ದೊಡ್ಡ ಗಂಟಲಲ್ಲಿ ಹೊರಹಾಕಿದ್ದಾರೆ. ತರ್ಕದಿಂದ ಸಂಪೂರ್ಣ ರಿಯಾಯಿತಿ ಹೊಂದಿರುವ ಈ ಮಹಾ ಸರಸಂಘ ಚಾಲಕರಿಗೆ ಪ್ರತ್ಯಕ್ಷ ನಿದರ್ಶನಗಳು ಮುಖ್ಯವಲ್ಲ, ಅವರ ವಾಗ್ಝರಿಯು ಮಾತ್ರ ಮುಖ್ಯ. ಎಂದಿನಂತೆ ಅವರ ನಾಗಪುರ ಕೇಂದ್ರದಿಂದ ಬಂತು ಅವರ ನೀತಿ ನಿರೂಪಣೆ: ಯಾರು ಅಧಿಕಾರದಲ್ಲಿದ್ದಾರೆ ಎಂಬುದು ಅಪ್ರಸ್ತುತ; ಭಾಜಪ ಇರಲಿ, ಕಾಂಗ್ರೆಸ್ ಇರಲಿ, ಅವರಿಗದರಿಂದ ಏನೂ ಆಗಬೇಕಾಗಿಲ್ಲ. ವ್ಯವಸ್ಥೆಯನ್ನು ಎಷ್ಟೇ ಬದಲಾಯಿಸಿದರೂ ಭ್ರಷ್ಟಾಚಾರ ಹೋಗುವುದಿಲ್ಲ, ಏಕೆಂದರೆ ಹೊಸ ವ್ಯವಸ್ಥೆಯಲ್ಲಿ ಭ್ರಷ್ಟರಾಗುವ ಹೊಸ ವಿಧಾನ ಕಲಿತುಬಿಡುತ್ತಾರೆ. ಆದ್ದರಿಂದ ಇರುವುದೊಂದೇ ಔಷಧಿ; ಭ್ರಷ್ಟಾಚಾರ ನೀಗಬೇಕಾದರೆ ನೈತಿಕ ಮೌಲ್ಯಗಳನ್ನು ಉಪದೇಶಿಸಬೇಕು, ಸಾಮಾಜಿಕ ಪರಿವರ್ತನೆ ಉಂಟುಮಾಡಬೇಕು; ಛತ್ರಪತಿ ಶಿವಾಜಿ ಮಾದರಿಯ ಆಡಳಿತ ಬರಬೇಕು. ವಿಶ್ವವನ್ನೆಲ್ಲಾ ಸುತ್ತಿಬಂದರೂ ನಿಮಗೆ ಉತ್ತಮ ಮೌಲ್ಯಗಳು ದೊರಕುವುದಿಲ್ಲ, ಅದು ದೊರೆಯುವುದು ಒಂದೇ ಜಾಗದಲ್ಲಿ, ಅಲ್ಲಿಗೆ

ಹೋದರೆ ಮಾತ್ರ ನಿಮಗೆ ಮೌಲ್ಯದ ಅರಿವು ಸಾಧ್ಯ. ಅದು ಸಂಘದ ಶಾಖೆ. ಪ್ರತಿದಿನ ಅಲ್ಲಿಗೆ ಹೋಗುವ ಅಭ್ಯಾಸವಿದ್ದವರಿಗೆ ಮಾತ್ರ ಮೌಲ್ಯಯುತ ವ್ಯಕ್ತಿತ್ವ ಕಟ್ಟಿಟ್ಟ ಬುತ್ತಿ. ಅವರೆಂದೂ ಭ್ರಷ್ಟರಾಗುವುದಿಲ್ಲ.

– ಹೀಗೆ ಸಾಗಿದೆ ಅವರ ನಿರರ್ಗಳ ಉಕ್ತಿ. ಭಾಗವತರಿಗೆ ಕಣ್ಣು-ಕಿವಿ ಎಲ್ಲಾ ಸೊಗಸಾಗಿವೆ, ಆದರೆ ಅವು ಅಪ್ರಯೋಜಕ. ಅವನ್ನವರು ಬಳಸದಿರುವ ಶಪಥ ಮಾಡಿದ್ದಾರೆ. ಇಲ್ಲದಿದ್ದರೆ, ಸಂಘ ಶಾಖೆಗಳಿಂದ ಉದುರಿದ ಸಹಸ್ರ ಮೌಲ್ಯ-ಮರಿಗಳು ಅವರಿಗೆ ಕಾಣುತ್ತಿದ್ದರು, ಇಲ್ಲವೆ ಕೇಳಿ ತಿಳಿಯುತ್ತಿದ್ದರು. ಬೇರೆ ರಾಜ್ಯಗಳ ಮಾತು ಬೇಡ, ನಮ್ಮ ರಾಜ್ಯದ ಯಡಿಯೂರಪ್ಪ, ಈಶ್ವರಪ್ಪ, ಅನಂತಕುಮಾರ, ರಾಮಚಂದ್ರ ಗೌಡ, ಅಶೋಕ, ಸದಾನಂದ ಗೌಡ, ಹೀಗೆ ನೂರಾರು ಭಾಜಪ ರಾಜಕಾರಣಿಗಳು ಸಂಘದ ಚಡ್ಡಿ ಧರಿಸಿಯೇ ದೊಡ್ಡವರಾಗಿರುವುದು. ಮುಮ್ತಾಜ್ ಅಲಿ ಖಾನ್ ಮಾತ್ರ ಹಿಂದೆ ಚೆಡ್ಡಿ ಧರಿಸದೆಯೇ ಈಗವರ ಸಾಲಿಗೆ ಸೇರಿದ್ದಾರೆ. ಅವರೆಲ್ಲರ ಸದ್ಗುಣಗಳು, ಉದಾತ್ತ ಮೌಲ್ಯಗಳು ಗುಟ್ಟಾಗಿ ಉಳಿದಿಲ್ಲ. ದೆಹಲಿಯಲ್ಲಿ ಅನಂತಕುಮಾರ ಸೇವೆ ಮಾಡಿ ಆಸ್ತಿ ತುಂಬಿಕೊಂಡಿದ್ದಾರೆ; ಇತರರು ಪಾಪ, ನಮ್ಮ ರಾಜ್ಯದಲ್ಲಷ್ಟೇ ''ಹೆಸರು'' ಗಳಿಸಿದ್ದಾರೆ. ಸಂಘ ಶಾಖೆ ತುಂಬಿಕೊಟ್ಟ ಮೌಲ್ಯಕ್ಕೆ ಇವರೆಲ್ಲಾ ಜೀವಂತ ನಿದರ್ಶನಗಳಾಗಿರುವಾಗ ಮಾನ್ಯ ಮೋಹನ ಭಾಗವತರೇಕೆ ಅರುಳು-ಮರುಳಾಗಿ ಸಂಘದ ಮೌಲ್ಯವನ್ನು ಕುರಿತು ಅಷ್ಟು ದೃಢವಿಶ್ವಾಸ ಇರಿಸಿಕೊಂಡಿದ್ದಾರೆ? ಹದಿನೇಳು ಕೋಟಿ ರೂಪಾಯಿಗಳ ಸಂಘ- ಪುಸ್ತಕಗಳು ಕಳೆದ ವರ್ಷವಷ್ಟೆ ಗೋಡೌನಿನಿಂದ ಹೊರಬಂದು ಶಾಲಾಕಾಲೇಜುಗಳನ್ನು ಸೇರಿದ್ದು ಮೋಹನ ಭಾಗವತರಿಗೆ ಯಾರಾದರೂ ತಿಳಿಸಬಾರದೆ! ಉಳಿದಂತೆ, ರೆಡ್ಡಿ ಸಹೋದರರಾದಿಯಾಗಿ ಹಲವರು ಮೌಲ್ಯ (= ಕ್ರಯ ಅಥವಾ ಬೆಲೆ) ನಿಗದಿಗೊಳಿಸಿದ್ದಾರೆ. ಗೊತ್ತಿರುವುದನ್ನು ಮರೆಯುವ ಸ್ವಭಾವ ಭಾಗವತರದು. ಗಾಂಧೀಜಿಯ ಕೋತಿಗಳ ಜಾಗದಲ್ಲಿ ಕೂತು ಕಣ್ಣು, ಬಾಯಿ, ಕಿವಿ, ಮುಚ್ಚಿಕೊಳ್ಳುವ ಸೌಭಾಗ್ಯ ಮೋಹನ ಭಾಗವತರದು. ಅದೇ ಅವರಿಗೆ ತೃಪ್ತಿ ತಂದರೆ ಯಾರದೇನು ಅಡ್ಡಿ!

* * *

ಅತ್ತ ಜರ್ಮನಿಗೆ ಐದು ಸಾವಿರ ಕೋಟಿ ರೂಪಾಯಿಗಳನ್ನು ಕೊಟ್ಟು ಯುದ್ಧ ವಿಮಾನಗಳ ವ್ಯಾಪಾರ, ಇತ್ತ ಹದಿನೆಂಟು ಸಾವಿರ ಕೋಟಿ ಹಣ ತೆತ್ತು ಅಮೆರಿಕಾದ ಬೋಯಿಂಗ್ ಕಂಪನಿಯಿಂದ ಸಿ-೧೭ ಎಂಬ ಮಿಲಿಟರಿ ಸಾಮಾನು ಸರಂಜಾಮು ಸಾಗಣೆಯ ವಿಮಾನಗಳ ಕೊಳ್ಳುವಿಕೆ. ಅದರಿಂದ ತಮ್ಮ ಕಂಪನಿಯಲ್ಲಿ ಸಾವಿರಾರು ಮಂದಿಗೆ ಉದ್ಯೋಗ ದೊರೆತಂತಾಯಿತೆಂದೂ, ಇನ್ನು ಮೂರು ವರ್ಷ ಉದ್ಯೋಗ ಖಾತ್ರಿಯಾಯಿತೆಂದೂ, ಕಂಪನಿಯ ವಕ್ತಾರ ಜೆರಿ ಡ್ರೆಲಿಂಗ್ ಹೇಳಿದ್ದಾನೆ. ಭಾರತ ಹತ್ತು ವಿಮಾನಗಳನ್ನು ಕೊಳ್ಳಲಿದೆ. ಅಮೆರಿಕಾದ ರಾಯಭಾರಿ ರೋಮರ್ ಈ ವ್ಯವಹಾರವನ್ನು ಮೆಚ್ಚಿ ದೆಹಲಿಯಲ್ಲಿ ಒಂದು ಹೇಳಿಕೆ ನೀಡಿದ: ಈ ವಿಮಾನಗಳಿಂದಾಗಿ ಭಾರಿ ತೂಕದ ಮಿಲಿಟರಿ ಸಾಮಾನು ಸಾಗಣೆ ಸುಲಭವಾಗುತ್ತದೆ, ಅಮೆರಿಕಾದಲ್ಲಿ ೨೩,೦೦೦ ಮಂದಿಗೆ ಉದ್ಯೋಗ ದೊರೆಯುತ್ತದೆ, ಎರಡು ದೇಶಗಳಿಗೂ ಒಳ್ಳೆಯ ಬಾಂಧವ್ಯದ ಸೂಚನೆ ಇದು ಮತ್ತು ವಿಶ್ವದ ಸುಭದ್ರತೆಗೆ ಇದರಿಂದ ಹಾದಿಯ ನಿರ್ಮಾಣವಾಗುತ್ತದೆ, ಎಂದು. ಅಂದರೆ, ''ಫ್ರಾನ್ಸಿನಿಂದ ಕೊಳ್ಳಬೇಕೆಂದಿದ್ದ ವಿಮಾನಗಳನ್ನು ಕೊಳ್ಳದೆ, ನಮ್ಮದನ್ನು ಕೊಂಡು ಸಹಾಯ ಮಾಡಿದ್ದೀರಿ, ನೀವು ಒಳ್ಳೆಯ ಜನ'' ಎಂದು ಅವನ ಶ್ಲಾಘನೆ. ವಾಯುದಳದ ಉನ್ನತಾಧಿಕಾರಿಗಳು ವಿವಿಧ ವಿಮಾನಗಳನ್ನು ಪರಿವೀಕ್ಷಿಸಿ ಭಾರತಕ್ಕೆ ಫ್ರಾನ್ಸಿನ ವಿಮಾನಗಳು ಸೂಕ್ತ, ಅವನ್ನು ಕೊಳ್ಳಬೇಕೆಂದು ಸಲಹೆ ನೀಡಿದ್ದರು. ಆ ಬಗ್ಗೆ ಮಾತುಕತೆ ನಡೆಯುತ್ತಿತ್ತು. ಮಧ್ಯೆ ಅಮೆರಿಕಾದ ಅಧ್ಯಕ್ಷ ಮತ್ತು ರೋಮರ್ ತಲೆಹಾಕಿ ಮನಮೋಹನ ಸಿಂಗರ ಕಿವಿ ಹಿಂಡಿದರು, ಕೈ ತಿರುಚಿದರು. ಅಮೆರಿಕಾಕ್ಕೆ ಶರಣಾಗುವುದು ತನ್ನ ಔನ್ನತ್ಯವೆಂದೇ ಭಾವಿಸಿರುವ ಭಾರತದ ಪ್ರಧಾನಿ ವಾಯುಸೇನೆಯ ಅಧಿಕಾರಿಗಳ ಸಲಹೆಯನ್ನು ತಳ್ಳಿಹಾಕಿ ಅಮೆರಿಕಾದ ನಿರುದ್ಯೋಗ ನಿವಾರಣೆಗೆ ಸಹಾಯಹಸ್ತ ನೀಡಿದ್ದಾರೆ. ವಾಯುಸೇನೆಯ ಅಧಿಕಾರಿಗಳಿಗೆ ಕಪಾಳಮೋಕ್ಷ ಮಾಡಿರುವುದು ಪ್ರಧಾನಿಯ ಉದ್ಧಟತನ, ಬೇಜವಾಬ್ದಾರಿತನ. ದೇಶದ ವಾಯುಸೇನಾ ಅಗತ್ಯಕ್ಕಿಂತಲೂ ಅಮೆರಿಕಾದ ನಿರುದ್ಯೋಗ ಪರಿಹಾರಕ್ಕೆ ಆದ್ಯತೆ ನೀಡುವುದು ನೂತನ ಉಗ್ರ ದೇಶಪ್ರೇಮ! ಈ ವಿಮಾನಗಳು ಯಾವುದಕ್ಕೆ ಉಪಯುಕ್ತ? ಪ್ರಕೃತಿ ವಿಕೋಪಕ್ಕೆ ಸಿಲುಕಿ ಸಂತ್ರಸ್ತರಾದವರನ್ನು ಬೇರೆಡೆಗೆ ಕೊಂಡೊಯ್ಯಲು, ವಿಶ್ವದ ಹಲವೆಡೆ ಅಪಾಯಕಾರಿ ಸನ್ನಿವೇಶವಿರುವಾಗ ಕೂಡಲೆ ಶಾಂತಿಸೈನ್ಯವನ್ನು ರವಾನಿಸಲು, ದೇಶದಲ್ಲೋ ಹೊರಗೋ ನಾಗರಿಕ ಸಂಘರ್ಷ ಉಂಟಾದರೆ ನಾಗರಿಕರನ್ನು ಜಾಗ್ರತೆಯಾಗಿ ಅಲ್ಲಿಂದ ಹೊರತರಲು, ಇತ್ಯಾದಿ. ಅಂದರೆ, ಆಫ್ಘಾನಿಸ್ತಾನ, ಇರಾಕ್, ಲಿಬ್ಯ, ಪಾಕಿಸ್ತಾನ, ಮುಂತಾದ ದೇಶಗಳಲ್ಲಿ ನಾಳೆ ಭಾರತವು ಅಮೆರಿಕಾ ಜೊತೆ ''ನಾಗರಿಕತೆ''ಯನ್ನು ಉಳಿಸಲು ನಮ್ಮ ೧೮,೦೦೦ ಕೋಟಿ ಮತ್ತು ಅಮೆರಿಕಾದ ೨೩,೦೦೦ ನಿರುದ್ಯೋಗಿಗಳಿಗೆ ಉದ್ಯೋಗ ಎಂದಾಯಿತು. ಇದು ''ಭ್ರಷ್ಟನಲ್ಲದ'' ಪ್ರಧಾನಿ ಮನಮೋಹನ ಸಿಂಗರ ಹೀನಾಯ ಭ್ರಷ್ಟಾಚಾರ. ನಾಳೆ ಜನಲೋಕಪಾಲನು ಇದರ ಸಮಗ್ರ ತನಿಖೆ ನಡೆಸಿದರೆ ಇನ್ನಷ್ಟು ಎ. ರಾಜ ಮತ್ತು ಅಂಬಾನಿಗಳ ಅನಾವರಣ ಅನಿವಾರ್ಯ. ಇಂದಿನ ವ್ಯಾಪಾರ ಇನ್ನೂ ಸಾಲದಂತೆ; ಅಮೆರಿಕಾದ ಲಾಕ್‌ಹೀಡ್ ಮಾರ್ಟಿನ್ ಕಂಪನಿಯೂ ಸೇರಿದಂತೆ ಇತರರ ಬಳಿಯೂ ಭಾರತ ವ್ಯಾಪಾರ ಕುದುರಿಸಿಕೊಂಡು ೪೫,೦೦೦ ಕೋಟಿ ರೂಪಾಯಿಗಳ ಸಾಮಗ್ರಿ ಕೊಳ್ಳಬೇಕೆಂದು ರೋಮರ್ ಆಗ್ರಹಿಸಿದ್ದಾನೆ. ಇಂತಹ ಭರ್ಜರಿ ಲೂಟಿಗಳಿಗೆ ಭಾರತವನ್ನು ತೆರೆದಿಡುತ್ತಿರುವ ಮನಮೋಹನ ಸಿಂಗ್ ಮತ್ತು ಅವರ ಸರ್ಕಾರಕ್ಕೆ ಜನತೆ ಧಿಕ್ಕಾರ ಹೇಳುತ್ತದೆ. ●

---

*ಸಂಪಾದಕೀಯ (೫ನೇ ಪುಟದಿಂದ)*

ಕೊಟ್ಟು ಲೂಟಿ ಮಾಡಹೊರಟಿರುವವರನ್ನು ಹೇಗೆ ಎದುರಿಸುತ್ತಾರೆ? ಅವರಿಗೆ ಕಾನೂನು-ನ್ಯಾಯಾಲಯಗಳ ಬೆಂಬಲವಿರುತ್ತದೆಯೆ? ಅಂತೆಯೇ ಇಡೀ ದೂರವಾಣಿ ಸಂಸ್ಥೆಯ ನೌಕರರು ತಮ್ಮ ಮತ್ತು ದೇಶದ ಆಸ್ತಿಯನ್ನು ರಕ್ಷಿಸುವ ಆಶಯ ಹೊಂದಿದ್ದಾರೆಯೆ ಮತ್ತು ಹೊಂದಿದ್ದರೆ ಹೇಗೆ ಅದನ್ನು ಕಾರ್ಯಗತಗೊಳಿಸುತ್ತಾರೆ? ಈ ಸಂಸ್ಥೆಗಳ ಉನ್ನತ ಅಧಿಕಾರಿಗಳು ಲೂಟಿಯ ಭ್ರಷ್ಟತೆಯಲ್ಲಿ ಸ್ವತಃ ಭಾಗಿಗಳಾದಾಗ ಸಹ ಅವರಿಗೆ ಪ್ರತಿರೋಧ ಒಡ್ಡಲು ನೌಕರರಿಗೆ ಸಾಧ್ಯವಾಗಿಲ್ಲ. ಜನತೆ ಆ ಬಗ್ಗೆ ತಿಳುವಳಿಕೆ ಮತ್ತು ಎಚ್ಚರಿಕೆ ಪ್ರದರ್ಶಿಸಿಲ್ಲ.

ನಮ್ಮ ದೇಶದ ಭ್ರಷ್ಟತನದ ಓನಾಮ ಶುರುವಾಗುವುದೇ ಇಲ್ಲಿಂದ. ಅದನ್ನು ಲೆಕ್ಕಿಸದೆ ಲೋಕಪಾಲ ಮಸೂದೆಯು ಸರ್ವರೋಗಾಪಹಾರಿ ಎಂಬಂತೆ ಮಾತನಾಡುವುದು ಅತಿಶುಷ್ಕವಾದ ಮಾದರಿ. ಲೋಕಪಾಲ ಮಸೂದೆಯನ್ನು ರೂಪಿಸುವುದು ಅತಿಮುಖ್ಯ, ಅದಕ್ಕಾಗಿ ಬೆಂಬಲ-ಹೋರಾಟ ಎಲ್ಲಾ ಅಗತ್ಯ, ಅದನ್ನು ವಿರೋಧಿಸುವ ವರ್ಗ ಮತ್ತು ಸಚಿವ ಮಂಡಲಿಗೆ ಧಿಕ್ಕಾರ, ಎಲ್ಲಾ ಸರಿ; ಅಷ್ಟೇ ಮುಖ್ಯವಾದ್ದು ಕಾನೂನು – ಸಂವಿಧಾನರೀತ್ಯಾ ರಾಷ್ಟ್ರದ ಸಂಪತ್ತನ್ನು ದೋಚಲು ಸಾಧ್ಯವಾಗದಂತೆ ಪ್ರಬಲ ಕ್ರಮಗಳನ್ನು ಕೈಗೊಳ್ಳುವುದು ಕೂಡ. ಅದನ್ನು ಪಾಸ್ಕೋ ದುರಾಕ್ರಮಣದ ವಿರುದ್ಧ ಸೆಣಸುತ್ತಿರುವ ಒರಿಸ್ಸಾದ ಜನ ಮಾಡುತ್ತಿದ್ದಾರೆ, ಪೆಪ್ಸಿಕೋ ವಿರುದ್ಧ ಸೆಣಸಿದ ಕೇರಳದ ಪ್ಲಾಚಿಮಾಡ ಗ್ರಾಮದ ಪಂಚಾಯತಿ ಮಾಡಿದೆ. ಇನ್ನೂ ಸಾವಿರಾರು ಹೋರಾಟಗಳು ಅಂಥವಿವೆ. ಅವೆಲ್ಲಾ ಭ್ರಷ್ಟತನದ ಬೇರುಗಳನ್ನು ಕತ್ತರಿಸುವ ಕ್ರಮಗಳಾಗಿವೆ. ಇಂದಿನ ಕಾನೂನು ವ್ಯವಸ್ಥೆ ಎಷ್ಟು ಹೀನಾಯವಾಗಿದೆಯೆಂಬುದಕ್ಕೆ ನಿದರ್ಶನಗಳು ಅನವಶ್ಯಕ. ಗಂಗಾತಟದಲ್ಲಿ ಗಣಿಗಾರಿಕೆ ತಡೆಯಹೋಗಿ ನಿಗಮಾನಂದ ಜೀವನದಿಂದ ನಿರ್ಗಮಿಸಿದ. ''ಹಾಗೆ ಸಾಯಿ, ಇಲ್ಲವಾದರೆ ನಾವು ಕೊಲ್ಲುತ್ತೇವೆ'' ಎನ್ನುವ ಗಣಿ ಮಾಫಿಯಾಗಳಿವೆ, ಮುಂಬಯಿ ಪತ್ರಕರ್ತ ಜ್ಯೋತಿರ್ಮಯ ಡೇಅನ್ನು ಕೊಲ್ಲುವ ಪಾತಕಿಗಳಿದ್ದಾರೆ. ನಮ್ಮ ರಾಜ್ಯ ಸರ್ಕಾರದಲ್ಲಿ ಉದ್ಯಮ ಸಚಿವಾಲಯದ ಕಾರ್ಯದರ್ಶಿ ಜ್ಯೋತಿರಾಮಲಿಂಗಂ ಇದೀಗ ಹೇಳಿರುವುದೇನು ಗೊತ್ತೆ? ''ಬಟ್ಟೆ ಹೊಲಿಯುವ ಉದ್ಯಮದ ಗಾರ್ಮೆಂಟ್ ಕೆಲಸಗಾರರು ಇನ್ನು ಮುಂದೆ ದಿನಕ್ಕೆ ಹತ್ತೂವರೆ ಗಂಟೆ ದುಡಿಯಬೇಕು'', ಎಂದು. ಹತ್ತನ್ನು ಎಂಟಕ್ಕಿಳಿಸಿ ಕೊಳ್ಳಲು ದುಡಿಮೆಗಾರರು ಒಂದು ಶತಮಾನದ ಹಿಂದೆ ರಕ್ತ ಚೆಲ್ಲಿ ''ಮೇ ದಿನ''ವನ್ನು ಚರಿತ್ರಾರ್ಹವಾಗಿಸಿದರು. ಈಗ ಈ ಮನುಷ್ಯ ಹೀಗೆನ್ನುತ್ತಿದ್ದಾನೆ! ನಾವು ಹೋಗುವುದು ಹಿಂದಕ್ಕೋ ಮುಂದಕ್ಕೋ?




ಸಾರ್ವಜನಿಕ ಸಂಪತ್ತನ್ನು ಕಳೆದುಕೊಳ್ಳುವುದೆಂದರೆ ಹಲವು ಶತಮಾನಗಳ ಹಿಂದಕ್ಕೆ ಹೋದಂತೆ, ಗುಲಾಮಿ ಪದ್ಧತಿಯನ್ನು ಮತ್ತೆ ಆಹ್ವಾನಿಸಿದಂತೆ. ಲೋಕಪಾಲ ಇದನ್ನು ತಡೆಯುವುದಿಲ್ಲ. ಲೋಕ (ಅಂದರೆ, ಜನ) ಮಾತ್ರ ಅದನ್ನು ತಡೆಯಬಲ್ಲರು, ತಡೆಯಬೇಕು. ಲೋಕಪಾಲ ಬೇಕು, ಬರಲಿ; ಆದರೆ ಸಂವಿಧಾನ ಮತ್ತು ಕಾನೂನುರೀತ್ಯಾ ಜರುಗುವ ಸಾರ್ವಜನಿಕ ಸಂಪತ್ತಿನ ಲೂಟಿ ಕೂಡದು. ಅದಕ್ಕಿರುವ ಪ್ರತಿಬಂಧಕ ಒಂದೇ. ಅದು ವೈಜ್ಞಾನಿಕ ಸಮಾಜವಾದ. ದುಡಿಯುವ ಜನ ಆ ನಕ್ಷತ್ರದತ್ತ ಮುನ್ನಡೆಯಬೇಕು. ಇಡೀ ನಾಗರಿಕ ಸಮಾಜ ಅದರಲ್ಲಿ ಸಮಭಾಗಿ.




### ಮೇ ಸಂಚಿಕೆ

ಬೆಳಗಾವಿಯಲ್ಲಿ ನಡೆದ 'ವಿಶ್ವ ಕನ್ನಡ ಸಮ್ಮೇಳನ - ೨೦೧೧'ರ ಗೋಷ್ಠಿಯಲ್ಲಿ ರಾ. ನಂ. ಚಂದ್ರಶೇಖರ್ ಅವರು ನೀಡಿದ ಉಪನ್ಯಾಸವು ಬಹಳ ಅರ್ಥಪೂರ್ಣವೂ ಸಂದರ್ಭೋಚಿತವೂ ಆಗಿದೆ. ಅಖಿಲ ಭಾರತ ಮಟ್ಟದಲ್ಲಿ ಕನ್ನಡವೇ ಕಳೆದುಕೊಳ್ಳುವಂತಹ ಪ್ರಕ್ರಿಯೆಯೊಂದು ನಡೆಯುತ್ತಿರುವುದು ಗೋಚರಿಸುತ್ತಿದೆ. ಸಿಂಡಿಕೇಟ್, ಕೆನರಾ, ಕಾರ್ಪೋರೇಷನ್, ವಿಜಯಾ ಮೊದಲಾದ ಬ್ಯಾಂಕುಗಳು ಆರಂಭದಿಂದಲೂ ಅಖಿಲ ಭಾರತ ವಾಣಿಜ್ಯ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ಕನ್ನಡಿಗರ ಆಡಳಿತದಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಿವೆ. ಈಗಿನ ಪರಿಸ್ಥಿತಿ ಗಮನಿಸಿದರೆ ಈ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಕನ್ನಡಕ್ಕೆ ಮತ್ತು ಕನ್ನಡಿಗರಿಗೆ ಸ್ಥಾನವೇ ಇಲ್ಲವಾಗಿದೆ. ಭಾರತ ದೇಶವು ಹಲವು ಭಾಷೆಗಳುಳ್ಳ ರಾಜ್ಯಗಳ ಒಂದು ಒಕ್ಕೂಟವಾಗಿರುವುದರಿಂದ ಕನ್ನಡ ಭಾಷೆಗೂ ಕನ್ನಡಿಗರಿಗೂ ಸಮಾನ ಸ್ಥಾನಮಾನಗಳು ಸಂವಿಧಾನ ಬದ್ಧವಾಗಿ ದೊರಕಬೇಕಿವೆ. ಹಾಗೆಯೇ ರಾಜ್ಯದ ರೈಲ್ವೆ, ಅಂಚೆ, ವಿಮೆ, ಆದಾಯ ತೆರಿಗೆ, ಸೇವಾ ತೆರಿಗೆ, ನಿಗಮಗಳು, ಇತ್ಯಾದಿಗಳಲ್ಲಿ ಕನ್ನಡದ ಬಳಕೆಗೆ ಅವಕಾಶವೇ ಇಲ್ಲವಾಗಿದೆ. ಈ ಬಗ್ಗೆ ರಾಜ್ಯ ಸರಕಾರವು ಕೇಂದ್ರ ಸರಕಾರದ ಮೇಲೆ ಒತ್ತಡ ಹೇರಬೇಕಿದೆ. ರಾಜ್ಯದಲ್ಲಿನ ಕನ್ನಡ ಹಿತರಕ್ಷಣಾ ಸಂಘ ಸಂಸ್ಥೆಗಳು ಈ ವಿಷಯಕ್ಕೆ ಆದ್ಯತೆಯನ್ನು ಕೊಡುವಂತೆ ಚಳುವಳಿಯನ್ನು ಹಮ್ಮಿಕೊಂಡು ಒತ್ತಡ ಹೇರಬೇಕೆಂದು ಜನರು ಅಪೇಕ್ಷಿಸುತ್ತಾರೆ. ಅಂತೆಯೇ ಕನ್ನಡ ಸಂಸ್ಕೃತಿ ಮತ್ತು ಅಭಿವೃದ್ಧಿ ಪ್ರಾಧಿಕಾರವು ಈ ವಿಚಾರಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟು ರಾಜ್ಯದ ಎಲ್ಲಾ ಸಾರ್ವಜನಿಕ ಇಲಾಖೆಗಳಲ್ಲಿ ಕನ್ನಡದ ಬಳಕೆ ಕಡ್ಡಾಯಗೊಳಿಸುವಂತಾಗುವಂತೆ ತನ್ನ ಕರ್ತವ್ಯವನ್ನು ನಿರ್ವಹಿಸಬೇಕೆಂದು ಜನರು ನಿರೀಕ್ಷಿಸುತ್ತಾರೆ.

ಮಂಗಳೂರು — **ಬಿ. ವಿ. ಕಕ್ಕಿಲ್ಲಾಯ**

### ಜೂನ್ ಸಂಚಿಕೆ

ರವೀಂದ್ರನಾಥ ಟ್ಯಾಗೋರರ ೧೫೦ನೇ ವರ್ಷದಾಚರಣೆಯ ಈ ಸಂದರ್ಭದಲ್ಲಿ ಅವರ ಛಾಯಾಚಿತ್ರವನ್ನು ಸಮಯೋಚಿತವಾಗಿ ಪ್ರಕಟಿಸಿದ್ದೀರಿ. ಹಾಗೂ ಸಾಮ್ರಾಜ್ಯಶಾಹಿಯನ್ನು ಕುರಿತಂತೆ ಟ್ಯಾಗೋರರ ಧೋರಣೆಗಳು ಹೇಗಿದ್ದವು, ಎಂಬುದರ ಬಗ್ಗೆ ಸವಿಸ್ತಾರವಾದ ಲೇಖನವನ್ನು ಕೊಡಮಾಡುವುದರ ಮೂಲಕ ಬಹುತೇಕ ತಿಳಿದಿರದಿದ್ದ ಎಷ್ಟೋ ಪ್ರಸಂಗಗಳನ್ನು ತಿಳಿಸಿ ಉಪಕರಿಸಿದ್ದೀರಿ. ನಿಮಗೂ ಹಾಗೂ ಲೇಖಕರಿಗೂ ಈ ಉಪಕಾರಕ್ಕಾಗಿ ಧನ್ಯವಾದಗಳು.

ಚಿತ್ರದುರ್ಗ — **ಶರಣಗೌಡ ಎರಡೆತ್ತಿನ**

ಸುಗ್ಗಿಹಬ್ಬವೆಂಬುದು ಕೃಷಿಸಂಭ್ರಮದ್ದು. ಭತ್ತ ಬೆಳೆಯುವವನೊಬ್ಬ ಬೇಕೂಫನೆಂಬ ಕಾಲವಿದು. ರೂಪಾಯಿಗೆ ಒಂದು ಕೆ.ಜಿ. ಅಕ್ಕಿ ಸಿಗುವಾಗ ಕೆಲಸ ಯಾರಿಗೆ ಬೇಕು ಎಂಬ ಕಾಲವಿದು. ಎಲವೋ ಎಂದರೆ ಕಾನೂನು ಗೊತ್ತೇನಯ್ಯ ಎಂಬ ಕಾಲವಿದು. ರಾಜೇಶ್ ಅವರು ಶಿಕ್ಷಕರಾಗಿದ್ದುಕೊಂಡು ಸ್ಥಳೀಯವಾಗಿ ಅವರ ಹಿಂದಿನ ತಲೆಮಾರು ಪಟ್ಟ ಬವಣೆ ಚಿಂತಿಸುತ್ತಾರೆ. ಆಳುವವರೊಡನೆ ಜಮೀನುದಾರರು ಒಂದಾಗಿದ್ದ




ಕಾಲಕ್ಕೆ ಹೋಗಿ ಹಬ್ಬಹರಿದಿನಗಳನ್ನು ಬಿಡಿಸಲೆಣಿಸುತ್ತಾರೆ. ದೇವರು - ಹಬ್ಬ - ಹರಿದಿನಗಳು ಈ ವಿಧಾನದಲ್ಲಿ ವರ್ಣಪದ್ಧತಿ, ವರ್ಗ ಪದ್ಧತಿಗಳ ಶ್ರೇಣೀಕೃತ ವಿಧಾನ ಗಳಿಲ್ಲದೆಯಿಲ್ಲ, ಅದನ್ನು ದಾಟಿ ಗ್ರಾಮೀಣವಲಯದಲ್ಲಿ ಕೃಷಿಯು ಮಾತೃಪ್ರಧಾನವಾಗಿತ್ತು. ಆ ಮಾತೃಪ್ರಧಾನವೇ ಶೈವ ಸಂಸ್ಕೃತಿಯ ಉಗಮ. ಇದೇ ತಳಸಂಸ್ಕೃತಿಯ ಹರವು. (ಇಡೀ ಮಲೆನಾಡು ಶೈವ ಸಂಸ್ಕೃತಿಯದು. ಅದರ ಮುಂದುವರಿದ ಭಾಗವೇ ಬದಲಾದ ಪಿತೃ ಪ್ರಧಾನ ಸಂಸ್ಕೃತಿ.) ಈ ಪಿತೃಪ್ರಧಾನ ಆಳ್ವಿಕೆ ವರ್ಣ ಸಂಘರ್ಷ ತಂದೊಡ್ಡಿರುವುದು ಭಾರತೀಯ ಚರಿತ್ರೆ. ಇಂತಹ ತಳಮೂಲ ಚಿಂತನೆ ಬಿಟ್ಟು ಒಂದು ಸಂಘದ ವ್ಯಾಪ್ತಿಯಲ್ಲಿ ಜಾನಪದೀಯ ನೆಲೆಗಳನ್ನು ಗುರುತಿಸಿ ಕೊಳ್ಳಲಾಗುವುದಿಲ್ಲ.

ಬೆಂಗಳೂರು — **ಡಾ|| ರಾಜೇಗೌಡ ಹೊಸಹಳ್ಳಿ**

'ಈ ತಿಂಗಳು' ಮತ್ತು 'ಸಂಪಾದಕೀಯ' ಬರಹಗಳ ಅಭಿಪ್ರಾಯಗಳು ಏನೇ ಇರಲಂತೆ, ಅವುಗಳ ಅಭಿವ್ಯಕ್ತಿಯಲ್ಲಿರುವ ಹಾಸ್ಯ, ವ್ಯಂಗ್ಯ, ವಿಡಂಬನೆಗಳು ರೋಚಕವಾಗಿರುತ್ತವೆ!

ಮೈಸೂರು — **ಸಿಪಿಕೆ**

ನಮ್ಮ ದೇಶದ ಸಂಪನ್ಮೂಲವನ್ನು ಲೂಟಿಮಾಡಲು ಖಾಸಗಿಯವರಿಗೆ ಮುಕ್ತ ಅವಕಾಶ ನೀಡಿರುವುದು ದುರಂತ. ಸರ್ಕಾರದ ಅನುಮತಿ ಪಡೆದರೂ ಸಹ, ಅದರ ಷರತ್ತುಗಳನ್ನು ಉಲ್ಲಂಘಿಸಿ ಹಣ ಮಾಡುವ ದಂಧೆ ಎಲ್ಲೆಡೆ ವ್ಯಾಪಕವಾಗಿದೆ. ಇದನ್ನೇ ಅಂಬಾನಿಯವರೂ ಮಾಡಿದ್ದಾರೆ. ಈ ಬಗ್ಗೆ ಸಂಪಾದಕೀಯ ಸಕಾಲಿಕವಾಗಿದೆ.

ಜಾತೀಯ ಮನೋಧರ್ಮದ ಮೂಸೆಯಿಂದ ರೂಪಿಸಲ್ಪಟ್ಟ 'ಸುತ್ತೂರಿನ ಅಖಿಲ ಭಾರತ ವೀರಶೈವ ಮಹಾಸಭೆ'ಯ ಬಗ್ಗೆ ಪ್ರೊ|| ಬಿ. ವಿ. ವೀರಭದ್ರಪ್ಪನವರ ಲೇಖನ 'ಹೊಸತು'ವಿನಲ್ಲಿ ಮುದ್ರಣ ಕಾಣುವ ಅಗತ್ಯ ಇರಲಿಲ್ಲ. ಮೂರು ವರ್ಷ ಕರ್ನಾಟಕವನ್ನು ಅಸಮರ್ಥ ವಾಗಿ ಆಳಿರುವ ಯಡ್ಯೂರಪ್ಪನವರಿಗೆ ಚೈತನ್ಯ ತುಂಬಲು ಜಾತಿವಾದಿಗಳನ್ನು ಸಂಘಟಿಸಿದ್ದರಲ್ಲವೇ ಈ ಸಮ್ಮೇಳನದಲ್ಲಿ?

ಮೈಸೂರು — **ಕೊ. ಸು. ನರಸಿಂಹಮೂರ್ತಿ**

ಸಾಯಿಬಾಬಾರಂಥ ಮಹಾನ್ ವ್ಯಕ್ತಿ ನಮ್ಮ ಮುಂದೆ ಇಲ್ಲದಿರುವಾಗ ಅವರ ಅವಗುಣಗಳನ್ನು ಎತ್ತಿ ಹೇಳಿದರೆ ಅವರ ಭಕ್ತಾದಿಗಳ ಮನಸ್ಸಿಗೆ ನೋವುಂಟಾಗಬಹುದೆಂಬ ಎಚ್ಚರಿಕೆಯ ತೆರೆಯನ್ನು ಕಣ್ಣುಗಳಿಗೆ ಕಟ್ಟಿಕೊಂಡಾಗಲೂ, ಅವರ ಆಪ್ತ ಕೋಣೆಯಲ್ಲಿ ಸಿಕ್ಕಿರುವ ಚಿನ್ನಾಭರಣ ಮತ್ತು ನಗದು, ಅಪಾರ ಪ್ರಮಾಣದ ವಜ್ರ ವೈಡೂರ್ಯಗಳ ವಿಷಯ ತಿಳಿದಾಗ ಅಚ್ಚರಿಯಿಂದ ಮೂರ್ಛೆ ಬೀಳು ವಂತಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ೫೦೦ಕ್ಕೂ ಹೆಚ್ಚು ಜೊತೆ ಬಂಗಾರದ ಪಾದುಕೆಗಳಿವೆಯಂತೆ! ಇವನ್ನು ಧರಿಸಿ ಭಗವಾನರು ಎಲ್ಲಿ ತಿರುಗಾಡಿರಬಹುದು? ಚಿನ್ನದ ಮಂಚದ ಮೇಲೆ ಮಲಗಿದರೂ, ನೆಲದ ಮೇಲೆ ಮಲಗಿದರೂ ಸಕಾಲಕ್ಕೆ ಆರೋಗ್ಯವಂತನ ಬಳಿಗಷ್ಟೆ ನಿದ್ದೆ ಸುಳಿಯುತ್ತದೆಯಂತೆ! ಬರುಬರುತ್ತ ಯಾರು ಯೋಗಿ, ಯಾರು ಭೋಗಿ ಎಂಬ ವ್ಯತ್ಯಾಸ ಮರೆಯಾಗುತ್ತಿರು ವಂತಿದೆ. ಸಾಕಪ್ಪ ಇಂಥವರ ಸಹವಾಸ!

ಮೈಸೂರು — **ವಿಷಕಂಠಪ್ಪ**

ಪುಟಪರ್ತಿ ಸಾಯಿಬಾಬಾರವರು ನಿಧನರಾದ ಬಳಿಕ ಅವರ ಖಾಸಗಿ ಕೊಠಡಿಯನ್ನು ತೆರೆದು ನೋಡಲಾಗಿ ಅದರಲ್ಲಿ ಕೂಡಿಡಲಾಗಿದ್ದ ಬೃಹತ್ ಪ್ರಮಾಣದ ೯೮ ಕೆಜಿ ಚಿನ್ನ, ೨೦೭ ಕೆಜಿ ಬೆಳ್ಳಿ ಮತ್ತು ೧೨ ಕೋಟಿ ರೂಪಾಯಿ ನಗದು ದೊರಕಿದೆ ಎಂದು ವರದಿಯಾಗಿದೆ. ಈ ರೀತಿಯ ಸಂಗ್ರಹವು ಖಂಡಿತವಾಗಿಯೂ ಕಾನೂನುಬಾಹಿರ ಮತ್ತು ಅಕ್ರಮದಿಂದ ಕೂಡಿದ್ದಾಗಿರುತ್ತದೆ. ಆದುದರಿಂದ ಈ ಹಣ ಮತ್ತು ಚಿನ್ನಾಭರಣಗಳನ್ನು ಸರಕಾರವು ಕೂಡಲೆ ವಶಪಡಿಸಿಕೊಂಡು ಇದರ ಬಗ್ಗೆ ಒಂದು ಉನ್ನತಮಟ್ಟದ ತನಿಖೆಯನ್ನು ನಡೆಸುವ ಅಗತ್ಯವಿದೆ. ಈ ಹಿಂದೆಯೇ ಅಲ್ಲಿ ನಡೆಯುತ್ತಿರುವ ಅಕ್ರಮ ವ್ಯವಹಾರಗಳ ಮತ್ತು ಅಂತರರಾಷ್ಟ್ರೀಯ ಕಳ್ಳಸಾಗಣಿಕೆಯ ಬಗ್ಗೆ ದೂರು ದಾಖಲಿಸಿ ನ್ಯಾಯಾಲಯದಲಿ ದಾವೆ ಹೂಡಿದ್ದೂ ಇದೆ. ಸಾಯಿಬಾಬಾರ ಸಾವಿನ ಪ್ರಕರಣ ಮತ್ತು ಈ ಬೃಹತ್ ಪ್ರಮಾಣದ ಧನದ ಶೇಖರಣೆಯು ಅನೇಕ ಸಂಶಯಗಳಿಗೆ ಕಾರಣ ವಾಗಿದೆ. ಆದುದರಿಂದ ಇವೆಲ್ಲಕ್ಕೂ ಸೂಕ್ತ ಉತ್ತರ ದೊರಕಿ ತಪ್ಪಿತಸ್ಥರನ್ನು ಬಂಧಿಸುವ ಕಾರ್ಯವೂ ಆಗಬೇಕಿದೆ.

ಮಂಗಳೂರು — **ಬಿ. ವಿ. ಕಕ್ಕಿಲ್ಲಾಯ**

# 'ಡಾ|| ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ ಧರ್ಮ-ಕರ್ಮ-ಜಿಜ್ಞಾಸೆ'

## – ಒಂದು ಪ್ರತಿಕ್ರಿಯೆ

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯನವರು ತಮ್ಮ 'ಡಾ|| ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ ಧರ್ಮ-ಕರ್ಮ-ಜಿಜ್ಞಾಸೆ' ಎಂಬ ವಿಮರ್ಶಾತ್ಮಕ ಕೃತಿಯಲ್ಲಿ ಶ್ರೀಯುತ ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ಸನಾತನ ಹಿಂದೂ ಧಾರ್ಮಿಕ ನಂಬಿಕೆಗಳು, ಕಟ್ಟುಪಾಡುಗಳು ಮತ್ತು ಧೋರಣೆಗಳನ್ನು ಪ್ರತಿಪಾದಿಸಿರುವ ತಂತ್ರವನ್ನು ಸ್ಪಷ್ಟವಾಗಿ ಬಯಲು ಮಾಡಿದ್ದಾರೆ. ಆ ಕುರಿತು ಸಿ. ಎನ್. ರಾಮಚಂದ್ರನ್ ಅವರ ಲೇಖನವೂ ಬಂದಿದೆ.

ಭೈರಪ್ಪನವರು ತಮ್ಮ ತಾತ್ವಿಕ ಧೋರಣೆಗಳ ಮತ್ತು ನಿಲುವುಗಳ ಪ್ರಚಾರಕ್ಕಾಗಿ ಕಲ್ಪನಾಪ್ರಧಾನವಾದ ಕನ್ನಡ ಸಾಹಿತ್ಯ ಪ್ರಕಾರಗಳಲ್ಲೊಂದಾದ ಕಾದಂಬರಿಯನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇದಕ್ಕೆ ಬಹುಶಃ ಗಂಭೀರ ವೈಚಾರಿಕ ಲೇಖನಗಳ ಓದುಗರ ಸಂಖ್ಯೆಗಿಂತ ಕಾದಂಬರಿಯ ಓದುಗರ ಸಂಖ್ಯೆಯ ವ್ಯಾಪ್ತಿ ಹೆಚ್ಚಾಗಿರುವುದೇ ಒಂದು ಕಾರಣವಿರಬಹುದು. ಅವರ ಕಥಾನಿರೂಪಣೆಯ ಶೈಲಿ ಪರಿಣಾಮಕಾರಿ ಮತ್ತು ಆಕರ್ಷಣೀಯ. ಆದರೆ ಅವರ ಸಿದ್ಧಾಂತಗಳು ಮೌಲಿಕವೆ ಮತ್ತು ಅವರ ಕತೆಗಳು ಧರ್ಮ-ಅಧರ್ಮ ಕುರಿತು ಗಂಭೀರ ಚಿಂತನೆ ನಡೆಸಿವೆಯೆ? ಸನಾತನ ಹಿಂದೂ ಧಾರ್ಮಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಕೆಲವು ಕಟ್ಟುಪಾಡುಗಳು, ಆಚರಣೆಗಳು, ನಂಬಿಕೆಗಳು ಮತ್ತು ಮೌಲ್ಯಗಳು ಸರ್ವಕಾಲಕ್ಕೂ ಸಲ್ಲುವಂಥವು ಹಾಗೂ ಪ್ರಶ್ನಾತೀತ ಎಂಬ ನಿಲುವನ್ನು ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ಬರುವ ಪಾತ್ರಗಳ ಮೂಲಕ ಪ್ರಚುರಪಡಿಸಿದ್ದಾರೆ. ಅದೇ ಅವರ ಧೋರಣೆ ಸಹ.

ಅವರು ತಮ್ಮ 'ಧರ್ಮಶ್ರೀ' ಕಾದಂಬರಿಯಲ್ಲಿ ಮತಾಂತರಗೊಂಡ ಯಾವುದೇ ವ್ಯಕ್ತಿಯ ಜೀವನವು ಅತಂತ್ರಗೊಂಡು ನೆಮ್ಮದಿಯನ್ನು ದೂರಮಾಡುತ್ತದೆ ಎಂಬ ಅಭಿಪ್ರಾಯವನ್ನು ಮೂಡಿಸಿದ್ದಾರೆ. ಸಾಮಾಜಿಕ ಅವಹೇಳನ ಮತ್ತು ಎರಡು ಮತಧಾರ್ಮಿಕ ಸಮುದಾಯಗಳ ಜೀವನಶೈಲಿಗಳ ನಡುವಣ ವೈರುಧ್ಯಗಳಿಂದಾಗಿ ತೊಳಲಾಟಕ್ಕೆ ಸಿಲುಕಿದ ವ್ಯಕ್ತಿಯ ಜೀವನ ಅಸಹನೀಯವಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಿದ್ದಾರೆ. ಆದರೆ, ವಾಸ್ತವದಲ್ಲಿ ಅಂತರಮತಧಾರ್ಮಿಕ ವಿವಾಹವನ್ನು ಆಯ್ಕೆ ಮಾಡಿಕೊಂಡ ಎಷ್ಟೋ ದಂಪತಿಗಳು ನೆಮ್ಮದಿಯ ಜೀವನ ನಡೆಸುತ್ತಿರುವ ಉದಾಹರಣೆಗಳು ಇವೆ. ಅದು ಇವರಿಗೆ ಅಪಥ್ಯ.

ಇನ್ನು 'ವಂಶವೃಕ್ಷ' ಕಾದಂಬರಿಯಲ್ಲಿನ ಉದ್ದಾಮ ಪಂಡಿತನಾದ ಶ್ರೀನಿವಾಸ ಶ್ರೋತ್ರಿ ತಾನು ನಂಬಿದ ವಂಶದ ಮೂಲ ಗೋತ್ರ ಹುಸಿ ಎಂದು ಗೊತ್ತಾದ ಮೇಲೆ ಮಾನಸಿಕ ಕ್ಷೋಭೆಗೆ ಒಳಗಾಗುತ್ತಾನೆ. ಈ ಕಾದಂಬರಿಯ ಮತ್ತೊಂದು ವಿವಾದಾತ್ಮಕ ವಿಷಯ ವಿಧವಾ ವಿವಾಹ. ಭೈರಪ್ಪನವರು ಕಾತ್ಯಾಯನಿ ಮತ್ತು ರಾಜಾರಾಯರ ದಾಂಪತ್ಯ ಜೀವನದಲ್ಲಿ ತುಮುಲಗಳನ್ನು ಸೃಷ್ಟಿಸಿ ವಿಧವಾ ವಿವಾಹ ಅಷ್ಟೇನೂ ಸಂತಸವನ್ನು ತರಲಾರದು ಎಂಬ ಅಭಿಪ್ರಾಯವನ್ನು ಮೂಡಿಸಲು ಯತ್ನಿಸಿದ್ದಾರೆ. ಡಾ|| ಕೆ. ಎಲ್.ಜಿ. ಅವರು ಈ ಕಾದಂಬರಿಯಲ್ಲಿನ ಕೆಲವು ಘಟನೆಗಳನ್ನು ಕಾದಂಬರಿಕಾರರು ಉದ್ದೇಶಪೂರ್ವಕವಾಗಿ ತಮ್ಮ ನಿಲುವುಗಳನ್ನು ಸಮರ್ಥಿಸಿಕೊಳ್ಳಲು ತುರುಕಿದ್ದಾರೆ ಎಂದು ಸಕಾರಣವಾಗಿಯೇ ಅಭಿಪ್ರಾಯಪಟ್ಟಿದ್ದಾರೆ.

ವಾಸ್ತವ ಸಂಗತಿಯೆಂದರೆ, ಆಧುನಿಕ ಸಾಮಾಜಿಕ ಸನ್ನಿವೇಶದಲ್ಲಿ, ಓರ್ವ ವ್ಯಕ್ತಿಯ ಗೋತ್ರದ ವಿವರ ಕುರಿತು ದೈನಂದಿನ ಜೀವನದಲ್ಲಿ ಮತ್ತೆ ಮತ್ತೆ ಪ್ರಸ್ತಾಪ ಮಾಡಬೇಕಾದ ಸಂದರ್ಭಗಳು ಬರುವುದಿಲ್ಲ. ದೇವಾಲಯಗಳಲ್ಲಿ ಗೋತ್ರದ ವಿವರಗಳನ್ನು ಕೇಳಿದಾಗ ಭಕ್ತರು ತಡವರಿಸುವುದು ಅಪರೂಪವೇನಲ್ಲ. ಅಂತಹ ಗೋತ್ರ ಮತ್ತು ಜನ್ಮ ನಕ್ಷತ್ರಗಳ ವಿವರಗಳು ಯಾವುದೇ ವ್ಯಕ್ತಿಯ ಜೀವನದಲ್ಲಿ ಬಹಳ ಮುಖ್ಯವಾದ ಅಂಶಗಳೆಂದು ಭೈರಪ್ಪನವರು ಬಿಂಬಿಸಿರುವುದು ಪ್ರಶ್ನಾರ್ಹವಾಗಿದೆ.

ಭೈರಪ್ಪನವರ ಸನಾತನ ಹಿಂದೂ ಧಾರ್ಮಿಕ ಚಿಂತನೆಯ ಮತ್ತೊಂದು ಮಜಲನ್ನು ಪರಿಚಯಿಸುವ ಕಾದಂಬರಿ 'ತಬ್ಬಲಿಯು ನೀನಾದೆ ಮಗನೆ'. ಸನಾತನ ಹಿಂದೂ ಧಾರ್ಮಿಕ ಸಂಸ್ಕೃತಿಯ ನೆಲೆಯಲ್ಲಿ ಗೋವಿಗೆ ನೀಡಿರುವ ಪಾವಿತ್ರ್ಯತೆಯನ್ನು ಈ ಕಾದಂಬರಿಯಲ್ಲಿ ಭೈರಪ್ಪನವರು ಎತ್ತಿಹಿಡಿಯಲು ಯತ್ನಿಸಿದ್ದಾರೆ. ಗೋ ಪೂಜೆ, ಗೋ ಸಂರಕ್ಷಣೆ ಮತ್ತು ಗೋಹತ್ಯೆ ನಿಷೇಧಗಳು ಕಾದಂಬರಿಯ ಕೇಂದ್ರಬಿಂದುವಾಗಿವೆ. ಗೋವಿನ ಬಗ್ಗೆ ಗೌರವ ಮತ್ತು ಕನಿಕರಕ್ಕಿಂತ ಸಂಪ್ರದಾಯ ಇವರಿಗೆ ಆಪ್ತ. ಪೌಷ್ಟಿಕಾಂಶವನ್ನುಳ್ಳ ಹಸುವಿನ ಹಾಲು ದೈನಂದಿನ ಜೀವನದಲ್ಲಿ ಒಂದು ಭೋಗ್ಯವಸ್ತುವಾಗಿ ಅಗತ್ಯ ಎನಿಸದಿದ್ದರೂ, ಭೈರಪ್ಪನವರು ವ್ಯಕ್ತಪಡಿಸಿರುವ ಅತ್ಯಂತ ಸೂಕ್ಷ್ಮ ಸಂವೇದನೆಗಳು ಗೋವಿನ ವಿಷಯದಲ್ಲಿ ಪ್ರಸ್ತುತವೆನಿಸುವುದಿಲ್ಲ. ಪಶುಸಂಗೋಪನೆ, ಇಂದು ಒಂದು ಉದ್ಯಮವಾಗಿ ಬೆಳೆದಿದೆ. ಗೋವು ಒಂದು ಪವಿತ್ರಪ್ರಾಣಿ ಮತ್ತು ಅದನ್ನು ಪೋಷಿಸುವುದು ಪವಿತ್ರ ಕರ್ತವ್ಯ ಎಂಬುದಕ್ಕಿಂತ ರೈತನಿಗೆ, ಇಂದು ಹಸುವನ್ನು ಪೋಷಿಸಲು ತಗಲುವ ಮಾಸಿಕ ವೆಚ್ಚ ಮತ್ತು ಹಸುವಿನಿಂದ ಬರುವ ಮಾಸಿಕ ಆದಾಯ ಮುಖ್ಯವಾದುವು. ಬೆಂಗಳೂರು ನಗರದ ಬೆಳವಣಿಗೆಯನ್ನು ಗಮನಿಸಿದರೆ, ಹಸುಗಳನ್ನು ಸಾಕುವ ಕುಟುಂಬಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ. ಡಾ|| ಕೆ. ಎಲ್. ಜಿ. ಅವರು ಗಮನಿಸಿರುವಂತೆ ಕಾದಂಬರಿಯಲ್ಲಿ ಕೆಲವು ಸನ್ನಿವೇಶಗಳನ್ನು ಮನುಷ್ಯನ ಜೀವನದಲ್ಲಿ ಗೋವಿನ ಮಹತ್ವವನ್ನು ಸಾರಲು ಸೃಷ್ಟಿಸಲಾಗಿದೆ. ಬದಲಾಗಿ ಪಶುಸಂಗೋಪನೆಯನ್ನು ಒಂದು ಲಾಭದಾಯಕ ಉದ್ಯಮವನ್ನಾಗಿ ಪರಿವರ್ತಿಸಲು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಹೆಚ್ಚು ಚರ್ಚೆ ನಡೆಯಬೇಕಿದೆ. 'ಅಮುಲ್' ನಗರದಲ್ಲೇ ಇದ್ದ ಭೈರಪ್ಪನವರು ಇದನ್ನು ತಿಳಿದಿರಬೇಕು.

ಸನಾತನ ಹಿಂದೂ ಧಾರ್ಮಿಕ ನಂಬಿಕೆಗಳಲ್ಲಿ ಪ್ರಬಲವಾದದ್ದು 'ಪುನರ್ಜನ್ಮ'. ಭೈರಪ್ಪನವರು ತಮ್ಮ 'ನಾಯಿ-ನೆರಳು' ಕಾದಂಬರಿಯಲ್ಲಿ ವಾಸ್ತವ ಜಗತ್ತಿನ ಪರಿಧಿಯನ್ನು ದಾಟಿ, ಪಾತ್ರಗಳನ್ನು ಮತ್ತು ಸನ್ನಿವೇಶಗಳನ್ನು ಪೋಷಿಸಿದ್ದಾರೆ. ಈಗಾಗಲೇ ಮನೋವಿಜ್ಞಾನ ಸಂಶೋಧನೆ 'ಪುನರ್ಜನ್ಮ' ಪ್ರಕರಣಗಳ ತನಿಖೆ ನಡೆಸಿ ವಿವರಣೆಗಳನ್ನು ನೀಡಿದೆ. ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವ ನಂಬಲಸಾಧ್ಯವಾದ ಆಚರಣೆಗಳನ್ನು ಅಗತ್ಯಕ್ಕಿಂತ ಹೆಚ್ಚು ಮಹತ್ವಪೂರ್ಣವಾಗಿ ವರ್ಣಿಸಿದ್ದಾರೆ. 'ಪುನರ್ಜನ್ಮ'ದ ಸಾಧ್ಯತೆಯನ್ನು ವೈಚಾರಿಕ ಸ್ತರದಲ್ಲಿ ಪರಿಶೀಲಿಸುವ ಪ್ರಯತ್ನ ನಡೆದಿಲ್ಲ.

ಭೈರಪ್ಪನವರು ತಮ್ಮ ಮತ್ತೊಂದು ಕಾದಂಬರಿ 'ದಾಟು'ವಿನಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯ ಜಾತಿ ಸಂಘರ್ಷವನ್ನು ಕಥಾವಸ್ತುವನ್ನಾಗಿ ಆಯ್ಕೆಮಾಡಿಕೊಂಡಿದ್ದಾರೆ. ಜಾತಿ ವ್ಯವಸ್ಥೆ ಹುಟ್ಟುಹಾಕಿದ ತಾರತಮ್ಯಕ್ಕಿಂತ ಬ್ರಾಹ್ಮಣ ಕುಟುಂಬ ಅನುಭವಿಸುವ ಸಂಕಷ್ಟಗಳಿಗೆ ಪ್ರಾಮುಖ್ಯತೆ ನೀಡಿ ಅನುಕಂಪ ಮೂಡಿಸುವ ಪ್ರಯತ್ನ ಮಾಡಿದ್ದಾರೆ. ಭೈರಪ್ಪನವರು ದಲಿತ ಚಳುವಳಿಗಳನ್ನು ಗಂಭೀರವಾಗಿ ಪರಿಗಣಿಸಿಲ್ಲ. ಉದಾಹರಣೆಗೆ, ಮೋಹನದಾಸನು ತನ್ನ ಸಹಚರರೊಂದಿಗೆ ತಿರುಮಲ ದೇವಾಲಯವನ್ನು ಪ್ರವೇಶಿಸಿದಾಗ ದೇವರ ವಿಗ್ರಹದ ಪ್ರಖರಕಾಂತಿಯ ಬೆಳಕನ್ನು ತಾಳಲಾರದೆ ತಲೆ ಸುತ್ತಿಬಂದು ಬೀಳುತ್ತಾನೆ. ಈ ಸನ್ನಿವೇಶದ ಮೂಲಕ, ದಲಿತರು ದೇವಾಲಯ ಪ್ರವೇಶದ ಹಕ್ಕನ್ನು ಚಲಾಯಿಸಿದರೆ ಒಳಿತಾಗುವುದಿಲ್ಲ ಎಂಬ ಸಂದೇಶವನ್ನು ನೀಡಿದ್ದಾರೆ. ಇದರಿಂದ ದೇಶವೇ ತಿರುಗಿ ಬೀಳಬೇಕು.

ಭೈರಪ್ಪನವರು ಸನಾತನ ಹಿಂದೂ ಧಾರ್ಮಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳ ಪ್ರತಿಪಾದನೆಯಲ್ಲಿ ಅಚಲ ಶ್ರದ್ಧೆಯುಳ್ಳವರು. ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ಚರ್ಚಿಸಿರುವ ಮತಾಂತರ, ಪುನರ್ಮತಾಂತರ, ಗೋ ಪೂಜೆ, ಗೋ ಸಂರಕ್ಷಣೆ, ಯಜಮಾನಿಕೆ, ವ್ಯಕ್ತಿ ಸ್ವಾತಂತ್ರ್ಯ, ನಂಬಿಕೆ, ವೈಚಾರಿಕತೆ ಮತ್ತು ಜಾತಿ ವ್ಯವಸ್ಥೆಯ ಸಾಮಾಜಿಕ ತುಮುಲ ಎಂಬ ವಿಷಯಗಳನ್ನು ಸರಳವಾಗಿ ಅರ್ಥೈಸಲು ಆಗುವುದಿಲ್ಲ.

ಭೈರಪ್ಪನವರ ತಾತ್ವಿಕ ಧೋರಣೆಗಳನ್ನು ಚಾರಿತ್ರಿಕ ಹಾಗೂ ವೈಚಾರಿಕ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡದಿದ್ದಲ್ಲಿ, ಪಾರಂಪರಿಕ ಮೌಢ್ಯಗಳನ್ನು ಅನವರತವಾಗಿ ಮುಂದುವರಿಸಲು ಭದ್ರ ತಳಹದಿ ಒದಗಿಸಿದಂತಾಗುತ್ತದೆ.

ಬೆಂಗಳೂರು — **ಶಂಕರನಾರಾಯಣ**

ಮೂಲ : ಫಿದೆಲ್ ಕ್ಯಾಸ್ಟ್ರೋ

# ಪರಿಸರದ ಪರದಾಟ



**ಫಿದೆಲ್ ಕ್ಯಾಸ್ಟ್ರೋ ಅವರ ಬಗ್ಗೆ ಏನೊಂದು ವಿಶೇಷ ಬರಹವೂ ಕೇವಲ ಅನಾವಶ್ಯಕ. ಅವರ ವ್ಯಕ್ತಿತ್ವ, ಸಾಧನೆ, ದಿಟ್ಟತನ, ಮಾರ್ಗದರ್ಶಿತ್ವ ಈಗಾಗಲೇ ಚಾಲ್ತಿ ಚರಿತ್ರೆಯ ಒಂದು ಪ್ರಜ್ವಲ ಭಾಗವಾಗಿದೆ. ಈಗ ಮೂರು ನಾಲ್ಕು ವರ್ಷಗಳಿಂದ ತೀವ್ರ ಅನಾರೋಗ್ಯಕ್ಕೆ ಗುರಿಯಾಗಿ, ಕ್ಯೂಬಾದ ಅಧ್ಯಕ್ಷರಾಗಿ ನಿವೃತ್ತಿ ಪಡೆದರೂ ಅವರು ಯಾವ ರೀತಿಯಲ್ಲೂ ತಮ್ಮ ಅಧ್ಯಯನ, ಗಾಢಚಿಂತನೆ, ಜಾಗತಿಕ ಆಗುಹೋಗುಗಳ ಒಳಇಂಗಿತಗಳ ನಿರೂಪಣೆ ಮತ್ತು ಇವೆಲ್ಲದರ ಬಗ್ಗೆ ನಿರಂತರವಾಗಿ ಬರಹ – ಇವುಗಳಾವುದನ್ನೂ ಬಿಡದೆ ಇಂದಿಗೂ ಒಂದು ರೀತಿಯ ಮಾರ್ಗದರ್ಶಿತ್ವವನ್ನು ಮುಂದುವರಿಸುತ್ತಲೇ ಇದ್ದಾರೆ, ಪ್ರತಿದಿನ ಬರೆಯುತ್ತಾರೆ.**

**ಕಾ**ಸ್ಟ್ರೋ ಬರಹಗಳಲ್ಲೆಲ್ಲಾ ಕೇಂದ್ರಸ್ಥಾನ ಪಡೆದ ವಿಷಯ : ''ಆ ಚಕ್ರಾಧಿಪತ್ಯ''. ಅದು ಅಮೆರಿಕ ಎಂದು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ಇದೊಂದು ವಿಶ್ವಕ್ಕಿರುವ ಅಪಾಯ, ಈ ಚಕ್ರಾಧಿಪತ್ಯ. ಇನ್ನೊಂದು ಭಯಂಕರ ಅಪಾಯದ ವಿಷಯವೂ ಅವರ ಚಿಂತನೆಯಲ್ಲಿ, ಬರಹಗಳಲ್ಲಿ, ಪ್ರಾಮುಖ್ಯವಾದುದು; ಅವರೇ ಹೇಳುವಂತೆ, ಮಾನವ ಪ್ರಭೇದಕ್ಕೆ ಇರುವ ಈ ಅಪಾಯ ನಮ್ಮ ಕಣ್ಣೆದುರಿಗೇ ಆಗಿಹೋಗುತ್ತಿದೆ : ಅದೇ ಪರಿಸರದ ನಾಶ. ಇತ್ತೀಚಿನ ಒಂದು ಬರಹದಲ್ಲಿ ''ಈ ಬೇರೊಂದು ದುರಂತ'' ಎಂಬ ಶೀರ್ಷಿಕೆಯಲ್ಲಿ ಹೀಗೆ ತಿಳಿಸುತ್ತಾರೆ :

''...ಅತ್ಯಂತ ಪ್ರಸಿದ್ಧ ಮತ್ತು ಬಹುತಿಳಿವುಳ್ಳ ಅಂತರ ರಾಷ್ಟ್ರೀಯ ವ್ಯಕ್ತಿಗಳ ಪಾಲುಗಾರಿಕೆ ಒಳಗೊಂಡ, ಫ್ರೆಂಚ್ ನಿರ್ದೇಶಕ ಯಾನ್ ಆರ್ಥೂಸ್ ಬೆರ್‌ತ್ರಾನ್ ಅವರ ಅತ್ಯುತ್ತಮವಾದ ಸಾಕ್ಷ್ಯಚಿತ್ರದ ಬಗ್ಗೆ ಮಾತನಾಡಿದೆ; ಅದು ಮಾನವ ಪ್ರಭೇದಕ್ಕೆ ಇರುವ ಪರಿಸರನಾಶದ ಭಯಂಕರ ಅಪಾಯ ಕುರಿತದ್ದು.'' ಈ ಸಾಕ್ಷ್ಯಚಿತ್ರವು ಪರಿಸರನಾಶ ಕುರಿತು ಸ್ಪಷ್ಟವಾಗಿ, ನೇರವಾಗಿ ಮತ್ತು ದೃಢವಾಗಿ ಮುಂದಿಡುವ ನಿಜಸಂಗತಿಗಳನ್ನು ಕಾಸ್ಟ್ರೋ ತಮ್ಮ ಲೇಖನದಲ್ಲಿ ನಿರೂಪಿಸಿದ್ದಾರೆ. ಈ ಅನುವಾದ ಕಾಸ್ಟ್ರೋ ಹೇಳಿದ ಸಾಕ್ಷ್ಯಚಿತ್ರ ತಿಳಿಸುವ ಸಂಗತಿಗಳನ್ನು ಕುರಿತದ್ದು.

**ಪರಿಸರದ ಅವಸ್ಥೆ**

ಭೂಮಿಯ ಮೇಲಿನ ಬದುಕಿನ ಮಹಾ ಉತ್ತೇಜಕ/ ಅಪಾಯಕಾರಿ ಅನುಭವದಲ್ಲಿ ಪ್ರತಿ ಪ್ರಭೇದಕ್ಕೂ ಒಂದು ಪಾತ್ರವಿದೆ, ಒಂದು ಸ್ಥಾನವಿದೆ. ಅವುಗಳಲ್ಲಿ ಯಾವುದೊಂದೂ ಕೆಲಸಕ್ಕೆ ಬಾರದ್ದಲ್ಲ ಅಥವಾ ಹಾನಿಕರವಾದುದಲ್ಲ; ಅವೆಲ್ಲಾ ಒಂದಕ್ಕೊಂದು ಸಮದೂಗಿಸುತ್ತವೆ. ಈಗ, ಇಲ್ಲೇ ನೀವು, ಬುದ್ಧಿವಂತ ಮಾನವ ಜೀವಿ – ಹೋಮೋ ಸೇಪಿಯನ್ಸ್, ಚರಿತ್ರೆ ಆರಂಭಿಸುವುದು. ಭೂಮಿ ಒದಗಿಸಿದ ೪,೦೦೦ ದಶಲಕ್ಷ ವರ್ಷಗಳ, ನಂಬಲಾಗದಷ್ಟು ಭಾರಿ ಪೂರ್ವಾರ್ಜಿತದಿಂದ ಉಪಯೋಗ ಪಡೆಯುತ್ತಿ. ನಿನ್ನ ವಯಸ್ಸು ಕೇವಲ ೨,೦೦,೦೦೦ ವರ್ಷಗಳು, ಆದರೆ ನೀನು ಈಗಾಗಲೇ ಪ್ರಪಂಚದ ಮುಖಭಾವವನ್ನು ಬದಲಾಯಿಸಿಬಿಟ್ಟದ್ದಿ.

ಬೇಸಾಯ ಕಂಡುಹಿಡಿದದ್ದು ನಮ್ಮ ಚರಿತ್ರೆಯನ್ನು ಮಾರ್ಪಾಡು ಮಾಡಿತು. ಅದು ಆಗಿ ೧೦,೦೦೦ ವರ್ಷಗಳೂ ಆಗಿಲ್ಲ. ಬೇಸಾಯ ನಮ್ಮ ಮೊದಲ ಮಹಾ ಕ್ರಾಂತಿ. ಅದರ ಫಲವೇ ಮೊದಲ ಹೆಚ್ಚುವರಿ/ಉಳಿಕೆ, ಮತ್ತು ಅದು ಪಟ್ಟಣಗಳಿಗೆ ಮತ್ತು ನಾಗರಿಕತೆಗೆ ಜನ್ಮ ಕೊಟ್ಟಿತು. ಸಾವಿರಾರು ವರ್ಷಗಳ ಆಹಾರ ಹುಡುಕಾಟದ ನೆನಪುಗಳು ಮಂಕಾದವು. ಧಾನ್ಯಗಳನ್ನು ಜೀವನದ ಹುದುಗಾಗಿ ಮಾಡಿಕೊಂಡು ವಿವಿಧ ಧಾನ್ಯಗಳ ತಳಿಗಳನ್ನು ತೀವ್ರವಾಗಿ ಹೆಚ್ಚಿಸಿದ್ದಲ್ಲದೆ, ಅವುಗಳನ್ನು ನಮ್ಮ ಭೂಮಿಗೆ ಮತ್ತು ವಾಯುಗುಣಕ್ಕೆ ಹೊಂದಿಸುವುದನ್ನು ಕಲಿತೆವು. ನಾವೂ ಸಹ ಭೂಮಿಯ ಮೇಲೆ ಎಲ್ಲ ಪ್ರಭೇದಗಳಂತೆಯೇ. ನಮ್ಮ ಪ್ರಮುಖ, ದೈನಿಕ ಆಸಕ್ತಿ ನಮ್ಮ ಆಹಾರಸೇವನೆ. ಭೂಮಿಯ ಉದಾರತೆ ಕಮ್ಮಿಯಾದಾಗ, ನೀರು ಸಾಕಾದಷ್ಟು ಒದಗದಿದ್ದಾಗ, ಬದುಕಿರುವುದಕ್ಕಾಗಿ ಭೂಮಿಯಿಂದ ಸಾಕಾದಷ್ಟನ್ನು ದಕ್ಕಿಸಿಕೊಳ್ಳಲು ಮಹತ್ತರ ಶ್ರಮ ತೆಗೆದುಕೊಳ್ಳಬಲ್ಲೆವು.

ಮಾನವಕುಲದ ಅರ್ಧ ಭಾಗ ಜಮೀನು ಕೆಲಸ ಮಾಡುವವರು; ಮುಕ್ಕಾಲು ಭಾಗ ಸ್ವಂತ ಕೈಗಳಿಂದ. ಅಪ್ಪಟ ಶಕ್ತಿ ಎಂದರೆ ನೂರು ದಶಲಕ್ಷ ವರ್ಷಗಳ ಹಿಂದೆ, ದಶಲಕ್ಷ ವರ್ಷಗಳ ಕಾಲ, ದಶಲಕ್ಷಗಟ್ಟಲೆ ಮರಗಿಡಗಳಿಂದ ಹಿಡಿದುಹಾಕಿದ ಸೂರ್ಯನ ಶಕ್ತಿ. ಅದೇ ಕಲ್ಲಿದ್ದಲು; ಅದು ಅನಿಲ. ಆದರೆ, ಎಲ್ಲಕ್ಕೂ ಮಿಗಿಲಾಗಿ, ಅದು ತೈಲ.

ಹಿಂದಿನ ೬೦ ವರ್ಷಗಳಲ್ಲಿ ಪ್ರಪಂಚದ ಜನಸಂಖ್ಯೆ ಹೆಚ್ಚುಕಮ್ಮಿ ತ್ರಿಗುಣವಾಗಿದೆ. ೨೦೦ ಕೋಟಿಗಿಂತಲೂ ಹೆಚ್ಚು ಜನ ನಗರಗಳನ್ನು ಸೇರಿದ್ದಾರೆ. ಪ್ರಪಂಚದ ಮೊದಲ ಬೃಹತ್ ಮಹಾನಗರವಾದ ನ್ಯೂಯಾರ್ಕ್, ಭೂಮಿಯ ಮನುಷ್ಯನ ಚಾತುರ್ಯದಿಂದ ಒದಗಿಸುವ

ಶಕ್ತಿಯನ್ನು ಸ್ವಾರ್ಥ ಉಪಯೋಗಕ್ಕೆ ಬಳಸುವ ಒಂದು ಸಂಕೇತ : ದಶಲಕ್ಷಗಟ್ಟಲೆ ಬಂದ ವಲಸೆಗಾರರ ಶ್ರಮ, ಕಲ್ಲಿದ್ದಲಿನ ಶಕ್ತಿ, ಅತ್ಯಗತ್ಯವಾದ ತೈಲ ಶಕ್ತಿ. ''ಕರಿ ಚಿನ್ನ''ದ ಅದ್ಭುತ, ಕ್ರಾಂತಿಕಾರಿ ಬಲದ 'ಸವಾರಿ' ಮಾಡಿದ ಪ್ರಥಮ ದೇಶ ಅಮೆರಿಕ ಸಂಯುಕ್ತ ಸಂಸ್ಥಾನ. ಗ್ರಾಮಾಂತರ ಪ್ರದೇಶಗಳಲ್ಲಿ ಯಂತ್ರಗಳು ಮನುಷ್ಯರನ್ನು ಸ್ಥಳಾಂತರಗೊಳಿಸಿದವು. ಒಂದು ಲೀಟರ್ ತೈಲ ಕೊಡುವ ಶಕ್ತಿ ಸಾಮರ್ಥ್ಯ ೧೦೦ ಜೋಡಿ ಕೈಗಳು ೨೪ ಗಂಟೆ ಕಾರ್ಯೋನ್ಮುಖವಾದಾಗ ತಯಾರಿಸಬಲ್ಲ ಶಕ್ತಿಗೆ ಸಮ. ಅವರ ಧಾನ್ಯ ಉತ್ಪಾದನೆ ೨೦೦ ಕೋಟಿ ಜನರಿಗೆ ಅನ್ನ ನೀಡಬಲ್ಲದು. ಆದರೆ ಧಾನ್ಯದ ಬಹುಭಾಗ ಜನರ ಆಹಾರಕ್ಕೆ ಬಳಕೆಯಾಗುವುದಿಲ್ಲ. ಇಲ್ಲಿ ಮತ್ತು ಇತರ ಕೈಗಾರಿಕೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಧಾನ್ಯವನ್ನು ಪ್ರಾಣಿಗಳ ತಿನಿಸು ಅಥವಾ ಜೈವಿಕ ಇಂಧನಗಳಿಗೆ ಪರಿವರ್ತಿಸುತ್ತಾರೆ. ದೃಷ್ಟಿಗೆ ಗೋಚರವಾಗುವಷ್ಟು ದೂರದವರೆಗೂ, ಕೆಳಗೆ ರಸಗೊಬ್ಬರ ಮೇಲೆ ಪ್ಲಾಸ್ಟಿಕ್ : ಸ್ಪೇನ್‌ನ ಅಲ್ಮೇರಿಯದ ಗಾಜಿನ ಮನೆಗಳು ಇಡೀ ಯೂರೋಪಿಗೆ ತರಕಾರಿ ತೋಟಗಳಾಗಿವೆ. ಈ ಸಮಾನ ಅಳತೆಯ ತರಕಾರಿಗಳ ಪಟ್ಟಣ ಪ್ರತಿದಿನ ನೂರಾರು ಸರಕು ವಾಹನಗಳನ್ನು ಎದುರುನೋಡುತ್ತಿರುತ್ತೆ; ವಾಹನಗಳು ಖಂಡದ ಬೃಹತ್ ಮಾರುಕಟ್ಟೆಗಳಿಗೆ ಈ ತರಕಾರಿಗಳನ್ನು ಕೊಂಡೊಯ್ಯುತ್ತವೆ. ಒಂದು ದೇಶ ಹೆಚ್ಚು ಅಭಿವೃದ್ಧಿಯಾದಷ್ಟೂ ಅಲ್ಲಿನ ನಿವಾಸಿಗಳು ಹೆಚ್ಚು ಹೆಚ್ಚು ಮಾಂಸವನ್ನು ಆಹಾರಕ್ಕೆ ಉಪಯೋಗಿಸುತ್ತಾರೆ. ಜಗತ್ತಿನ ಇಂತಹ ಬೇಡಿಕೆಯನ್ನು ಹೇಗೆ ಪೂರೈಸಲು ಸಾಧ್ಯ, ಬಂದಿ-ಶಿಬಿರದ ಮಾದರಿಯ ಪಶು ಜಮೀನುಗಳನ್ನು ಅವಲಂಬಿಸದೆ ? ಆಗುಹೋಗುಗಳು ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ವೇಗದಲ್ಲಿ ಮುಂದುವರಿಯುತ್ತವೆ. ಇದು ಪಶುಗಳ ಜೀವನ-ಆವರ್ತದ ಮೇಲೆ ಹೇರುವ ಪ್ರಭಾವವಿದ್ದಂತೆ – ಅವುಗಳು ಜೀವಮಾನ ಪರ್ಯಂತ ಒಂದು ಹುಲ್ಲುಗಾವಲನ್ನೂ ಕಡೆಗಣ್ಣಿನಿಂದಲೂ ಕಾಣದಿರುವ ಸಂಭವವೇ ಹೆಚ್ಚು. ಲಕ್ಷಗಟ್ಟಲೆ ಪಶುಗಳಿಂದ ಕಿಕ್ಕಿರಿದು ತುಂಬಿರುವ ಈ ಆಹಾರ ನಿವೇಶನಗಳಲ್ಲಿ ಒಂದು ದಳ ಹುಲ್ಲೂ ಬೆಳೆಯುವುದಿಲ್ಲ. ದೇಶದ ಮೂಲೆ ಮೂಲೆಯಿಂದಲೂ ಬರುವ ವಾಹನಗಳ ದೊಡ್ಡ ಗುಂಪೇ ಟನ್ನುಗಟ್ಟಲೆ ಧಾನ್ಯ, ಸೋಯಾಬೀನ್ ಆಹಾರ, ಪ್ರೋಟೀನ್‌ನ ಕಣ ಇವುಗಳನ್ನೆಲ್ಲ ಕೊಂಡುತರುತ್ತವೆ; ಇವೆಲ್ಲವನ್ನು ಟನ್ನುಗಟ್ಟಲೆ ಮಾಂಸವಾಗಿ ಪರಿವರ್ತಿಸಲಾಗುತ್ತದೆ. ಇದರ ಪರಿಣಾಮ : ಒಂದು ಕಿಲೋಗ್ರಾಂ ಆಲೂಗೆಡ್ಡೆ ಉತ್ಪತ್ತಿಗೆ ೧೦೦ ಲೀಟರ್ ನೀರು ಬೇಕು; ಒಂದು ಕಿಲೋ ಅಕ್ಕಿಗೆ ೪೦೦೦ ಲೀಟರ್; ಅದೇ ಒಂದು ಕಿಲೋ ದನದ ಮಾಂಸದ ಉತ್ಪತ್ತಿಗೆ ಬೇಕಾದ ನೀರು ೧೫೦೦೦ ಲೀಟರ್ – ಇದು ಅದರ ಉತ್ಪತ್ತಿ ಮತ್ತು ಸಾಗಾಣಿಕೆಯಲ್ಲಿ ಉರಿಸುವ ತೈಲವನ್ನು ಲೆಕ್ಕಿಸದೆ ! ಅಗ್ಗವಾದ ತೈಲದ ಅಂತಿಮ ಯಾವ ಕ್ಷಣದಲ್ಲಾದರೂ ಸಂಭವ, ಅದು ನಮಗೂ ಗೊತ್ತು ಕೂಡ; ಆದರೆ ನಾವು ಅದನ್ನು ನಂಬದೆ ತಿರಸ್ಕರಿಸುತ್ತೇವೆ. ೧೦೦ ಕಿಲೋಮೀಟರ್ ಹರಡಿರುವ ಲಾಸ್ ಏಂಜಲೀಸ್ ನಗರದಲ್ಲಿ ಹೆಚ್ಚುಕಮ್ಮಿ ಜನರಿರುವಷ್ಟೆ ಕಾರುಗಳಿವೆ. ಆ ನಗರವನ್ನು ನಕ್ಷತ್ರಗಳು ಥಳಥಳಿಸುವ ಗಗನವನ್ನಾಗಿ ಪರಿವರ್ತಿಸುವ ರಾತ್ರಿಯ ಒಂದು ಕೇವಲ ಮಸುಕಾದ ಪ್ರತಿಬಿಂಬ, ಹಗಲು. ಪೃಥ್ವಿಯ ಸೃಷ್ಟಿಯಿಂದಲೂ ಅದರ ಅಂತರಾಳದಲ್ಲಿ ಹೂತುಹೋಗಿರುವ ನಕ್ಷತ್ರಗಳ ಚೂರುಗಳಾದ ಖನಿಜಗಳನ್ನು ಯಂತ್ರಗಳು ಎಲ್ಲೆಡೆಯಲ್ಲೂ ಅಗೆಯುತ್ತಿವೆ, ತೆಗೆದುಹಾಕುತ್ತಿವೆ, ಕಸಿದುಕೊಳ್ಳುತ್ತಿವೆ. ಖನಿಜ ಸಂಪತ್ತಿನ ಶೇಕಡ ೮೦ರಷ್ಟನ್ನು ಪ್ರಪಂಚದ ಕೇವಲ ಶೇಕಡ ೨೦ರಷ್ಟು ಮಂದಿ ಬಳಸುತ್ತಾರೆ. ಈ ಶತಮಾನದ ಕೊನೆ ಮುಟ್ಟುವುದರೊಳಗೆ ವಿಪರೀತವಾದ ಗಣಿಗಾರಿಕೆ ಈ ಗ್ರಹದ ನಿಕ್ಷೇಪವನ್ನೆಲ್ಲಾ ಹೆಚ್ಚುಕಮ್ಮಿ ಮುಗಿಸಿಬಿಟ್ಟಿರುತ್ತೆ.

೧೯೫೦ರ ನಂತರ ಅಂತರರಾಷ್ಟ್ರೀಯ ವ್ಯಾಪಾರ ೨೦ ಪಟ್ಟು ಹೆಚ್ಚಾಗಿದೆ. ಶೇಕಡ ೯೦ ಭಾಗ ಸಮುದ್ರದ ಮೂಲಕ ಸಂಚರಿಸುವುದು; ಪ್ರತಿವರ್ಷ ೫೦೦ ದಶಲಕ್ಷ 'ದೊಡ್ಡ ಡಬ್ಬಗಳು' ರವಾನೆಯಾಗುತ್ತವೆ; ಇವನ್ನೆಲ್ಲ ಅತಿದೊಡ್ಡ ಗ್ರಾಹಕ ಕೇಂದ್ರಗಳಿಗೆ ಕಳುಹಿಸಲಾಗುತ್ತೆ... ೧೯೫೦ರಿಂದ ಮೀನುಗಾರಿಕೆ ೫ರಷ್ಟು ವೃದ್ಧಿಯಾಗಿದೆ – ೧೮ ದಶಲಕ್ಷದಿಂದ ೧೦೦ ದಶಲಕ್ಷ ಮೆಟ್ರಿಕ್ ಟನ್, ವರ್ಷ ಒಂದಕ್ಕೆ. ಸಾವಿರಾರು ಕಾರ್ಖಾನೆ ಹಡಗುಗಳು ಸಾಗರಗಳನ್ನು ಖಾಲಿಮಾಡಿಬಿಡುತ್ತಿವೆ. ಮುಕ್ಕಾಲು ಭಾಗ ಮೀನುಗಾರಿಕೆ ಪ್ರದೇಶಗಳೆಲ್ಲ ಇಳಿಮುಖವಾಗಿವೆ, ಕೊನೆಗೊಂಡಿವೆ ಇಲ್ಲವೇ ಆ ಸ್ಥಿತಿಗೆ ಇಳಿಯುವ ಅಪಾಯದಲ್ಲಿವೆ. ೫೦೦ ದಶಲಕ್ಷ ಮನುಷ್ಯರು ಮರಳುಗಾಡುಗಳಲ್ಲಿ ವಾಸಿಸುತ್ತಾರೆ, ಅಂದರೆ ಯೂರೋಪಿನ ಜನಸಂಖ್ಯೆಗಿಂತ ಮಿಗಿಲಾಗಿ. ಇಸ್ರೇಲ್ ಕೆಲಭಾಗದ ಮರಳುಗಾಡನ್ನು ಸಾಗುವಳಿಗೆ ಅರ್ಹವಾದ ಭೂಮಿಯನ್ನಾಗಿ ಪರಿವರ್ತಿಸಿತು. ಈ ಜಮೀನುಗಳಲ್ಲಿ ಈಗ ಹನಿ-ನೀರಾವರಿ ವ್ಯವಸ್ಥೆಯೇನೋ ಇದೆ, ಆದರೆ ನೀರಿನ ಬಳಕೆ ರಫ್ತಿಗೆ ಅನುಗುಣವಾಗಿ ಹೆಚ್ಚುತ್ತಲೇ ಇದೆ. ಒಂದು ಕಾಲದಲ್ಲಿ ಪ್ರಬಲವಾಗಿದ್ದ ಜೋರ್ಡಾನ್ ನದಿ ಈಗ ಒಂದು ತೊರೆ ಮಾತ್ರ. ಅದರ ನೀರೆಲ್ಲ ಮರದ ಪೆಟ್ಟಿಗೆಗಳಲ್ಲಿ ತುಂಬಿದ ಹಣ್ಣು, ತರಕಾರಿಗಳಲ್ಲಿ ಹರಿದು ಪ್ರಪಂಚದಾದ್ಯಂತ ಬೃಹತ್ ಮಾರುಕಟ್ಟೆಗಳನ್ನು ಸೇರಿಬಿಟ್ಟವೆ ! ಮುಂದಿನ ಶತಮಾನದಲ್ಲಿ ಭಾರತ ನೀರಿನ ಕೊರತೆಯಿಂದ ಎಲ್ಲ ದೇಶಗಳಿಗಿಂತ ಅತಿಯಾಗಿ ಸೊರಗುವ ದೇಶವಾಗುವ ಅಪಾಯವನ್ನು ಎದುರಿಸುತ್ತಿದೆ. ಭಾರಿ ನೀರಾವರಿ ಯೋಜನೆ ಅದರ ವೃದ್ಧಿಯಾಗುತ್ತಿರುವ ಜನರನ್ನು ಪೋಷಿಸಿದೆ; ಅಲ್ಲದೆ ಕಳೆದ ೫೦ ವರ್ಷಗಳಲ್ಲಿ, ೨೧ ದಶಲಕ್ಷ ಬಾವಿಗಳನ್ನು ತೋಡಲಾಗಿದೆ.

ಲಾಸ್ ವೆಗಾಸ್ ಅನ್ನು ಕಟ್ಟಿದ್ದು ಮರಳುಗಾಡಿನಲ್ಲಿ. ಅಲ್ಲಿ ಲಕ್ಷಾಂತರ ಜನ ವಾಸಿಸುತ್ತಾರೆ. ಪ್ರತಿ ತಿಂಗಳೂ ಸಾವಿರಾರು ಜನ ಅಲ್ಲಿಗೆ ಬಂದು ಸೇರುತ್ತಾರೆ. ಅದರ ನಿವಾಸಿಗಳ ನೀರು ಬಳಕೆ ಪ್ರಪಂಚದಲ್ಲೇ ಅತ್ಯಂತ ಹೆಚ್ಚಿನದು. ಉಷ್ಣವಲಯದ ಸಸ್ಯರಾಶಿ ಮತ್ತು ವೈಭೋಗಪೂರಿತ ಗಾಲ್ಫ್ ಕ್ರೀಡಾಂಗಣಗಳನ್ನು ಹೊಂದಿರುವ ಪಾಮ್‌ಸ್ಪ್ರಿಂಗ್ಸ್ ಮರಳುಗಾಡಿನ ಇನ್ನೊಂದು ನಗರ. ಈ ಮರೀಚಿಕೆ ಅದೆಷ್ಟು ಕಾಲ ಮೆರೆಯಬಲ್ಲದು ? ನಮ್ಮ ಭೂಮಿ ಇದನ್ನೆಲ್ಲ ತಡೆದುಕೊಳ್ಳಲಾರದು. ಈ ನಗರಗಳಿಗೆ ನೀರು ಸರಬರಾಜು ಮಾಡುವ ಕೊಲೆರಾಡೊ ನದಿ ಸಮುದ್ರವನ್ನೇ ತಲುಪದ ನದಿಗಳಲ್ಲಿ ಒಂದಾಗಿದೆ. ಅಂದರೆ, ೨೦೨೫ಕ್ಕೆ ಮುಂಚೆಯೇ ನೀರಿನ ಕೊರತೆ ೨೦೦ ಕೋಟಿ ಜನರನ್ನು ತೊಂದರೆಗೀಡು ಮಾಡಬಲ್ಲದು.

ಎಲ್ಲ ಜೀವಂತ ವಸ್ತುಗಳು ಪರಸ್ಪರ ಹೊಂದಾಣಿಕೆ ಹೊಂದಿರುವಂಥವು : ಜಲ, ವಾಯು, ಭೂಮಿ, ಮರಗಳು, ಜನ, ಪ್ರಾಣಿಗಳು, ಎಲ್ಲಾ. ಆದಿಮ ಅರಣ್ಯಗಳು ನಮ್ಮ ಗ್ರಹದ ಜೀವವೈವಿಧ್ಯತೆಯ ಮುಕ್ಕಾಲು ಭಾಗಕ್ಕೆ ಆವಾಸ ಒದಗಿಸುತ್ತವೆ, ಅಂದರೆ ಭೂಮಿಯ ಮೇಲಿನ ಸರ್ವ ಜೀವದ ಮುಕ್ಕಾಲು ಭಾಗ. ಜಾನುವಾರು, ಜಮೀನುಗಳು ಮತ್ತು ಸೋಯಾಬೀನ್ ಹೊಲಗಳಿಗೆ ಅವಕಾಶ ಒದಗಿಸಲು ಕೇವಲ ೪೦ ವರ್ಷಗಳಲ್ಲಿ ಜಗತ್ತಿನ ಅತಿದೊಡ್ಡ ಮಳೆಕಾಡಾದ ಅಮೆಜಾನ್ ಶೇಕಡ ೨೦ರಷ್ಟು ಕುಗ್ಗಿದೆ. ಶೇಕಡ ೯೫ರಷ್ಟು ಸೋಯಾಬೀನ್ ಯೂರೋಪ್ ಮತ್ತು ಏಷ್ಯಾದಲ್ಲಿ ಜಾನುವಾರು ತಂಡ ಮತ್ತು ಕೋಳಿಸಾಕಣೆಯ ಆಹಾರವಾಗಿ ಉಪಯೋಗಿಸಲಾಗುತ್ತೆ. ಹಾಗಾಗಿ ಒಂದು ಕಾಡನ್ನು ಮಾಂಸವಾಗಿ ಪರಿವರ್ತಿಸಿಬಿಟ್ಟಿದೆ. ೨೦೦ ಕೋಟಿಗಿಂತ ಹೆಚ್ಚು ಜನರು - ಹೆಚ್ಚುಕಮ್ಮಿ ಪ್ರಪಂಚದ ತ್ರಿನೇ ಒಂದು ಭಾಗ ಇಂದಿಗೂ ಇದ್ದಿಲನ್ನೇ ಅವಲಂಬಿಸಿದ್ದಾರೆ. ಜಗತ್ತಿನಲ್ಲಿ ಅತಿ ಬಡದೇಶಗಳಲ್ಲೊಂದಾದ ಹೈತಿಯಲ್ಲಿ ಇದ್ದಿಲು ಜನರ ಒಂದು ಪ್ರಮುಖ ಗ್ರಾಹಕ ವಸ್ತುವಾಗಿದೆ. ಹೈತಿಯ ಪರ್ವತಗಳ ಮೇಲ್ಭಾಗದಲ್ಲಿ ಕೇವಲ

## ಅಭಿನಂದನೆಗಳು





ಡಾ॥ ವಿಜಯಾ, ಶ್ರೀಮತಿ ವೀಣಾ ಶಾಂತೇಶ್ವರ ಹಾಗೂ ಶ್ರೀಮತಿ ವೈದೇಹಿ
ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಶಸ್ತಿ ಸಮಿತಿ ನೀಡುವ ಮಾಸ್ತಿ ಪ್ರಶಸ್ತಿ ಪುರಸ್ಕೃತರು.

ಶೇಕಡ ೨ರಷ್ಟು ಅರಣ್ಯಗಳು ಮಾತ್ರ ಉಳಿದಿವೆ.

ಪ್ರತಿವಾರ ಪ್ರಪಂಚದ ನಗರಗಳು ತಮ್ಮ ಜನಸಂಖ್ಯೆಯನ್ನು ೧೦ ದಶಲಕ್ಷ ವ್ಯಕ್ತಿಗಳಿಗಿಂತಲೂ ಹೆಚ್ಚಾಗಿ ವೃದ್ಧಿಗೊಳಿಸಿಕೊಳ್ಳುತ್ತವೆ. ನೀರು, ಒಳಚರಂಡಿ, ವಿದ್ಯುಚ್ಛಕ್ತಿ ಇಂತಹ ದೈನಿಕ ಅವಶ್ಯಕತೆಗಳಿಂದ ವಂಚಿತರಾಗಿ ಈಗ ಆರರಲ್ಲಿ ಒಬ್ಬ ಮಾನವ ಅಭದ್ರ, ಅನಾರೋಗ್ಯಕರ, ಮಿತಿಮೀರಿದ ಜನಸಂದಣಿಯ ವಾತಾವರಣದಲ್ಲಿ ಜೀವಿಸುತ್ತಾನೆ. ಇದರ ಪರಿಣಾಮ ೧೦೦ ಕೋಟಿಯಷ್ಟು ಜನರ ಮೇಲೆ ಆಗಲಿದೆ. ಭೂಗ್ರಹದ ಮೇಲೆಲ್ಲ ಬಡಜನ ತಮ್ಮ ಜೀವ ಉಳಿಸಿಕೊಳ್ಳಲು ಹೆಣಗಾಡುತ್ತಿದ್ದಾರೆ. ಹಾಗಿದ್ದರೂ ನಾವು ಸಂಪನ್ಮೂಲಗಳಿಗಾಗಿ ಅಗೆಯುವುದನ್ನು ಮುಂದುವರಿಸುತ್ತಲೇ ಇದ್ದೇವೆ; ಆ ಸಂಪನ್ಮೂಲಗಳಿಲ್ಲದೆ ಇನ್ನೆಂದೂ ನಮಗೆ ಇರಲು ಸಾಧ್ಯವೇ ಇಲ್ಲ. ನಮ್ಮ ಚಟುವಟಿಕೆಗಳು ಭಾರಿ ಮೊತ್ತದಲ್ಲಿ ಇಂಗಾಲಾಮ್ಲದ ಬಿಡುಗಡೆಗೆ ಕಾರಣವಾಗಿವೆ. ಅದರ ಗ್ರಹಿಕೆ ಸಹ ಇಲ್ಲದೆ ಕಟ್ಟಕಡೆಯ ಅಣುವಿನ ತನಕ ನಾವು ಭೂಮಿ ಮೇಲಿನ ವಾತಾವರಣ ಸಮತೋಲನದ ಮೇಲೆ ದುಷ್ಪರಿಣಾಮ ಬೀರಿದ್ದೇವೆ. ಆರ್ಕ್‌ಟಿಕ್‌ನ ಮಂಜುಗೆಡ್ಡೆ ಮುಚ್ಚಳ ಜಾಗತಿಕ ಬಿಸಿಯಾಗುವಿಕೆಯಿಂದ ಕರಗಿಹೋಗುತ್ತಿದೆ. ಕಳೆದ ೪೦ ವರ್ಷಗಳಲ್ಲಿ ಅದು ಶೇಕಡ ೪೦ರಷ್ಟು ತೆಳ್ಳಗಾಗಿದೆ. ಬೇಸಿಗೆಯ ಸಮಯದಲ್ಲಿ ಈ ಜಾಗ, ಪ್ರತಿವರ್ಷ ಕುಗ್ಗುತ್ತಲೇ ಇದೆ. ೨೦೩೦ರ ಬೇಸಿಗೆಯ ಹೊತ್ತಿಗೆ ಅದು ಮಾಯವಾಗಿಬಿಡಬಲ್ಲದೋ ಏನೋ! ಕೆಲವರ ಅಭಿಪ್ರಾಯದಂತೆ ಅದು ೨೦೧೫ರ ಹೊತ್ತಿಗೆ ಅದೃಶ್ಯವಾಗಬಹುದು. ೨೦೫೦ರ ಹೊತ್ತಿಗೆ ಭೌಮಿಕ ಪ್ರಭೇದಗಳಲ್ಲಿ ನಾಲ್ಕನೆ ಒಂದು ಭಾಗ ವಿಲೋಪನ ಅಪಾಯವನ್ನು ಎದುರುನೋಡಬೇಕಾಗಬಹುದು, ಎಂದು ಅಂದಾಜು ಮಾಡಿದ್ದಾರೆ. ಗ್ರೀನ್‌ಲೆಂಡ್ ಬಹುಬೇಗ ಬಿಸಿಗೊಳ್ಳುತ್ತಿರುವುದರಿಂದ, ಇಡೀ ಖಂಡದ ಸಿಹಿನೀರೆಲ್ಲ ಸಾಗರಕ್ಕೆ ಹರಿದು ಹೋಗುತ್ತಿದೆ. ನಮ್ಮ ಗ್ರಹದ ಸಿಹಿನೀರಿನ ಶೇಕಡ ೨೦ ಭಾಗಕ್ಕೆ ಮೂಲ ಗ್ರೀನ್‌ಲೆಂಡ್. ಅದು ಕರಗಿಹೋದಲ್ಲಿ ಸಮುದ್ರದ ಮಟ್ಟ ಹೆಚ್ಚುಕಮ್ಮಿ ೭ ಮೀಟರ್‌ನಷ್ಟು ಏರಬಹುದು. ನಮ್ಮ ಗ್ರಹದ ವಾತಾವರಣ ಅವಿಭಾಜ್ಯವಾದ್ದು, ಅಖಂಡವಾದ್ದು. ಅದು ನಾವೆಲ್ಲರೂ ಪಾಲುದಾರರಾಗಿರುವ ಆಸ್ತಿ.

ಈಗ ಸರೋವರಗಳು ಗ್ರೀನ್‌ಲೆಂಡಿನ ಭೂದೃಶ್ಯದ ಭಾಗವಾಗುತ್ತಿವೆ. ಮಂಜುಗೆಡ್ಡೆ ಮುಚ್ಚಳ ಎಷ್ಟು ಬಿರುಸಿನಿಂದ ಕರಗುತ್ತಿದೆ ಎಂದರೆ ೧೦ ವರ್ಷಗಳ ಹಿಂದೆ ಯಾವ ಅತ್ಯಂತ ನಿರಾಶಾವಾದಿ ವಿಜ್ಞಾನಿಯೂ ಇದರ ಭವಿಷ್ಯ ನುಡಿಯಲು ಸಾಧ್ಯವಾಗಿರಲಾರದು. ಹಿಮಾನಿಗಳಿಂದ ಪೋಷಿಸಲ್ಪಟ್ಟ ಈ ನದಿಗಳು ಹೆಚ್ಚು ಹೆಚ್ಚಾಗಿ ಒಂದರೊಡನೊಂದು ವಿಲೀನವಾಗುತ್ತಿವೆ ಮತ್ತು ಮೇಲ್ಮೈಗೆ ಹೊರಬರುತ್ತಿವೆ. ಮಂಜುಗೆಡ್ಡೆಯೊಳಗೆ ಆಳದಲ್ಲಿ ನೀರು ಘನೀಕೃತವಾಗುವುದೆಂದು ಯೋಚಿಸಲಾಗಿತ್ತು. ಆದರೆ ಅದಕ್ಕೆ ತದ್ವಿರುದ್ಧವಾಗಿ ನೀರು ಮಂಜುಗೆಡ್ಡೆ ಕೆಳಗೆ ಹರಿಯುತ್ತಾ ಅದನ್ನು ಸಮುದ್ರಕ್ಕೆ ನೂಕುವುದರಿಂದ ಅದು ಅಲ್ಲಿ ಒಡೆದು ಚದುರಿ ನೀರ್ಗಲ್ಲ ಗುಡ್ಡವಾಗುತ್ತೆ. ೨೦ನೇ ಶತಮಾನ ಒಂದರಲ್ಲೇ ಬಿಸಿಯಾದ ನೀರು ವಿಸ್ತರಿಸಿ ಸಮುದ್ರಮಟ್ಟ ೨೦ ಸೆಂಟಿಮೀಟರ್ ಮೇಲೆ ಏರಲು ಕಾರಣವಾಯಿತು. ಪ್ರತಿಯೊಂದೂ ಅಸ್ಥಿರವಾಗುತ್ತಾ ಹೋಗುತ್ತೆ. ಹವಳ ದಿಣ್ಣೆಗಳು ನೀರಿನ ಅತ್ಯಂತ ಕಡಿಮೆ ತಾಪ ಬದಲಾವಣೆಗೂ ಬಹಳ ಸೂಕ್ಷ್ಮ ಸಂವೇದಿಗಳು. ಅವುಗಳಲ್ಲಿ ಶೇಕಡ ೩೦ ಅದೃಶ್ಯವಾಗಿಬಿಟ್ಟಿವೆ. ಅವು ಪ್ರಭೇದಗಳ ಸರಪಣಿಯಲ್ಲಿ ಅಗತ್ಯವಾದ ಕೊಂಡಿ. ಹೀಗೆ ಸಮುದ್ರಮಟ್ಟ ಬೇಗ ಬೇಗ ಏರುವುದು ಮುಂದುವರಿದರೆ, ಪ್ರಪಂಚದಲ್ಲೇ ಅತ್ಯಧಿಕ ಸಾಂದ್ರತೆಯ ಜನಸಂಖ್ಯೆ ಇರುವ ನಗರವಾದ ಟೋಕಿಯೋ ಅಂತಹ ನಗರಗಳು ಏನು ಮಾಡಿಯಾವು ? ಸೈಬೀರಿಯ, ಅಲ್ಲದೆ ಪ್ರಪಂಚದ ಅನೇಕ ಭಾಗಗಳಲ್ಲಿ, ಶೀತದ ತೀಕ್ಷ್ಣತೆ ಎಷ್ಟಿದೆಯೆಂದರೆ ಅಲ್ಲಿ ನೆಲ ಶಾಶ್ವತವಾಗಿ ಘನೀಭವಿಸಿರುತ್ತದೆ. ಈ ಭಾಗವೆಲ್ಲವೂ ಹಿಮಾಚ್ಛಾದಿತ ಪ್ರದೇಶ. ಆ ಹೊರಮೈ ಕೆಳಗೆ ವಾಯುಗುಣಕ್ಕೆ ಸಂಬಂಧಿಸಿದ ಒಂದು ಕಾಲ ನಿಯಮಿತ ಬಾಂಬ್ ಇದೆ. ಅದೇ ಮೀಥೇನ್. ಮೀಥೇನ್ ಒಂದು ಗಾಜಿನಮನೆಯಂತೆ ಪರಿಣಾಮಕಾರಿ ಅನಿಲ; ಮೀಥೇನ್ ಇಂಗಾಲಾಮ್ಲಕ್ಕಿಂತ ೨೦ರಷ್ಟು ಶಕ್ತಿಶಾಲಿಯಾದದ್ದು. ಈ ಹಿಮಾಚ್ಛಾದಿತವೇನಾದರೂ ಕರಗಿದರೆ, ಮೀಥೇನ್ ಬಿಡುಗಡೆಯಿಂದಾಗುವ ಗಾಜಿನ ಮನೆ ಪರಿಣಾಮವು ನಿಯಂತ್ರಣಕ್ಕೆ ಸಿಗದಂತಾಗಬಹುದು; ಆದರ ಪರಿಣಾಮಗಳ ಬಗ್ಗೆ ಯಾರೂ ಭವಿಷ್ಯ ಹೇಳಲಾರರು. ಪ್ರಪಂಚದ ಸಂಪನ್ಮೂಲಗಳ ಶೇಕಡ ೮೦ರಷ್ಟನ್ನು ಪ್ರಪಂಚದ ಶೇಕಡ ೨೦ರಷ್ಟು ಜನ ಬಳಸಿಬಿಡುತ್ತಾರೆ. ಪ್ರಪಂಚವು ಪ್ರಗತಿ ಹೊಂದುತ್ತಿರುವ ರಾಷ್ಟ್ರಗಳಿಗೆ ದೊರಕಿಸುವ ಸಹಾಯಕ್ಕೆ ೧೨ರಷ್ಟಕ್ಕಿಂತಲೂ ಹೆಚ್ಚಾಗಿ ಮಿಲಿಟರಿ ಖರ್ಚಿಗೆ ಹಣತೊಡಗಿಸುತ್ತದೆ. ಅಶುದ್ಧ ಜಲಸೇವನೆಯಿಂದ ಪ್ರತಿದಿನ ಐದು ಸಾವಿರ ಜನರು ಮರಣಕ್ಕೀಡಾಗುತ್ತಾರೆ. ೧೦೦ ಕೋಟಿ ಜನಕ್ಕೆ ಕುಡಿಯಲರ್ಹವಾದ ನೀರು ಪಡೆಯುವ ಮಾರ್ಗವಿಲ್ಲ. ಸುಮಾರು ೧೦೦ ಕೋಟಿ ಜನ ಹಸಿವಿನಿಂದ ನರಳುತ್ತಿದ್ದಾರೆ. ಪ್ರಪಂಚದಲ್ಲಿ ಮಾರಾಟವಾಗುವ ಧಾನ್ಯಗಳಲ್ಲಿ ಶೇಕಡ ೫೦ಕ್ಕಿಂತಲೂ ಹೆಚ್ಚು ಭಾಗ ಪ್ರಾಣಿಗಳ ತಿನಿಸು, ಇಲ್ಲ ಜೈವ ಇಂಧನಕ್ಕಾಗಿ ಉಪಯೋಗವಾಗುತ್ತವೆ. ಸ್ವಾಭಾವಿಕ ಗತಿಗಿಂತ, ಒಂದು ಸಾವಿರಪಟ್ಟು ವೇಗದಿಂದ ಜೀವ ಪ್ರಭೇದಗಳು ನಶಿಸುತ್ತಿವೆ. ಮೀನುಗಾರಿಕೆಯ ಒಟ್ಟು ಕ್ಷೇತ್ರಗಳಲ್ಲಿ ಮುಕ್ಕಾಲು ಭಾಗ ಕಡಿಮೆಯಾಗುತ್ತಿದೆ, ಕಿರಿದಾಗುತ್ತಿದೆ ಇಲ್ಲವೆ ಅಪಾಯಕಾರಿಯಾಗಿ ಕುಂದುತ್ತಿದೆ. ಎಲ್ಲ ಕಾಲಕ್ಕೂ ದಾಖಲೆಯಂತಿರುವುದು, ಕಳೆದ ೧೫ ವರ್ಷಗಳ ಸರಾಸರಿ ಉಷ್ಣತೆಯ ಪ್ರಮಾಣ ಅತ್ಯಧಿಕವಾಗಿರುವುದು. ಯಾನ್ ಆರ್ಥೂಸ್ ಬೆರ್ತ್ರಾನ್ ಕೊನೆಯಲ್ಲಿ ಹೇಳಿರುವ ಮಾತುಗಳು ಹೀಗಿವೆ : ಇದು ನಾವೆಲ್ಲರೂ ಒಟ್ಟಾಗಿರಬೇಕಾದ ಸಮಯ. ಈಗ ಮುಖ್ಯವಾದದ್ದು ಆಗಲೇ ಆಗಿಹೋಗಿರುವುದಲ್ಲ, ಆದರೆ ಏನು ಇನ್ನೂ ವ್ಯಾಪಕವಾಗಿ ಉಳಿದಿದೆ, ಅದು. ಇನ್ನೂ ಸಹ ಪ್ರಪಂಚದ ಅರ್ಧ ಅರಣ್ಯಗಳು ಉಳಿದಿವೆ, ಸಾವಿರಾರು ನದಿಗಳು, ಸರೋವರಗಳು ಮತ್ತು ಹಿಮಾನಿಗಳು ಇವೆ; ಅಲ್ಲದೆ ಸಾವಿರಾರು ಜೀವಂತ ಪ್ರಭೇದಗಳಿವೆ. ಪರಿಹಾರಗಳು ಇಲ್ಲೇ ನಿಜಕ್ಕೂ ಇವೆ ಎನ್ನುವುದು ಇಂದು ನಮಗೆ ಗೊತ್ತು. ನಮ್ಮೆಲ್ಲರಿಗೂ ಬದಲಾವಣೆ ತರುವ ಬಲವಿದೆ. ಹಾಗಿದ್ದಮೇಲೆ, ನಾವು ಏತಕ್ಕಾಗಿ ಕಾದು ಕೂತಿರುವುದು ? ಮುಂದೇನು ಬರುವುದು ಅನ್ನುವುದನ್ನು ಬರೆಯುವುದು ನಮಗೆ ಬಿಟ್ಟಿದ್ದು, ಎಲ್ಲರೂ ಒಟ್ಟುಗೂಡೋಣ.



ನೆಲ್ಸನ್ ಮಂಡೆಲಾರೊಂದಿಗೆ ಫಿದೆಲ್ ಕಾಸ್ಟ್ರೋ



ಮೂಲ : **ಫಿದೆಲ್ ಕಾಸ್ಟ್ರೋ**
ಮಾಜಿ ಅಧ್ಯಕ್ಷರು, ಕ್ಯೂಬಾ ಗಣರಾಜ್ಯ

ಕನ್ನಡಕ್ಕೆ : **ವೈ. ಸಿ. ಸುಬ್ರಹ್ಮಣ್ಯ**
ನಂ. ೨೯೦/೪, ೩೪ನೇ 'ಎ' ಅಡ್ಡರಸ್ತೆ
೯ನೇ ಮುಖ್ಯರಸ್ತೆ
೪ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೧೧

# ಗತಿಸಿದ ಎಂ. ಎಫ್. ಹುಸೇನ್



ಹುಸೇನ್ ಅವರ ಕುಂಚದಲ್ಲಿ ಮದರ್ ತೆರೇಸಾ

**ಕ**ಲಾವಿದರಾಗಿ ಪರಿಚಿತರಾಗಿದ್ದ ಹುಸೇನ್ ಇದೇ ಜೂನ್ ೯ರಂದು ಲಂಡನ್ನಿನ ಚಿಕ್ಕ ಆಸ್ಪತ್ರೆಯೊಂದರಲ್ಲಿ ಕೊನೆಯುಸಿರೆಳೆದರು. ನಮ್ಮ ದೇಶದ ಉನ್ನತಮಟ್ಟದ ಕಲಾವಿದನೊಬ್ಬ ತನ್ನ ಕಲೆಯಿಂದಲ್ಲದೆ, ಗೂಂಡಾಗಿರಿಗೆ ಗುರಿಯಾದ ತಪ್ತಜೀವಿಯಾಗಿ ಸಾರ್ವಜನಿಕರಿಗೆ ಹೆಚ್ಚು ಪರಿಚಯವಾದದ್ದು ನಾಚಿಕೆಗೇಡಿನ ಸಂಗತಿ. ಆತ ಹುಟ್ಟಿದ್ದು ಪಂಡರಾಪುರದಲ್ಲಿ. ಇಂಥದೇ ದಿನವೆಂಬ ಖಚಿತ ಮಾಹಿತಿ ಇಲ್ಲ. ಹೇಗೋ ಸೆಪ್ಟೆಂಬರ್ ೧೭, ೧೯೧೫ ಎಂದು ದಾಖಲೆಗಳಲ್ಲಿ ನಮೂದಿಸಲಾಯಿತು. ಒಂದು ವರ್ಷ ಆ ಕಡೆ ಈ ಕಡೆ ಆದರೆ ಸರಿಯಾದ ವರ್ಷ ಆದೀತೇನೋ ಎಂದು ಹುಸೇನ್ ತಮಾಷೆಯಾಗಿ ಹೇಳುತ್ತಿದ್ದುದುಂಟು. ಹುಟ್ಟಿದಾಗ ಸೊಣಕಲು ಕಡ್ಡಿಯಂತಿದ್ದ ಮಗು ಬದುಕುವುದು ಅನುಮಾನವೆಂದು ಭಾವಿಸಿದ್ದ ತಾಯಿ, ತಾನೇ ಎರಡು ವರ್ಷಗಳಲ್ಲಿ ಇಲ್ಲವಾದಳು. ಆದರೆ ಮಗು ೯೫ ವರ್ಷ ನೀತಿವಂತನಾಗಿ ಬಾಳಿ ವಿಶ್ವದ ಕಲಾಪ್ರಪಂಚದಲ್ಲಿ ಅಳಿಸಿಹೋಗದಂತಹ ಗುರುತು ಮೂಡಿಸಿತು. ಭಾರತೀಯ ಜನತಾ ಪಕ್ಷದ ಗೂಂಡಾ ಪರಿವಾರ ಹುಸೇನ್‌ಗೆ ಕಳೆದ ೨೦-೨೫ ವರ್ಷಗಳಲ್ಲಿ ಸತತವಾಗಿ ನೀಡಿದ ಅಸಭ್ಯತನದ ಕಿರುಕುಳಗಳಿಂದಾಗಿ ಹುಸೇನ್ ತಮ್ಮ ಪ್ರೀತಿಯ ಭಾರತವನ್ನು ತೊರೆದು ಬ್ರಿಟನ್ ಮತ್ತು ಕಾತಾರ್‌ಗಳಲ್ಲಿ ನೆಲೆಸುವಂತಾದುದಕ್ಕೆ ಗೂಂಡಾ ಪರಿವಾರದಷ್ಟೆ ಭಾರತ ಸರ್ಕಾರದ ಹೊಣೆಯೂ ಇದೆ. ಎಂದೋ ಆತ ಬಿಡಿಸಿದ್ದ ಚಿತ್ರಗಳನ್ನು ಕಾರಣವನ್ನಾಗಿಸಿ ಈಚಿನ ವರ್ಷಗಳಲ್ಲಿ ಆತನ ಮೇಲೆ ಹಗೆತನ ಸಾಧಿಸಿದ ಭಾಜಪ ಪರಿವಾರದ ಸಾಂಸ್ಕೃತಿಕ ಪ್ರಜ್ಞೆ ಅತ್ಯಂತ ಹೀನಾಯವಾದುದೆಂಬುದು ಸ್ಪಷ್ಟ. ಹಿಂದು ಧರ್ಮದ ಪೌರಾಣಿಕ ಪಾತ್ರಗಳನ್ನು ಅವಹೇಳನಕರ ರೀತಿಯಲ್ಲಿ ತನ್ನ ರೇಖಾಚಿತ್ರಗಳಲ್ಲಿ ಹುಸೇನ್ ಬಿಡಿಸಿದ್ದನೆಂಬುದು ಆತನ ಮೇಲಿನ ಅವರ ಆಪಾದನೆ ಬಾಲಿಶವಾದ್ದು, ಪರಮ ಅಜ್ಞಾನದ ಸೂಚಕವಾದ್ದು. ಹುಸೇನ್ ಮೇಲೆ ಅಬ್ಬರದ ದಾಳಿ ನಡೆಯುತ್ತಿದ್ದ ಸಂದರ್ಭದಲ್ಲೊಮ್ಮೆ 'ಹೊಸತು' (ಸಂ. ೧, ಸಂಚಿಕೆ ೩) ಸುಮಾರು ಕ್ರಿ. ಶ. ಏಳನೆಯ ಶತಮಾನದ ಒಂದು ರೇಖಾ ಕಲಾಕೃತಿಯನ್ನು ಪ್ರಕಟಿಸಿ, ಹುಸೇನ್‌ಗೆ ಭಾರತೀಯ ಪರಂಪರೆಯಲ್ಲಿ ಪ್ರಾಚೀನ ಮಾದರಿಗಳಿದ್ದುದನ್ನು ಓದುಗರ ಅವಗಾಹನೆಗೆ ತಂದಿತ್ತು. ಹುಸೇನ್ ಮಾಡಿದ್ದನೆನ್ನಲಾದ ''ಅಪರಾಧ''ವನ್ನು ನಮ್ಮ ದೇಶದಲ್ಲಿ ಒಂದು ಸಾವಿರ ವರ್ಷಗಳ ಹಿಂದೆಯೇ ಮಾಡಲಾಗಿತ್ತು, ಅದನ್ನು ಉತ್ತಮ ಕಲಾಕೃತಿಯೆಂದು ಶ್ಲಾಘಿಸಲಾಗಿತ್ತು. ರೇಖಾಚಿತ್ರಗಳಲ್ಲಿ ಪುರಾಣಪುರುಷರು ಮತ್ತು ಸ್ತ್ರೀಯರು ನಗ್ನವಾಗಿ ಚಿತ್ರಿತವಾದರೆಂದು ಕಲಾಕೃತಿಗಳನ್ನು ಸುಟ್ಟುಹಾಕುವ ಮೂರ್ಖತನ ಹಾಗೂ ಬರ್ಬರತೆ ಪ್ರದರ್ಶಿತವಾಗಿರಲಿಲ್ಲ. ನಗ್ನವೆಂದು ತೋರುವ ರೇಖಾಚಿತ್ರಗಳು ಇಂದು - ನಿನ್ನೆಯವಲ್ಲ.

ಹುಸೇನ್ ತನ್ನ ಕಲಾತ್ಮಕ ಪ್ರತಿಭೆಯನ್ನು ಅದುಮಿಟ್ಟುಕೊಳ್ಳಬೇಕೆಂಬ ಒತ್ತಡ ಕುಸಂಸ್ಕೃತ ಹಲ್ಲೆಕೋರರಿಂದ ಬಂದಾಗ ಅದನ್ನು ಸಾಕಷ್ಟು ಟೀಕಿಸಲಾಯಿತು, ಪ್ರತಿಭಟಿಸಲಾಯಿತು. ಬರೋಡದ ಒಬ್ಬ ಕಲಾ ಪ್ರಾಧ್ಯಾಪಕನ ಮೇಲೆ ಹಲ್ಲೆ ನಡೆದಾಗಲೂ ಪ್ರತಿರೋಧ ವ್ಯಕ್ತವಾಯಿತು. ಆದರೆ ಕಲಾವಿದರು, ಎಡಪಕ್ಷಗಳು ಮತ್ತು ಭಾರತ ಸರ್ಕಾರ ಒಟ್ಟಾಗಿ ಹಲ್ಲೆಕೋರರನ್ನು ಎದುರಿಸಿ ಹುಸೇನ್‌ಗೆ ರಕ್ಷಣೆ ನೀಡುವುದರಲ್ಲಿ, ಅವರನ್ನು ದೇಶದಲ್ಲಿ ಉಳಿಸಿಕೊಳ್ಳುವುದರಲ್ಲಿ, ಸೋತವು. ಹುಸೇನ್ ತೀರಿಕೊಂಡಮೇಲೆ, ಆತನನ್ನು ತಮ್ಮ ಹಲ್ಲೆಗಳಿಂದ ಗಡೀಪಾರು ಮಾಡಿದ್ದ ದುಷ್ಟಪಡೆಗಳ ನಾಯಕರು ಸಹ 'ಶೋಕ' ವ್ಯಕ್ತಪಡಿಸುವ ಹೇಸಿಗೆಯ ನಾಟಕ ಮಾಡಿದ್ದಾರೆ. ಉದಾಹರಣೆಗೆ, ರಾಜ್ಯದ ಮುಖ್ಯಮಂತ್ರಿ ಯಡಿಯೂರಪ್ಪನವರು ಹುಸೇನ್‌ಅನ್ನು ಶ್ಲಾಘಿಸಿ 'ಅಯ್ಯೋ ಹೋದರಲ್ಲ' ಎಂದು ಕಣ್ಣೀರು ಸುರಿಸಿದ್ದಾರೆ. ಅವರಿಗೆ ಯಾರೋ ಸುಸಂಸ್ಕೃತರು ಹೇಳಿಕೆ ಬರೆದುಕೊಟ್ಟಿದ್ದಾರೆ, ಇವರು ಸಹಿ ಹಾಕಿದ್ದಾರೆ; ಕಣ್ಣೀರೆಲ್ಲಿಂದ ಬಂದೀತು! ಅವರ ಇಂದಿನ ಪ್ರಕಟಿತ ಭಾವನೆ ನೈಜವಾದುದಾದರೆ ಅಂದೇಕೆ ಮಂಗಾಟ ಮಾಡಿದ್ದು, ಹಲ್ಲೆಗಳನ್ನು ಉತ್ತೇಜಿಸಿದ್ದು, ಹುಸೇನ್ ಚಿತ್ರಪ್ರದರ್ಶನಗಳು ಮುಚ್ಚಿಕೊಂಡಾಗ ಸಂತೋಷ ಅನುಭವಿಸಿದ್ದು? ಈ ಪ್ರಶ್ನೆ ಕೇವಲ ಹುಸೇನ್ ಸಂದರ್ಭಕ್ಕೆ ಮಾತ್ರ ಪ್ರಸ್ತುತವಲ್ಲ, ಇಡೀ ಸಾಂಸ್ಕೃತಿಕ ವಿದ್ಯಮಾನಗಳನ್ನು ಕುರಿತಾದ ಪ್ರಶ್ನೆ. ಹುಸೇನ್ ಅವರಿಗೆ ಪಶ್ಚಾತ್ತಾಪಪೂರ್ವಕ ಗೌರವ-ನಮನಗಳನ್ನು ಸಲ್ಲಿಸುತ್ತಾ 'ಹೊಸತು' ಈ ಪ್ರಶ್ನೆಯನ್ನು ಗಂಭೀರವಾಗಿ ಎದುರಿಸಬೇಕೆಂದು ಕಲಾವಿದರಿಗೆ ಹಾಗೂ ಸಾರ್ವಜನಿಕರಿಗೆ ವಿನಂತಿಸಿಕೊಳ್ಳುತ್ತದೆ.





ಇದು ಹುಸೇನ್ ಅವರ ಕೃತಿ ಅಲ್ಲ, ತಮಿಳುನಾಡಿನ ಪುದುಕೋಟೆ ಸಮೀಪದ ಸಿತ್ತನ್ನೆವಾಸಲ್‌ನಲ್ಲಿರುವ 7ನೇ ಶತಮಾನದ ಕಲಾಕೃತಿ

ಪಂಡರಾಪುರದ ಗಾಳಿಯನ್ನು ಬಾಲಕನಾಗಿದ್ದಾಗ ಸೇವಿಸಿದ್ದ ಹುಸೇನ್, ಯಾವ ಪುಂಡುತನದಿಂದಲೂ ವಿಚಲಿತನಾಗದೆ ತನ್ನ ಧಾರ್ಮಿಕ ಸಮನ್ವಯ ಸಂಸ್ಕೃತಿಯನ್ನು ಕೊನೆಯವರೆಗೂ ಉಳಿಸಿಕೊಂಡನೆಂಬುದು ವಿಶೇಷ. ಇನ್ನೂ ಹುಡುಗನಾಗಿದ್ದಾಗ ಹುಸೇನ್ ಇಂದೋರ್‌ನಲ್ಲಿ ಮಂಕೇಶ್ವರ್ ಎಂಬುವವನ ಖಾಸಾ ಸ್ನೇಹಿತ. ಅವನಿಂದ ಪ್ರಭಾವಿತನಾಗಿಯೇ ಹುಸೇನ್ ಕಲೆಯ ಹಾದಿ ಹಿಡಿದದ್ದು, ರಾಮಾಯಣ - ಮಹಾಭಾರತಗಳ ಆಳವಾದ ಅಧ್ಯಯನದಲ್ಲಿ ತೊಡಗಿದ್ದು. ಮಂಕೇಶ್ವರ್ ಕ್ರಮೇಣ ಸಾಧುಬಾಬಾ ಆಗಿ ಅಂತರಾತ್ಮನ ಅರಸುವಿಕೆಯಲ್ಲಿ ಮಗ್ನನಾದ, ಹುಸೇನ್ ಜಗದಾತ್ಮನನ್ನು ಹುಡುಕುತ್ತಾ ಸಂಭಾವಿತ ಕಲಾವಿದನಾದ. ಇಂದೋರ್‌ನಿಂದ ಹುಸೇನ್ ಬಂದಿಳಿದದ್ದು ಅಂದಿನ ಬೊಂಬಾಯಿಯಲ್ಲಿ. ನಗರದಲ್ಲಿ ದೊಡ್ಡ ಭಿತ್ತಿಫಲಕಗಳ ಬೇಡಿಕೆಯಿತ್ತು, ಸಿನಿಮಾ ಜಾಹಿರಾತಿಗಾಗಿ. ಬದರ್ ಬಾಗ್ ಎಂಬಲ್ಲಿ ಹುಸೇನ್ ಅಂದಿನ ಚಿತ್ರನಟರನೇಕರ ಚಿತ್ರಗಳನ್ನು ಬಿಡಿಸಿ ಮೂರು ಕಾಸು ಸಂಪಾದಿಸಿ ಹೊಟ್ಟೆಹೊರೆದುಕೊಂಡ. ಈತ ಚಿತ್ರ ಬಿಡಿಸುವುದನ್ನು ನೋಡಿ ಕುಣದಾಡಲು ಹತ್ತಾರು ಜನ ಗುಂಪುಗೂಡಿ ನೆರೆದಿರುತ್ತಿದ್ದರಂತೆ. ಅವರಲ್ಲಿ ಮೆಹ್ಮೂದಾ ಬೀಬಿಯೂ ಒಬ್ಬಳು. ಆಕೆ ಇವನಿಗೆ ಅನ್ನ, ರೊಟ್ಟಿ ಸಹ ನೀಡುತ್ತಿದ್ದಳು. ಫಾಜ಼ಿಲಾ ಎಂಬ ಅವಳ ಮಗಳು ನಂತರ ಹುಸೇನ್‌ರ ಪತ್ನಿಯಾದಳು. ''ಟಾಟಾ - ಬಿರ್ಲಾಗಳು ಮಾತ್ರ ಕಲಾಕೃತಿಗಳನ್ನು ನೋಡುವಂತಹ ಗ್ಯಾಲರಿಗಳಷ್ಟೇ ನಿನ್ನ ಗಮನದಲ್ಲಿ ಇರುವುದು ಬೇಡ; ಹೊರಗಿನ ಜನಸಾಮಾನ್ಯರಿಗೆ, ಹಳ್ಳಿಯ ಜನರಿಗೆ, ಹಿಡಿಸುವಂತಹ ಕೃತಿಗಳನ್ನು ರಚಿಸುವ ಶ್ರೇಯಸ್ಸು ನಿನ್ನದಾಗಲಿ'' ಎಂದು ರಾಮಮನೋಹರ ಲೋಹಿಯ ಒಮ್ಮೆ ಹುಸೇನ್‌ಗೆ ಹೇಳಿದ್ದುದನ್ನು ಸ್ವತಃ ಹುಸೇನ್ ತಮ್ಮ ಆತ್ಮಕತೆಯಲ್ಲಿ ನೆನಪಿಸಿಕೊಂಡಿದ್ದಾರೆ.

ಹುಸೇನ್ ''ಒಬ್ಬ ಕಲಾವಿದನ ಕಣ್ಣಲ್ಲಿ'' ಎಂಬ ಒಂದು ಕಿರುಚಿತ್ರ ಮಾಡಿದಾಗ ನಮ್ಮ ದೇಶದ ಚಲನಚಿತ್ರ ವಿಭಾಗವು ಅದನ್ನು ಯಥಾಪ್ರಕಾರ ಉಪೇಕ್ಷಿಸಿತು; ನ್ಯೂಯಾರ್ಕ್‌ನಲ್ಲಿ ಅದಕ್ಕೆ ಮನ್ನಣೆ ದೊರೆತಾಗ ಅದನ್ನು ಬರ್ಲಿನ್ ಚಲನಚಿತ್ರೋತ್ಸವಕ್ಕೆ ಕಳಿಸಿತು. ಅಲ್ಲಿ ಈ ಚಿತ್ರಕ್ಕೆ 'ಗೋಲ್ಡನ್ ಬೇರ್' ಪ್ರಶಸ್ತಿ ದೊರಕಿತು. ಸತ್ಯಜಿತ್ ರಾಯ್ ಮನೆಗೊಮ್ಮೆ ಹೋಗಿದ್ದಾಗ ಒಂದು ಹಾಳೆಯನ್ನು ಹರಿದು ರಾಯ್ ಅರ್ಧ ಹುಸೇನ್‌ಗೆ ಕೊಟ್ಟು ಉಳಿದರ್ಧ ತಾವೇ ಇರಿಸಿಕೊಂಡರಂತೆ. ಹುಸೇನ್ ರಾಯ್‌ರ ಮುಖ ಚಿತ್ರಿಸಿದ, ರಾಯ್ ಹುಸೇನ್‌ರ ಗಡ್ಡವನ್ನು ಚಿತ್ರಿಸಿದ. ಇದನ್ನೂ ಹುಸೇನ್ ತಮ್ಮ ಆತ್ಮಕತೆಯಲ್ಲಿ ಉಲ್ಲಾಸದಿಂದ ಸ್ಮರಿಸಿದ್ದಾರೆ. ಜಾಹಿರಾತು ಫಲಕಗಳಲ್ಲಿ ಚಿತ್ತಾರ ಬಿಡಿಸುತ್ತಿದ್ದ ಹುಸೇನ್ ಶ್ರೀಮಂತನಾದ, ನಿಜ; ಆದರೆ ಶ್ರೀಮಂತಿಕೆಯ ಗರ್ವ ತಾಳಲಿಲ್ಲ. ಹಲ್ಲೆಕೋರರು ಅವರನ್ನು ಭಾರತದಿಂದ ಅಟ್ಟಿದಾಗ ಲಂಡನ್ನಿನಂತಹ ನಗರದಲ್ಲಿ ವಾಸವಾಗಿರಲು ಆ ಶ್ರೀಮಂತಿಕೆ ಉಪಯುಕ್ತವಾಗಿದ್ದಿರಬೇಕು.

ಹುಸೇನ್ ಕೇವಲ ಕಲಾವಿದನಲ್ಲ, ಆತ ಕಲಾಪ್ರಜ್ಞೆಯ ಪ್ರತೀಕ. ಕಲಾವಿದರಿಗೆ ಮತ್ತು ಸಾರ್ವಜನಿಕರಿಗೆ ಅವರ ಈ ವ್ಯಕ್ತಿತ್ವವೇ ಮುಖ್ಯ. ಸರಕಾರ ಹಾಗೂ ಪ್ರಜಾಪ್ರಭುತ್ವವಾದಿಗಳು ಹುಸೇನರು ಅನುಭವಿಸಬೇಕಾಗಿ ಬಂದ ಪರಿತಾಪದ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವ ಅಗತ್ಯವಿದೆ.

## ಭೂಮಿ... ಸಣ್ಣದಾಗಿದೆಯಂತೆ




ಅಷ್ಟೂ ಖಂಡಗಳ ಭಂಡ ಪುಂಡರು
ನನ್ನ ಖಂಡಗಳ ಕಬಾಬ್ ಮಾಡಿ
ಪಶ್ಚಿಮ ಏಷ್ಯಾದ ಎಣ್ಣೆಯಲಿ ಕರಿದು
ಹುರಿದು ಮುಕ್ಕುತ್ತಿದ್ದಾರೆ
ಭೂಮಿ ಸಣ್ಣದಾಯಿತು ಅನ್ನುತ್ತಾ
ನೆತ್ತಿಯಿಂದ ಪಾದದವರೆಗೆ
ಒಪ್ಪಂದಗಳ ಸರಪಳಿಯಿಂದೆನ್ನ ಕಟ್ಟಿಹಾಕಿದ್ದಾರೆ.
ಉಣ್ಣುವ ಅಕ್ಕಿಗೆ ಅವರ ಹೆಸರು ಬರೆಸಿ
ಕುಡಿಯುವ ನೀರಿಗೆ ವಿಷವ ಬೆರೆಸಿ
ಗೌರಿ ಹಸುವಿನ ಕೆಚ್ಚಲಿಗೂ ಅವರ ಲಾಂಛನವ ಕೆತ್ತಿ
ಗಾಳಿಯೊಂದ ಬಿಟ್ಟು ಮಿಕ್ಕೆಲ್ಲಕ್ಕೂ
ಪೇಟೆಂಟ್ ಅನ್ನೊ ಬೆದರು ಬೊಂಬೆ ಕಟ್ಟಿ
ಆಡಿಸುತ್ತಿದ್ದಾರೆ ನನ್ನ ಗಿರಿಗಿಟ್ಲೆ!
ಕಾಡುಗಳ ಕಡಿಸಿ
ಗೋಮಾಳಗಳಲಿ ಅಕೇಸಿಯಾ ಬೆಳೆಸಿ
ಕೆರೆಗಳಲಿ ಕಾಲೋನಿಗಳ ಕಟ್ಟಿಸಿ
ಪ್ರಗತಿಯ ಗಿಲೋಟಿನ್‌ನಲ್ಲಿ ನನ್ನ
ನೂಕುತ್ತಿದ್ದಾರೆ.

ನಮ್ಮೂರ ಯಜಮಾನಪ್ಪಗಳು
ಅವರ ಅಮೇಧ್ಯ ತಿನ್ನುತ್ತಾ
'ಆಹಾ ! ಪಶ್ಚಿಮವೇ ಅಭಿವೃದ್ಧಿಯ ಸಂಕೇತವೇ !'
ಅನ್ನುತ್ತ ಅವರ ಬೂಟು ನೆಕ್ಕುತ್ತಿದ್ದಾರೆ

ಅವರು ಕೊಟ್ಟ ಕೋವಿಯನ್ನ ನನ್ನೆದೆಗೆ
ಗುರಿಯಿಟ್ಟು ಹೆದರಿಸುತ್ತಿದ್ದಾರೆ !

ನನ್ನ ಕೈಯಿಂದಲೇ ನನ್ನ ಸಮಾಧಿಗೆ
ಗುಂಡಿ ಅಗೆಸಿ
ಅದರ ಸುತ್ತ ಅವರ ಧ್ವಜಗಳನ್ನು ನೆಡಿಸಿ
ಗಹಗಹಿಸುತ್ತಿದ್ದಾರೆ.
ಹೇಗೆ ತಪ್ಪಿಸಿಕೊಳ್ಳಲೇ ಅವ್ವಾ!
ದಾರಿ ತೋರವ್ವ!

**ಕು. ಸ. ಮಧುಸೂದನ**
ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭ ೧೪೪
ಚಿಕ್ಕಮಗಳೂರು ಜಿಲ್ಲೆ

ಬಿ. ಎಸ್. ಜಗದೀಶಚಂದ್ರ

ಸೈಕಲ್ಲು ಎಂದರೆ ಸಾಕು ಬಾಲ್ಯ ಜೀವನದ ನೆನಪುಗಳು ಕಾಡುತ್ತವೆ. ಮೊನ್ನೆ ಹರಿಯಾಣಾದ ಹಿಸ್ಸಾರ್ ಎಂಬಲ್ಲಿ ವಿದ್ಯಾರ್ಥಿಗಳು ೨೦೦೮ನೆಯ ಇಸವಿಯನ್ನು 'ಸೈಕಲ್ಲಿನ ವರ್ಷ' ಎಂದು ಆಚರಿಸಿ ಜಾತಾ ಹೊರಟ ಸುದ್ದಿಯನ್ನು ಓದಿದಾಗ ಮನಸ್ಸಿಗೆ ಏನೋ ಒಂದು ರೀತಿಯ ಖುಷಿಯಾಯಿತು. ಇದು ಕೇವಲ ಸೈಕಲ್ಲಿನ ಜಾತಾ ಆಗಿರದೆ ಪರಿಸರ ಮಾಲಿನ್ಯ, ಕುಡಿತದ ಕೆಟ್ಟ ಪರಿಣಾಮಗಳು ಮೊದಲಾದುವುಗಳ ಬಗ್ಗೆ ಜನರಿಗೆ ಅರಿವು ಮೂಡಿಸುವುದೂ ಅವರ ಉದ್ದೇಶವಾಗಿತ್ತು. ಈ ಆದ್ದರಿಂದ ಒಂದು ದಿನ ಸೈಕಲ್ಲಿನಲ್ಲಿ ಏಕೆ ಓಡಾಡಬಾರದು, ಎಂದು ಅದನ್ನು ಉಪಯೋಗಿಸಿದನಂತೆ. ಈ ಸೈಕಲ್ ಯಾನ ಅವನಿಗೆ ಒಂದು ನವೀನ ಅನುಭವ ಸಂತಸ ನೀಡಿತಂತೆ. ವಿಚಿತ್ರವೆಂದರೆ ಈ ಭೂಪನೂ ಸೈಕಲ್ ನೀಡುವ ಸಂತೋಷಕ್ಕಾಗಿ ತನ್ನ ಕಾರನ್ನೇ ಮಾರಿಬಿಟ್ಟನಂತೆ. ಈಗ ಬೇಕೇ ಬೇಕೆಂದಾಗ ಬಾಡಿಗೆ ಕಾರನ್ನು



# ನೆನಪಿನ ಸೈಕಲ್ಲುಗಳಲ್ಲಿ ತಿರುಗಿದಾಗ

ಸಂದರ್ಭದಲ್ಲಿ ಅಲ್ಲಿನ ಮುಖ್ಯ ಮಂತ್ರಿಗಳು ಅಲ್ಲಿನ ಕಾಲೇಜಿಗೆ ಒಂದು ಲಕ್ಷ ರೂ.ಗಳನ್ನು ದಾನ ನೀಡಿ ಅದರಲ್ಲಿ ಸೈಕಲ್ಲುಗಳನ್ನು ಕೊಂಡು ಹಳ್ಳಿಗಳಿಗೆ ಹೋಗಿ ಇಂತಹ ಜನಸೇವೆಯನ್ನು ಮಾಡಿ ಎಂದು ಹಾರೈಸಿದರಂತೆ. ಇದನ್ನು ಓದಿದಾಗ ನಮ್ಮ ಕರ್ನಾಟಕದಲ್ಲೂ ಶಾಲಾ ಬಾಲಕಿಯರಿಗೆ ಉಚಿತ ಸೈಕಲ್ಲುಗಳನ್ನು ವಿತರಿಸಿದ್ದು ನೆನಪಿಗೆ ಬಂತು. ಇಲ್ಲಿನ ಇತರೆ ವಾಹನಗಳ ಭರಾಟೆಯನ್ನು ನೋಡಿದರೆ ಅವು ಈ ಬಡಪಾಯಿ ಸೈಕಲ್ಲುಗಳನ್ನು ಎಲ್ಲಿ ತುಳಿದು ತೊಪ್ಪೆ ಮಾಡಿಬಿಡುವವೋ ಎಂದು ಭಯವಾಗಿತ್ತು. ಆದರೂ ಇಂತಹ ಸಿಹಿ ಸುದ್ದಿಗಳು ನಿಜಕ್ಕೂ ಸಂತೋಷ ತರುವಂತಹ ವಿಷಯವೇ.

**ಕಾರಿಲ್ಲದ ಜೀವನ**

ಇದೇ ಸಮಯದಲ್ಲಿ ಅಮೆರಿಕಾದ ಇನ್ನೊಂದು ಸುದ್ದಿ ಓದಿದೆ. ನಮಗೆ ಅದು ಒಂದು ರೀತಿಯ ವಿಚಿತ್ರ ಸುದ್ದಿಯೇ. ಅಮೆರಿಕಾದ ಬಾಸ್ಟನ್ನಿನಲ್ಲಿರುವ ಒಬ್ಬಾತ ಹೀಗೆ ಸೈಕಲ್ಲಿನ ಅಭ್ಯಾಸ ಮಾಡಿಕೊಂಡು ದಿನವೂ ೧೦ ಮೈಲಿ ದೂರದಲ್ಲಿರುವ ಕಛೇರಿಗೆ ಹೋಗುತ್ತಾನಂತೆ. ಅಂದರೆ ದಿನಕ್ಕೆ ೨೦ ಮೈಲಿ. ಅಂದರೆ ವಾರಕ್ಕೆ (೫ ದಿನದಂತೆ) ೧೦೦ ಮೈಲಿ. ಅವನಿಗೆ ಸೈಕಲ್ಲಿನ ಸರಳತೆ ಹಾಗೂ ಅದರ ಮೇಲಿನ ಪ್ರಯಾಣ ಎಷ್ಟು ಮುದ ನೀಡಿದೆಯೆಂದರೆ ತನ್ನ ಮನೆ ಮಂದಿಗೂ ಈ ಸೈಕಲ್ಲಿನ ಗುಂಗು ಹಿಡಿಸಿ ಈಗ ತನ್ನ ಕಾರನ್ನು ಮಾರಿಬಿಟ್ಟಿದ್ದಾನಂತೆ!

ಅಲ್ಲಿಯ ಇನ್ನೊಬ್ಬಾತನಿಗೆ ಕಾರಿನಲ್ಲಿ ಓಡಾಡಿ, ಅಲ್ಲಿಯ ವಾಹನಗಳ ನಡುವೆ ಸಿಕ್ಕಿಹಾಕಿಕೊಂಡು ಕೆಲಸಕ್ಕೆ ಗಂಟೆಗಟ್ಟಲೆ ತಡವಾಗಿ ತಲುಪುವುದು ಸಾಮಾನ್ಯವಾಗಿತ್ತು. ಉಪಯೋಗಿಸುತ್ತಾನಂತೆ. ಇದಕ್ಕಿಂತ ಮುಖ್ಯವಾಗಿ ಅವನ ಈ ನಿರ್ಧಾರಕ್ಕೆ ಅವನ ಹೆಂಡತಿಯ ಸಹಮತವೂ ಸಿಕ್ಕಿದ್ದು ಎಂತಹ ಅದೃಷ್ಟವಂತ ನೋಡಿ! ನಮ್ಮಲ್ಲಾದರೆ, ಮೊದಲು ಆ ಸ್ಕೂಟರ್ ಬಿಸಾಕಿ ಒಂದು ಒಳ್ಳೆಯ ಕಾರನ್ನು, ಅದರಲ್ಲೂ, ತನ್ನ ಸೋದರಿಯ ಅಥವಾ ವಾರಗಿತ್ತಿಯ ಮನೆಯಲ್ಲಿರುವ ಕಾರಿಗಿಂತ ಹೆಚ್ಚಿನ ಬೆಲೆಯದನ್ನು ತರಲೇಬೇಕೆಂಬ ಆಜ್ಞೆ ಮಾಡುವ ಹೆಂಡತಿಯರೇ ಹೆಚ್ಚು. ಅಲ್ಲಿ ಆತ ತನ್ನ ಹೆಂಡತಿಯನ್ನು ಕೂಡಿಸಿಕೊಳ್ಳಲೂ ಒಂದು ಕ್ಯಾಬ್ ಸಹ ಮಾಡಿಸಿದ್ದಾನಂತೆ. ಅವಳ ಅಂತಹ ದೊಡ್ಡ ಸಹಕಾರಕ್ಕೆ ಅಷ್ಟೂ ಬೇಡವೇ? ಆ ಕ್ಯಾಬಿನಲ್ಲಿ ಮನೆಗೆ ಬೇಕಾಗುವ ವಸ್ತುಗಳನ್ನೂ ತರಬಹುದಂತೆ. ಸಂಸಾರ ಸಮೇತ ಇಂತಹ ಸೈಕಲ್ಲಿನಲ್ಲಿ ಅವರು ಮಜವಾಗಿ ಓಡಾಡಿಕೊಂಡಿದ್ದಾರಂತೆ. ಇಂತಹ ಸಂಗತಿಯನ್ನು ಭಾರತದಲ್ಲಿ ಊಹಿಸಿಕೊಳ್ಳಲೂ ಸಾಧ್ಯವಿಲ್ಲ, ಅಲ್ಲವೇ? ಇದನ್ನು ಓದಿದಾಗ ನಮಗೆ ತಕ್ಷಣಕ್ಕೆ ಜ್ಞಾಪಕಕ್ಕೆ ಬರುವುದು ಹೆಂಡತಿಯನ್ನು ಕೂಡಿಸಿಕೊಂಡು ಡಬ್ಬಲ್ ರೈಡ್ ಮಾಡುವ ಹಳ್ಳಿಯ ಜನ ಅಥವಾ ಕೂಲಿಗೆ ಹೋಗುವ ಜನ. ಇದನ್ನು ನೋಡಿ ನಮ್ಮಲ್ಲಿ ನಗುವವರೇ ಹೆಚ್ಚು. ಆದರೆ ಅವರವರ ಕಷ್ಟ ಅವರಿಗೆ. ಯಾರಿಗೆ ಗೊತ್ತು, ಅವಶ್ಯಕತೆಯೊಂದಿಗೆ ಅದರಲ್ಲಿ ಅವರಿಗೂ ಒಂದು ರೀತಿಯ ಸುಖ, ತೃಪ್ತಿಯೂ ಇತ್ತೇನೋ. ಇತ್ತೀಚೆಗೆ ಇಂತಹ ಪ್ರಸಂಗಗಳೂ ಕಡಿಮೆಯಾಗಿ, ಈ ಡಬ್ಬಲ್ ರೈಡ್ ಮಾಡುವವರೂ ಪಾಸನ್ನು ಮಾಡಿಸಿಕೊಂಡು ಬಸ್ಸಿನಲ್ಲಿ ಓಡಾಡಲು ಆರಂಭಿಸಿದ್ದಾರೆ.

ಈಗ ವಾಹನಗಳ ದಟ್ಟಣೆಯಿಂದ ಆಮೆಯ ವೇಗದಲ್ಲಿ ಚಲಿಸುವ ವಾಹನಗಳಿಗೆ ಹೋಲಿಸಿದರೆ ನಗರಗಳಲ್ಲಿ ೫ರಿಂದ ೧೦ ಮೈಲಿ ದೂರ ಇರುವ ಜಾಗಗಳಿಗೆ ಹೋಗಬೇಕೆಂದರೆ ಸೈಕಲ್ಲೇ ಅತ್ಯುತ್ತಮ ವಾಹನ. ಅಲ್ಲಿ ಇಲ್ಲಿ ತೂರಿಸಿಕೊಂಡು, ಬೇಕೆಂದರೆ ತಳ್ಳಿಕೊಂಡು ಅತ್ಯಂತ ವೇಗವಾಗಿ ತಲುಪಿಬಿಡಬಹುದು. ಪರಿಸರ ಮಾಲಿನ್ಯವೂ ಆಗುವುದಿಲ್ಲ ಎಂಬುದು ಇದರ ಹೆಗ್ಗಳಿಕೆ. ನಿಲ್ಲಿಸಲು ಸಣ್ಣ ಜಾಗವಿದ್ದರೆ ಸಾಕು, ಶಬ್ದವೆಂಬುದು ಇಲ್ಲವೇ ಇಲ್ಲ, ಪೆಟ್ರೋಲ್ ಖರ್ಚಿಲ್ಲ, ಜಿಮ್‌ಗೆ ಹೋಗಬೇಕಾಗಿಲ್ಲ, ಹೋಗುವಾಗ ಪ್ರಕೃತಿಯ ಸೊಬಗನ್ನು ಸವಿಯುತ್ತಾ ಬೇಕೆಂದಲ್ಲಿ ನಿಲ್ಲಿಸಿ ಅದನ್ನು ಆಸ್ವಾದಿಸಬಹುದು. ಇಂತಹ ಸೌಕರ್ಯ ನಿಮಗೆ ಕಾರಿನಲ್ಲಿ ಸಿಗುವುದೇ ಎಂಬುದು ಅಮೆರಿಕ ವಾಸಿಯೊಬ್ಬನ ಅಂಬೋಣ. ಬೆಂಗಳೂರಿನಂತಹ ಕಾಂಕ್ರೀಟ್ ಕಾಡಿನಲ್ಲಿ ಎಂತಹ ಪ್ರಕೃತಿ ಎಂದು ಮೂಗು ಮುರಿಯಬೇಡಿ. ಇದು ಉದ್ಯಾನಗಳ ನಗರ ಅಲ್ಲವೇ, ಅದನ್ನು ನಿಜ ಮಾಡಿದರಾಯಿತು.

ಸೈಕಲ್ಲು ಬಳಸಿದಾಗ ಅದರಲ್ಲಿ ನಮ್ಮ ಸ್ವಪ್ರಯತ್ನವೂ ಉಂಟು, ತಾಂತ್ರಿಕತೆಯೂ ಉಂಟು. ಜೊತೆಗೆ, ನಮಗೆ ಚಾಲನೆ ಮಾಡಿದ ಸಂತೋಷ, ತೃಪ್ತಿ, ದಾರಿಯಲ್ಲಿನ ಪ್ರಕೃತಿಯ ಒಡನಾಟ, ಮುನಿಸು ಎಲ್ಲದರ ಅನುಭವವೂ ಸಿಗುತ್ತದೆ. ಇದು ಸೈಕಲ್ಲಿನೊಂದಿಗೆ ಒಂದು ರೀತಿಯ ಆತ್ಮೀಯತೆಯನ್ನು ಬೆಳೆಸುತ್ತದೆ. ಎಲ್ಲದರಲ್ಲೂ ನಾನು ನಿನ್ನೊಂದಿಗೆ ಒಡನಾಡಿ ಎಂಬ ಒಂದು ಅನ್ಯೋನ್ಯ ಸಂಬಂಧ ಬೆಳೆದುಬಿಡುತ್ತದೆ. ಇದರಿಂದಲೇ ಅದು ಅಷ್ಟೊಂದು ಜನಪ್ರಿಯವಾಗುತ್ತಿರುವುದು.

**ಅನುಕೂಲಗಳು**

ದಾರಿಯಲ್ಲಿ ಯಾರಾದರೂ ಗೆಳೆಯರು ಸಿಕ್ಕಿದರೆನ್ನಿ, ಅವರ ಹೆಗಲ ಮೇಲೆ ಕೈ ಹಾಕಿಕೊಂಡು ಅವರೊಂದಿಗೆ ನೀವೂ ಸೈಕಲ್ಲು ತುಳಿಯುತ್ತಾ ಹೋಗಬಹುದಲ್ಲವೇ? ಇಲ್ಲವಾದರೆ ಸೈಕಲ್ಲನ್ನು ತಳ್ಳಿಕೊಂಡು ಅವರೊಂದಿಗೆ ನಡೆದೇ ಹೆಜ್ಜೆ ಹಾಕಬಹುದು. ಗೆಳೆಯನ ಕೈಯಲ್ಲಿ ಭಾರವಾದ ಸಾಮಾನಿದ್ದರೆ ಅದನ್ನು ಸೈಕಲ್ಲಿನ ಬೆನ್ನ ಮೇಲೋ ಅಥವಾ ಅದರ ಹ್ಯಾಂಡಲಿಗೋ ತಗಲುಹಾಕಿ ಆರಾಮವಾಗಿ ಮಾತಾಡುತ್ತಾ ಸಾಗಬಹುದು. ತಾಕತ್ತಿದ್ದರೆ ಅವರನ್ನು ಕೂಡಿಸಿಕೊಂಡು ಡಬ್ಬಲ್ ರೈಡನ್ನೂ ಮಾಡಬಹುದು. ಇಂದಿನವರಿಗೆ ಈ ತಾಕತ್ತು ಇರುವುದು ಸಂದೇಹ. ನಮ್ಮ ಹಿರಿಯರಾರಾದರೂ ಇದ್ದಿದ್ದರೆ ಅವರಿಗೆ ಈ ಕೆಲಸ ನೀರು ಕುಡಿದಂತೆ. ನಿಮಗೆ ಮಗುವೊಂದಿದ್ದರೆ ಅದನ್ನು ಸೈಕಲ್ಲಿನ ಮುಂದೆ ಒಂದು ಚಿಕ್ಕ ಸೀಟನ್ನು ಹಾಕಿಸಿ ಅದರ ಮೇಲೆ ಕೂಡಿಸಿಕೊಂಡು ಓಡಾಡಿದರೆ ಅದರಿಂದ ಸಿಗುವ ಆನಂದ ನಿಮಗೆ ಕಾರಿನಲ್ಲಿ ಕೂಡಿಸಿಕೊಂಡು ಹೋದರೆ ಖಂಡಿತ ಸಿಗುವುದಿಲ್ಲ. ಮಕ್ಕಳನ್ನು, ಹೆಂಡತಿಯನ್ನು, ಗೆಳತಿಯನ್ನು ಹೀಗೆ ಮುಂದೆ ಸೀಟಿನ ಮೇಲೋ ಇಲ್ಲವೇ ಬಾರ್ ಕಂಬಿಯ ಮೇಲೋ ಕೂಡಿಸಿಕೊಂಡು ಸಾಗುವ ದೃಶ್ಯವನ್ನು ನಮ್ಮ ಹಳೆಯ ಸಿನಿಮಾಗಳಲ್ಲಿ ಮಾತ್ರ ನಾವು ನೋಡಿ ಆನಂದಿಸಬಹುದು.

ನೀವು ಸೈಕಲ್ಲಿನ ಮೇಲೆ ಕುಳಿತು ಓಡಾಡುವುದನ್ನು ಅಭ್ಯಾಸ ಮಾಡಿಕೊಂಡುಬಿಟ್ಟರೆ ನಿಮಗೆ ತಿಂದದ್ದೆಲ್ಲವೂ ಜೀರ್ಣವಾಗಿ ಹಸಿವೋ ಹಸಿವಾಗಿ ಹಪಹಪಿಸುವಂತಾಗುತ್ತದೆ. ಇದರಿಂದ ಯಾವ ಜಿಮ್ಮುಗಳಿಗೂ ಅಲೆಯಬೇಕಾಗಿಲ್ಲ. ಜೊತೆಗೆ ಖರ್ಚಿಲ್ಲದೇ ವ್ಯಾಯಾಮವಾಗಿ ಆರೋಗ್ಯವೂ ಸುಧಾರಿಸುತ್ತದೆ. ಅಲ್ಲದೆ ನಿಮ್ಮ ಸೈಕಲ್ಲಿನ ಪ್ರಯಾಣದ ದಾರಿಯೇನಾದರೂ ಆಹ್ಲಾದಕರವಾಗಿದ್ದರೆ ನಿಮಗೆ ಮಾಡುವ ಕೆಲಸದಲ್ಲೂ ಹುರುಪು ಬರುವುದಂತೂ ಗ್ಯಾರಂಟಿ.

**ನಗರದಲ್ಲಿ ಯಾವ ವಾಹನ ಮೊದಲು ?**

ಒಮ್ಮೆ ನಾನು ಕಾರಿನಲ್ಲಿ ಜಯನಗರದಿಂದ ಕೆಂಪೇಗೌಡ ನಿಲ್ದಾಣಕ್ಕೆ ನೆಂಟರನ್ನು ಬೀಳ್ಕೊಡಲು ಹೊರಟಿದ್ದೆ. ಅದೇ ಸಮಯಕ್ಕೆ ನನ್ನ ಮೈದುನನೂ ಫೋನ್ ಮಾಡಿ ತಾನೂ ಸ್ಕೂಟರಿನಲ್ಲಿ ಅಲ್ಲಿಗೆ ಬರುವೆ ಎಂದ ಹೇಳಿದ. ಅವನೂ ಜಯನಗರದ ಒಂಭತ್ತನೆಯ ಬ್ಲಾಕಿನಿಂದ ಹೊರಟಿದ್ದ. ಬಂದವರ ಸಾಮಾನುಗಳನ್ನು ಇಳಿಸಿಕೊಳ್ಳಲು ಸಹಾಯಕ್ಕೆಂದು ನಮ್ಮ ತಿಮ್ಮನೂ ಹೊರಟಿದ್ದ. ಆದರೆ ಕಾರಿನಲ್ಲಿ ಜಾಗ ಸಾಕಾಗಲಿಲ್ಲ. ಅವನು ಸೈಕಲ್ಲಿನ ಮೇಲೆ ಬರುತ್ತೇನೆ ಎಂದ. ಸರಿ ಎಂದು ಎಲ್ಲರೂ ಹೊರಟೆವು. ಆಶ್ಚರ್ಯವೆಂದರೆ ನಮ್ಮಲ್ಲಿ ಮೊದಲು ನಿಲ್ದಾಣವನ್ನು ತಲುಪಿದ್ದು ತಿಮ್ಮ. ನಂತರ ಬಂದದ್ದು ನನ್ನ ಗೆಳೆಯ ಸ್ಕೂಟರಿನ ಮೇಲೆ. ಕಡೆಯಲ್ಲಿ ತಲುಪಿದ್ದು ನಾನು, ಕಾರಿನಲ್ಲಿ. ಈಗ ತಿಳಿಯಿತಲ್ಲವೇ ನಗರದೊಳಗಿನ ಸೈಕಲ್ಲಿನ ಮಹಿಮೆ!

**ಉಪಯೋಗ ಹೇಗೆ ?**

ನಮ್ಮ ನಗರದ ಈ ವಾಹನದಟ್ಟಣೆಯ ನಡುವೆ ಸೈಕಲ್ಲಿನಲ್ಲಿ ಹೋಗುವುದಾದರೂ




**ಯಾ**ಕೆ ಜಾರಿಕೊಳ್ಳುವಿ ಕವಿತೆ
ಮಲ ಹೊರುವ ಕರಿಯನ
ಕಣ್ಣೀರ ಒರೆಸದಂತೆ ?
ಕಳವೆ ಬೀಜ ಭೂದೇವಿಗೆ ಅರ್ಪಿಸಿ
ಕಿಲ್ಲಾರಿ ಹೋರಿ ಕಸಾಯಿಖಾನೆಗೆ ಕಳುಹಿಸಿ
ತಾ ಬೆಳೆಸಿದ ಮರಕ್ಕೆ ನೇಣು ಹಾಕಿಕೊಂಡ
ರೈತನ ಜೀವ ಉಳಿಸದೆ
ಯಾಕೆ ಜಿಗಿದಾಡುವೆ ಕವಿತೆ ?
ಹಳ್ಳಿಗುಡಿ ಮಲ್ಲೇಶಿ
ತಾಯಿಗೆ ಊರುಗೋಲಾಗಲಿಲ್ಲ
ಹೊಲದಲ್ಲಿ ಕಳೆ ತೆಗೆಯುವ
ಪತ್ನಿಯ ಕೈಯಲ್ಲಿನ ಕುರ್ಚಿಗೆಯೂ ಆಗದೆ
ಕಲ್ಲೇಶಿ ಮಗನ ಪಾಟಿಯಲ್ಲಿ
ಅಕ್ಷರಗಳಾಗಿ ಅರಳಿಸದ ಕವಿತೆ
ಯಾಕೆ ಕಕ್ಕಿಕೊಳ್ಳುವೆ ಬಿಳಿಯ ಹಾಳೆಯ ಮೇಲೆ
ಹಸಿದ ಹೊಟ್ಟೆಗೆ ಗುಟುಕು ಗಂಜಿಯಿಲ್ಲ
ನನ್ನೂರ ರಸ್ತೆಗೆ ಡಾಂಬರ್ ಕಾಣಲಿಲ್ಲ
ಎದೆ ಎತ್ತರ ಬೆಳೆದ ಮಗಳಿಗೆ
ವರ ತರಲು ಹೋದ ತಂದೆ
ನೆರೆ ಹಾವಳಿಯಲ್ಲಿ ಸಿಕ್ಕಿ
ಶವವಾಗಿ ಹಿಂತಿರುಗಿ ಬಂದ
ಕಣ್ಣೀರ ಬಾಳಿಗೆ ಭರವಸೆಯನ್ನೀಯದೆ
ಯಾಕೆ ಬಡಿದಾಡುವಿ ಕವಿತೆ ?
ಮಗ್ಗದಲ್ಲಿ ಎಳೆ ಇಲ್ಲದ ಲಾಳಿಯಂತೆ ?
ಹುಟ್ಟದಿರು ಕವಿತೆ ಸತ್ವವಿಲ್ಲದೆ
ನಿನಗೆ ಪೋಲಿಯೋ ಲಸಿಕೆ ಹಾಕುವವರಿಲ್ಲ
ದಿಟ್ಟ ಹೆಜ್ಜೆ ಇಟ್ಟರೆ ಮಾತ್ರ ನಿನಗಿಲ್ಲಿ ಪಟ್ಟ
ಕಟ್ಟು ಬಾ ಹುಟ್ಟಿದ್ದೆ ಆದರೆ ಗಟ್ಟಿಯಾದ ಘಟ್ಟ


**ವಿ. ಎಸ್. ಮುಕಾಶಿ**
ದ್ವಿತೀಯ ದರ್ಜೆ ಸಹಾಯಕ, ಪ್ರಧಾನ ದಿವಾಣಿ ನ್ಯಾಯಾಲಯ (ಕಿರಿಯ ವಿಭಾಗ)
ಗದಗ - ೫೮೨ ೧೦೧

ಹೇಗೆ ಎಂದು ಯೋಚನೆಯೇ? ಚಿಂತಿಸಬೇಡಿ. ನಿಮ್ಮ ಮಾರ್ಗಕ್ಕೆ ಯಾವುದಾದರೂ ಸಣ್ಣ ಸಣ್ಣ ಗಲ್ಲಿಗಳನ್ನು ಆಯ್ದುಕೊಳ್ಳಿ. ಇದರಿಂದ ನಿಮಗೆ ಆ ಗಲ್ಲಿಗಳ ಪರಿಚಯವೂ ಆಗುವುದು, ಇತರೆ ವಾಹನಗಳ ತೊಂದರೆಯೂ ಇರುವುದಿಲ್ಲ. ನಿಮಗೆ ಸೈಕಲ್ಲಿನ ಪ್ರಯಾಣ ಅತಿ ದೂರ ಎನ್ನಿಸಿದರೆ ವಾರದಲ್ಲಿ ಒಂದೆರಡು ದಿನವಾದರೂ ಸೈಕಲ್ಲನ್ನು ಉಪಯೋಗಿಸಿ ಅಥವಾ ಅರ್ಧ ದೂರ ಸೈಕಲ್ಲಿನಲ್ಲಿ ಹೋಗಿ ನಂತರ ಅದನ್ನು ಅಲ್ಲಿಯೇ ಎಲ್ಲಾದರೂ ನಿಲ್ಲಿಸಿ ಮುಂದೆ ಬೇರೆ ವಾಹನದಲ್ಲಿ ಓಡಾಡಬಹುದು.




ನೀವು ಕೆಲಸ ಮಾಡುವ ಜಾಗವು ಒಂದು ಕ್ಯಾಂಪಸ್ಸಿನಂತಿದ್ದರೆ, ಅಲ್ಲಿ ನಿಮಗೆ ಓಡಾಟಗಳು ಹೆಚ್ಚಿದ್ದರೆ ಆಗ ನೀವು ನಿಮ್ಮ ಕಛೇರಿಯಲ್ಲೇ ಒಂದು ಸೈಕಲ್ಲನ್ನು ಇಟ್ಟುಬಿಟ್ಟಿದ್ದರೆ ನಿಮಗೆ ಓಡಾಟವೂ ಸರಾಗ. ನಮ್ಮ ಬೆಂಗಳೂರಿನ ಕ್ಯಾಂಪಸ್ ಒಂದರಲ್ಲಿ ಕಂಪನಿಯವರೇ ಹೀಗೆ ಸೈಕಲ್ಲುಗಳನ್ನು ಇಟ್ಟು ಬಿಟ್ಟಿದ್ದಾರಂತೆ. ಬೇಕಾದವರು ಅದನ್ನು ತೆಗೆದುಕೊಂಡು ಎಲ್ಲಿಯಾದರೂ ಓಡಾಡಬಹುದು. ನಂತರ ನಿಮ್ಮ ಕೆಲಸ ಮುಗಿಸಿ ಹೊರಬಂದಾಗ ನಿಮ್ಮ ಸೈಕಲ್ಲು ಅಲ್ಲಿಲ್ಲದಿದ್ದರೆ ಗಾಬರಿಯಾಗಬೇಡಿ. ಅಲ್ಲೇ ಇರುವ ಇನ್ಯಾವುದಾದರೂ ಸೈಕಲ್ಲನ್ನು ತೆಗೆದುಕೊಂಡು ಬೇಕಾದಲ್ಲಿಗೆ ಹೋಗಿ. ಹಾಗೆಂದು ಅದನ್ನು ತೆಗೆದುಕೊಂಡು ಕ್ಯಾಂಪಸ್ಸಿನಿಂದ ಹೊರಗೆ ಹೋಗಲು ನೋಡಬೇಡಿ. ಈ ಅನುಕೂಲ ಕ್ಯಾಂಪಸ್ಸಿನೊಳಗೆ ಮಾತ್ರ. ಎಷ್ಟು ಸುಂದರವಾದ ಪರಿಕಲ್ಪನೆಯಲ್ಲವೇ?

**ಹಳೆಯ ನೆನಪು**

ಸೈಕಲ್ಲು ಎಂದರೆ ನನಗೆ ನೆನಪು ಬರುವುದು ನಾನು ಹೈಸ್ಕೂಲಿನಲ್ಲಿ ಶಾಲೆಗೆ ಹೋಗುತ್ತಿದ್ದುದು. ಜಯನಗರದಿಂದ ದಿನವೂ ಗಾಂಧಿಬಜ಼ಾರ್‌ಗೆ ನನ್ನ ಪ್ರಯಾಣ. ಎಂಟನೆಯ ತರಗತಿಯಲ್ಲಿ ಬಸ್ಸಿನಲ್ಲಿ ಆಗುತ್ತಿದ್ದ ಕಿರಿಕಿರಿಯಿಂದ ನನಗೆ ಈ ಸೈಕಲ್ ಮುಕ್ತಿ ನೀಡಿತ್ತು. ಆಗ ನನಗೆ ಬೇಕಾದಂತೆ ಸ್ವತಂತ್ರವಾಗಿ ಓಡಾಡಿಕೊಂಡಿದ್ದೆ. ದಿನವೂ ಒಂದೊಂದು ದಾರಿಯಲ್ಲಿ ಓಡಾಡಿ ನನಗೆ ಅಲ್ಲಿ ಎಲ್ಲ ದಾರಿಗಳು ಪರಿಚಿತವಾಗಿದ್ದವು. ಹೊತ್ತಾದರಂತೂ ನಮ್ಮ ಸೈಕಲ್ಲು ಯಾವ ಶತಾಬ್ಧಿಗೂ ಕಡಿಮೆ ಇರಲಿಲ್ಲ. ಬೆಟ್ಟದಂತಿರುವ ರಸ್ತೆಯಲ್ಲಿ ನಾವು ಸೀಟಿನೆಂದೆದ್ದು ಬಾರ್ ತುಳಿಯುತ್ತಿದ್ದ ಪರಿಯನ್ನು ನೆನಪಿಸಿಕೊಂಡರೆ, ಈಗ ಹಾಗೆ ಬಿಡಲು ಸಾಧ್ಯವೇ ಎಂದು ಅನುಮಾನ ಬರುತ್ತದೆ. ಆದರೆ ವಾಪಸ್ಸು ಬರುವಾಗ ಗೆಳೆಯರೊಂದಿಗೆ ನಿಧಾನವಾಗಿ ಮಾತಾಡಿಕೊಂಡು ಭರುತ್ತಿದ್ದ ಮಜವೇ ಬೇರೆ. ನ್ಯಾಷನಲ್ ಕಾಲೇಜಿನಲ್ಲಿದ್ದಾಗ ಅಲ್ಲಿ ಕೆ. ಆರ್. ಎಂಬುವವರು ಸೈಕಲ್ಲಿನ ಮೇಲೆ ಕುಳಿತೇ ಪೇಪರ್ ಓದಿಕೊಂಡು ಹೋಗುವ ಪ್ರದರ್ಶನ ಮಾಡಿದ್ದರು. ಅದನ್ನು ನೋಡಿ ಅದೆಷ್ಟು ಮರುಳಾದೆವೆಂದರೆ, ನಾವೂ ಮಾಡಬೇಕೆಂದು ಅನೇಕ ಬಾರಿ ಪ್ರಯತ್ನಿಸಿ ಬಿದ್ದು ಮನೆಯಲ್ಲಿ ಬೈಸಿಕೊಂಡಿದ್ದು ಅದೆಷ್ಟು ಬಾರಿಯೋ. ಇದೇ ರೀತಿ ಕಾಲೇಜಿನ ಕ್ರೀಡೆಗಳಲ್ಲಿ ನಡೆಯುತ್ತಿದ್ದ ಸ್ಲೋ ಸೈಕಲ್ ರೇಸ್ ಸಹ ಒಂದು. ಇದನ್ನಂತೂ ಇರುವ ಸಣ್ಣ ಜಾಗದಲ್ಲೇ ಅದೆಷ್ಟು ಬಾರಿ ಬಿದ್ದು ಎದ್ದು ಮಾಡುತ್ತಿದ್ದೆವೋ! ಸೈಕಲ್ ಚಕ್ರ ಹಾಳಾಗುತ್ತದೆ ಎಂದು ಮನೆಯಲ್ಲಿ ಬೈಗುಳಗಳೂ ಆಗುತ್ತಿದ್ದವು.

ಇದಾದ ನಂತರ ಕೆ. ಆರ್. ಸರ್ಕಲ್ಲಿನಲ್ಲಿದ್ದ ಯೂವಿಸಿಯಿಗೂ (ಇಂಜಿನಿಯರಿಂಗ್ ಕಾಲೇಜು) ನನ್ನ ಪ್ರಯಾಣ ಸೈಕಲ್ಲಿನಲ್ಲೇ ಮುಂದುವರಿದಿತ್ತು. ಈ ಪ್ರಯಾಣವು ದೂರವಾಗಿದ್ದರೂ ಬಸ್ಸಿಗಿಂತ ಇದೇ ಅನುಕೂಲವೆನ್ನಿಸಿತ್ತು. ಸೈಕಲ್ಲಿಗೆ ಒಂದು ಟಿ ಸ್ಕ್ವೇರನ್ನು ಸಿಕ್ಕಿಸಿಕೊಂಡು, ಹ್ಯಾಂಡಲಿಗೆ ಡ್ರಾಯಿಂಗ್ ಶೀಟನ್ನು ಕಟ್ಟಿಕೊಂಡರೆ ನನ್ನ ಪ್ರಯಾಣದ ಎಲ್ಲಾ ಸಿದ್ಧತೆಯೂ ಮುಗಿದಂತೆ. ಈ ಪ್ರಯಾಣದಲ್ಲಿ ದಾರಿಯಲ್ಲಿ ಕೂಡಿಕೊಳ್ಳುವ ಗೆಳೆಯರು. ಇತರ ಗೆಳೆಯರೇನಾದರೂ ಮುಂದೆ ಹೋಗುತ್ತಿದ್ದುದು ಕಂಡರೆ ವೇಗದಿಂದ ಹೋಗಿ ಅವರನ್ನು ಕೂಡಿಕೊಳ್ಳುತ್ತಿದ್ದೆವು.

ಬೆಳಗಿನ ಛಳಿಯಲ್ಲಿ ನಾವು ಏಳೂವರೆಗೆ ತರಗತಿಗಳಿಗೆ ಹೋಗಬೇಕಿತ್ತು. ಆಗ ಹೋದ ಕೂಡಲೆ ಮರಗಟ್ಟಿದ ಕೈಗಳನ್ನು ಉಜ್ಜಿಕೊಂಡು ಪಾಠಗಳನ್ನು ಬರೆದುಕೊಳ್ಳಲಾಗದೆ ಒದ್ದಾಡುತ್ತಿದ್ದುದು ಇಂದಿಗೂ ನೆನಪಿದೆ. ಇಂದು ದ್ವಿಚಕ್ರ ವಾಹನಗಳಲ್ಲಿ ಝುಮ್ ಎಂದು ಬರುವ ಹುಡುಗರಿಗೆ ಇಂತಹ ಅನುಭವ ಖಂಡಿತ ಇಲ್ಲ. ಅವರಿಗೆ ಬೆಳಿಗ್ಗೆ ಒಂಭತ್ತು ಗಂಟೆಗೆ ತರಗತಿಯಿದ್ದರೂ ತಡವಾಗಿ ಬಂದು, ಟ್ರಾಫಿಕ್ ಜ್ಯಾಮ್ ಎಂದೋ, ಬಸ್ ಸಿಗಲಿಲ್ಲವೆಂದೋ, ವಾಹನ ಪಂಕ್ಚರ್ ಆಯಿತೆಂದೋ ನೆಪ ಹೇಳುವವರೇ ಹೆಚ್ಚು.

ಕಾಲೇಜಿನಲ್ಲಿ ಸೈಕಲ್ ಸ್ಟ್ಯಾಂಡಿನ ನಾಗಪ್ಪ ನಮಗೆಲ್ಲಾ ಚಿರಪರಿಚಿತನಾಗಿದ್ದ. ಮುಂದೆ ನಾನು ಕಾಲೇಜು ಮುಗಿಸಿ ಹಲವು ವರ್ಷಗಳ ನಂತರ ಅದೇ ಯೂವಿಸಿಯಿಗೆ ಅತಿಥಿ ಪ್ರಾಧ್ಯಾಪಕನಾಗಿ ಪಾಠ ಮಾಡಲು ಹೋದಾಗ, ಆ ನಾಗಪ್ಪ ಇನ್ನೂ ಅಲ್ಲೇ ಇದ್ದ. ನಾನು ಅವನನ್ನು, ಅವನು ನನ್ನನ್ನು ಗುರುತು ಹಿಡಿದು ಮಾತನಾಡಿಕೊಂಡಾಗ ಹಳೆಯ ನೆನಪುಗಳೆಲ್ಲವೂ ಮರುಕಳಿಸಿದ್ದವು. ಈ ಕಾಲೇಜಿಗೆ ಹೋಗುತ್ತಿದ್ದಾಗ ನಮ್ಮ ಪ್ರಾಧ್ಯಾಪಕರಾದ ಕೆ. ಎನ್. ಅಯ್ಯಂಗಾರ್ ಎಂಬುವವರೂ ಒಮ್ಮೊಮ್ಮೆ ಸೈಕಲ್ಲಿನಲ್ಲಿ ನಮಗೆ ಜೊತೆಯಾಗುತ್ತಿದ್ದರು. ''ನೀವು ಬೇಗ ಹೋಗಿ'' ಎಂದು ಅವರು ನಮ್ಮನ್ನು ಓಡಿಸಿ ತಾವು ಹಿಂದೆ ನಿಧಾನವಾಗಿ ಬರುತ್ತಿದ್ದರು. ಅವರೊಬ್ಬ ಸರಳ ಜೀವಿ, ನಿಗರ್ವಿ. ಸೈಕಲ್ಲಿನಲ್ಲಿ ಓಡಾಡುವುದಕ್ಕೆ ಅವರೆಂದೂ ಮುಜುಗರಪಟ್ಟುಕೊಳ್ಳುತ್ತಿರಲಿಲ್ಲ. ವಾರದಲ್ಲಿ ಒಂದೆರಡು ದಿನ ಅವರು ಕಾರನ್ನೂ ತರುತ್ತಿದ್ದರು. ಅದರಲ್ಲಿಯೂ ಒಮ್ಮೊಮ್ಮೆ ಹುಡುಗರಿಗೆ ಡ್ರಾಪ್ ಸಿಗುತ್ತಿತ್ತು.

ಈ ಸೈಕಲ್ಲಿನಿಂದ ನನಗೆ ಹಳೆಯ ಬೆಂಗಳೂರಿನ ವಿವಿಧ ಪೇಟೆಗಳು, ಕಬ್ಬನ್ ಪಾರ್ಕು, ಲಾಲ್‌ಬಾಗಿನ ಮೂಲೆಮೂಲೆಗಳು ಪರಿಚಯವಾದುವು. ಆಗ ಲಾಲ್‌ಬಾಗಿನೊಳಗೆ ವಾಹನಗಳನ್ನು ಬಿಡುತ್ತಿದ್ದರು. ಇಂದು ನನಗೆ ಬೆಂಗಳೂರಿನ ಮೂಲೆಮೂಲೆಗಳೂ ಪರಿಚಯವಿದೆಯೆಂದರೆ ಅದಕ್ಕೆ ಮುಖ್ಯ ಕಾರಣ ನನ್ನ ಸೈಕಲ್ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇದಕ್ಕೆ ಸರಿಯಾಗಿ ಮನೆಯಲ್ಲೂ ನಮ್ಮ ತಂದೆ ತಮ್ಮ ಅನೇಕ ಕೆಲಸಗಳನ್ನು ಹೇಳಿದಾಗ ದಾರಿ ತೋರಿಸಿದ್ದು ಈ ಸೈಕಲ್ಲೇ. ಮನೆಯಲ್ಲಿ ಬೇರೆ ಯಾರಾದರೂ ''ಅವನಿನ್ನೂ ಚಿಕ್ಕವನು, ಜಾಗ ತಿಳಿಯುವುದಿಲ್ಲ'' ಎಂದರೆ ''ಅವನಿಗೇನು ಬಾಯಿ ಇಲ್ಲವೇ, ಓಡಾಡಲು ಸೈಕಲ್ಲಿಲ್ಲವೇ'' ಎಂದು ಹೇಳಿ, ''ಜಾಗದ ಗುರುತನ್ನು ಹೇಳಿ ಗೊತ್ತಾಗದಿದ್ದರೆ ಯಾರನ್ನಾದರೂ ಕೇಳು, ಹೋದ ದಾರಿಯನ್ನು ಗುರುತಿಟ್ಟುಕೊಂಡು ಮನೆಗೆ ಸರಿಯಾಗಿ ಬಾ'' ಎಂದು ಧೈರ್ಯ ತುಂಬುತ್ತಿದ್ದರು. ಹೀಗಾಗಿ ಸೈಕಲ್ಲಿನಲ್ಲಿ ಕುಳಿತುಬಿಟ್ಟೆನೆಂದರೆ ಈ ರಸ್ತೆ ಎಲ್ಲಿಗೆ ಹೋಗುತ್ತದೆ, ಆ ರಸ್ತೆ ಎಲ್ಲಿಗೆ ಹೋಗುತ್ತದೆ, ಯಾವುದು ಅತಿ ಹತ್ತಿರದ ದಾರಿ, ಎಂದು ಹುಡುಕಾಟ ನಡೆಸುವುದೇ ಒಂದು ಕಾಯಕವಾಗಿತ್ತು.

ನಮ್ಮ ತಂದೆ ಉಪಯೋಗಿಸುತ್ತಿದ್ದ ಸೈಕಲ್ಲಿನ ಹೆಸರು 'ಹಿಲ್ಮನ್'. ಅದು ನಮ್ಮ ತಾತನ ಕಾಲದ್ದು. ಎತ್ತರವಾಗಿತ್ತು. ನಾವು ಅದರಲ್ಲಿ ತುಳಿಯುತ್ತಿದ್ದುದು ಕೇವಲ 'ಕತ್ತರಿ' ಮೂಲಕ (ಅಂದರೆ ಬಾರ್‌ನ ಕೆಳಗೆ ಕಾಲು ತೂರಿಸಿ ತುಳಿಯುವುದು). ನಮ್ಮ ತಂದೆ ಪ್ಯಾಂಟಿಗೆ ತೊಡರದಂತೆ ಒಂದು ತಂತಿಯನ್ನು ಬಿಗಿದು ತಲೆಗೆ ಹ್ಯಾಟೊಂದನ್ನು ಇಟ್ಟುಕೊಂಡು ಸೈಕಲ್ಲಿನ ಮೇಲೆ ಓಡಾಡುತ್ತಿದ್ದುದು ನನಗೆ ಇಂದಿಗೂ ನೆನಪಿದೆ. ಬಹುಶಃ ಆ ಕಾಲಕ್ಕೆ ಅದು ಇಂದಿನ ಒಂದು ದ್ವಿಚಕ್ರ ವಾಹನಕ್ಕೆ ಸಮವಾಗಿತ್ತೇನೋ. ನಮ್ಮನ್ನು ಅದರ ಮೇಲೆ ಕೂಡಿಸಿ ನಿಧಾನವಾಗಿ ಓಡಾಡಿಸುತ್ತಾ ಒಂದೊಂದು ಜಾಗವನ್ನೂ ವಿವರಿಸುತ್ತಿದ್ದರು. ಅದರಿಂದ ನನಗೆ ಇಂದಿಗೂ ಅನೇಕ ಜಾಗಗಳನ್ನು ನೋಡಿದಾಗ ನಮ್ಮ ತಂದೆಯೊಂದಿಗೆ ಅವರ ಸೈಕಲ್ಲಿನ ಮೇಲೆ ಕುಳಿತ ನೆನಪೂ ಕಾಡುತ್ತದೆ. 'ಬೆಂಗಳೂರಿನ ಇತಿಹಾಸ' ಎಂಬ ಬೃಹತ್ ಗ್ರಂಥವನ್ನು ಬರೆದ ಅವರು (ಬ. ನ. ಸುಂದರರಾವ್) ಅದರಲ್ಲಿ ಬರುವ ಅನೇಕ ವಿಷಯಗಳನ್ನು ನಮಗೆ ಪ್ರತ್ಯಕ್ಷವಾಗಿಯೂ ತೋರಿಸಿದ್ದರು.

**ಸೈಕಲ್ ಯಾತ್ರೆ**

ನಾವೆಲ್ಲಾ ಇಂಜಿನಿಯರಿಂಗ್ ಕಾಲೇಜಿಗೆ ಸೇರಿದ ಮೊದಲನೇ ವರ್ಷದ ರಜೆಯಲ್ಲಿ ಬನ್ನೇರುಘಟ್ಟಕ್ಕೆ ಸೈಕಲ್‌ನಲ್ಲಿ ಹೋಗಿ ವಿಹಾರ ಮಾಡಿ ಬಂದದ್ದು ಇಂದಿಗೂ ನನ್ನ ಮನದಲ್ಲಿ ಅಚ್ಚಳಿಯದೇ ಉಳಿದಿದೆ. ಹಾಗೆಯೇ ಸ್ಕೌಟ್ ಕ್ಯಾಂಪಿಗೆಂದು ಹೆಸರುಘಟ್ಟದ ಕೆರೆಯ ಬಳಿಗೆ ಸೈಕಲ್ಲಿನಲ್ಲೇ ಹೋಗಿ ಟೆಂಟುಗಳನ್ನು ಹಾಕಿ ನಾವೇ ಅಡುಗೆ ಮಾಡಿ ತಿಂದು ತೇಗಿ ಬಂದದ್ದೂ ಇನ್ನೂ ನೆನಪಿದೆ. ಆಗ ನಮಗೆ ಇವೆಲ್ಲಾ ಎಷ್ಟು ದೂರದ ಜಾಗಗಳು ಎನ್ನಿಸುತ್ತಿತ್ತು. ಆದರೆ ಇಂದಿನ ಬೆಂಗಳೂರಿನ ಬೆಳವಣಿಗೆಯನ್ನು ಕಂಡಾಗ ಅವೆಲ್ಲಾ ನಗರಕ್ಕೇ ಸೇರಿಬಿಟ್ಟಿವೆಯೇನೋ ಅನ್ನಿಸುತ್ತದೆ.

**ಸೈಕಲ್ಲನ್ನು ತಳ್ಳಿಕೊಂಡು ಹೋದದ್ದು**

ಸೈಕಲ್ಲು ಮತ್ತು ನಮ್ಮ ತಂದೆಯ ವಿಷಯಕ್ಕೆ ಬಂದಾಗ ಒಂದು ಸಣ್ಣ ಸಂಗತಿ ನೆನಪಿಗೆ ಬರುತ್ತದೆ. ಒಮ್ಮೆ ಯಾವುದೋ ತುರ್ತು ಕೆಲಸವಿತ್ತು. ನಾವುಗಳೆಲ್ಲಾ ಇನ್ನೂ ಚಿಕ್ಕವರು. ಆಗ ಅಲ್ಲೇ ಇದ್ದ ನಮ್ಮ ದೂರದ ನೆಂಟರ ಹುಡುಗನನ್ನು ನಮ್ಮ ತಂದೆ, ''ನೀನು ಬೇಗ ಹೋಗಿ ಆ ಕೆಲಸ ಮುಗಿಸಿಕೊಂಡು ಬಾ'', ಎಂದರು. ಆ ಹುಡುಗನಿಗೋ ಸಂಕೋಚ, ಅಲ್ಲದೇ ನಮ್ಮ ತಂದೆಯ ವರನ್ನು ಕಂಡರೆ ಭಯ. ಸಾಲದ್ದಕ್ಕೆ ನಮ್ಮ ತಂದೆ ತಮ್ಮ ಸೈಕಲ್ಲನ್ನು ಕೊಟ್ಟು ಬೇಗ ಇದರಲ್ಲಿ ಹೋಗಿ ಕೆಲಸ ಮುಗಿಸಿಕೊಂಡು ಬಾ ಎಂದು ಆದೇಶ ನೀಡಿಯೇ ಬಿಟ್ಟರು. ಆ ಹುಡುಗ ಬೇರೇನೂ ತೋಚದೆ ಆ ಸೈಕಲ್ಲನ್ನು ತಳ್ಳಿಕೊಂಡು ಹೊರಟ. ಹತ್ತಿಕೊಂಡು ಬೇಗ ಹೋಗ ಬಾರದೇನೋ ಎಂದು ನಮ್ಮ ತಂದೆ ಗದರಿದರು. ಆಗ ಆ ಹುಡುಗ ಹೆದರುತ್ತಾ ತನಗೆ ಸೈಕಲ್ಲು ತುಳಿಯಲು ಬರುವುದಿಲ್ಲ ಎಂದು ಬೆದರಿ ಹೇಳಿದಾಗ ಅವರಿಗೆ ಸಿಟ್ಟು, ನಗು ಒಟ್ಟಿಗೆ ಬಂದಿದ್ದವು. ನಂತರ ಆ ಕೆಲಸ ಹೇಗೋ ಆಯಿತು. ಆದರೆ ನಮ್ಮ ತಂದೆ ಆ ಹುಡುಗನಿಗೆ ಮೊದಲು ಸೈಕಲ್ ತುಳಿಯುವುದನ್ನು ಕಲಿ, ಗಂಡು ಹುಡುಗರಿಗೆ ಇದು ತುಂಬ ಮುಖ್ಯ ಎಂದು ಉಪದೇಶ ನೀಡಿ ಅವನು ಕಲಿಯುವಂತೆ ಮಾಡಿದರು. ಅದೇ ಸಮಯದಲ್ಲಿ ನಾವೂ ಅವನೊಂದಿಗೆ ಸೈಕಲ್ಲನ್ನು ಕಲಿತುಬಿಟ್ಟೆವು.

ಒಂದು ಕಾಲಿನ ಮೇಲೆ ತಗ್ಗಾದ ರಸ್ತೆಯಲ್ಲಿ ಬ್ಯಾಲೆನ್ಸ್ ಮಾಡಿ ಸಾಗುವುದು, ನಂತರ ಕತ್ತರಿ, ಬಾರ್, ನಂತರ ಸೀಟು, ಇವು ಕಲಿಯುವಾಗಿನ ವಿವಿಧ ಹಂತಗಳು. ಅಂದು ಚಿಕ್ಕ ಸೈಕಲ್‌ಗಳು ಇರಲಿಲ್ಲವಾದ್ದರಿಂದ ಎಲ್ಲರೂ ದೊಡ್ಡ ಸೈಕಲ್ಲಿನ ಮೇಲೆ ಈ ಹಂತಗಳನ್ನು ದಾಟಿಯೇ ಮುಂದು ವರಿಯಬೇಕಿತ್ತು. ನನಗೆ ಸೈಕಲ್ ತುಳಿಯಲು ಬಂದರೂ ಸೀಟಿನಲ್ಲಿ ಕುಳಿತಾಗ ಕಾಲು ಎಟುಕುತ್ತಿರಲಿಲ್ಲವಾದ್ದರಿಂದ ಸುಮಾರು ದಿನ ನಮ್ಮ ತಂದೆಯ ದೊಡ್ಡ ಸೈಕಲ್ಲಿನಲ್ಲಿ 'ಕತ್ತರಿ' ತುಳಿದುಕೊಂಡೇ ಓಡಾಡುತ್ತಿದ್ದೆ.

**ಅಂದು ಇಂದು**

ಮುಂದೆ ಕೆಲಸಕ್ಕೆ ಸೇರಿದಾಗ ಕಛೇರಿಯದೇ ಬಸ್ಸುಗಳ ಅನುಕೂಲವಿದ್ದುದರಿಂದ ಈ ಸೈಕಲ್ಲಿನ ನಂಟು ತಪ್ಪಿತು. ನನಗೆ ಕೊಡಿಸಿದ್ದ ಹಸಿರು ಬಣ್ಣದ ಬಿ.ಎಸ್.ಎ. ಸೈಕಲ್ಲನ್ನು ಅನೇಕ ದಿನ ನೆನಪಿಗೆಂದು ಹಾಗೆಯೇ ಇಟ್ಟುಕೊಂಡಿದ್ದೆ. ಆದರೆ ಅದನ್ನು ಉಪಯೋಗಿಸದೆ ಸುಮ್ಮನೆ ಇಟ್ಟು ಇಟ್ಟು ಇಟ್ಟಾಳನಾಗುತ್ತೇನೆ ಎಂದು ಒಲ್ಲದ/ಒಳ್ಳೆಯ ಮನಸ್ಸಿನಿಂದ ಸೈಕಲ್ಲಿನ ಉಪಯೋಗವಿರುವ ಬಡವರೊಬ್ಬರಿಗೆ ಅದನ್ನು ದಾನ ಮಾಡಿದೆ. ಈಗಲೂ ನನ್ನ ಆ ಸೈಕಲ್ಲು ಎಲ್ಲೋ ಉಪಯೋಗವಾಗುತ್ತಿದೆ ಹಾಗೂ ನನ್ನ ಮನಸ್ಸಿನಲ್ಲಿ ಅದರ ನೆನಪು ಅಚ್ಚಳಿಯದೇ ಉಳಿದಿದೆ ಎಂಬುದೇ ಒಂದು ಸಮಾಧಾನ.

ನಾನು ನನ್ನ ಮಗನಿಗೆ ಸೈಕಲ್ ಕಲಿಸಿದ ನೆನಪು ಇನ್ನೂ ಮಾಸಿಲ್ಲ. ಅವನೊಂದಿಗೆ ನಾನೂ ಓಡುತ್ತಿದ್ದುದು, ಎದುರಿಗೆ ಕಲ್ಲಿದೆ, ಹೋಗಬೇಡ ಎಂದರೆ ಅವನು ಸೀದಾ ಅದಕ್ಕೇ ಡಿಕ್ಕಿ ಹೊಡೆಯುತ್ತಿದ್ದುದು, ಇವೆಲ್ಲಾ ಮರೆಯ ಲಾರದ ಸೈಕಲ್ ನೆನಪುಗಳು. ಇಂದು ಅವನು ಒಂದು ಗೇರ್ ಸೈಕಲ್‌ಅನ್ನು ಉಪಯೋಗಿಸುತ್ತಾನೆ. ಆದರೂ ಹಿಂದಿನ ಸಾಮಾನ್ಯ ಸೈಕಲ್ಲಿನಲ್ಲಿ ಸಿಗುತ್ತಿದ್ದ ಮಜ ಇದರಲ್ಲಿ ಬರುವುದಿಲ್ಲ. ಆದರೆ ಇಂದಿನವರೆಗೆ ಸೈಕಲ್ ಎಂದರೆ ಅದೇನೋ ತಾತ್ಸಾರ, ಬೈಕುಗಳಿಗೆ ಎಲ್ಲಿಲ್ಲದ ಪ್ರಾಶಸ್ತ್ಯ, ಜೊತೆಗೆ ಇಂದಿನ ಜೀವನದ ವೇಗವೂ ಮೊದಲಿಗಿಂತ ಹೆಚ್ಚು. ಎಲ್ಲವೂ ಸೂಪರ್ ಫಾಸ್ಟ್. ಈಗಿನವರು ಹಿಂದಿನಂತೆ ನಿಧಾನಸ್ಥರಲ್ಲ, ಹೀಗಾಗಿ ಸೈಕಲ್, ಗಾಡಿಗಳು ಎಲ್ಲವೂ ಹಿಂದೆ ಸರಿದಿವೆ.

ಅನೇಕ ದೇಶಗಳಲ್ಲಿ ಸೈಕಲ್ಲನ್ನು ಮರೆತು ಉಳಿದ ವಾಹನಗಳ ರುಚಿ ಕಂಡು ಈಗ ಸೈಕಲ್ಲೇ ವಾಸಿ ಎಂದು ಮತ್ತೆ ಅದಕ್ಕೇ ಮುಗಿಬಿದ್ದಿದ್ದಾರೆ. ಇದರಿಂದಾಗಿ ಅನೇಕ ಸೈಕಲ್ ಕ್ಲಬ್‌ಗಳು ಹುಟ್ಟಿಕೊಂಡಿವೆ. ಯೂರೋಪ್ ಮೊದಲಾದ ಕಡೆ ಸೈಕಲ್ ಸವಾರರಿಗಾಗಿಯೇ ರಸ್ತೆಯ ಒಂದು ಬದಿಯನ್ನು ಮೀಸಲಾಗಿಡಲಾಗಿದೆ. ಈ ಸೈಕಲ್ ಸವಾರಿಯಲ್ಲೂ ಚೀನಾ ನಮಗಿಂತ ಮುಂದಿದೆ. ಮನಸ್ಸು ಮಾಡಿದರೆ ನಾವು ಅವರನ್ನು ಮೀರಿಸಬಹುದು. ಕಾರು, ದ್ವಿಚಕ್ರ ವಾಹನಗಳಿಂದ ನಗರಗಳನ್ನು ಹಾಳುಮಾಡಿ ನಂತರ ಮತ್ತೆ ಸೈಕಲ್ಲಿಗೆ ಬರುವುದಕ್ಕಿಂತ ಈಗಲೇ ಸೈಕಲ್ಲಿಗೆ ಪ್ರಾಶಸ್ತ್ಯ ಕೊಟ್ಟರೆ ಒಳ್ಳೆಯದಲ್ಲವೇ? ಮುಂದುವರಿದ ದೇಶಗಳ ಹಿನ್ನೆಲೆಯಲ್ಲಿ ಇದನ್ನು ಈಗಲೇ ಅಳವಡಿಸಿ ಕೊಳ್ಳುವುದು ಸೂಕ್ತ.

ಇತ್ತೀಚೆಗೆ ಪ್ರವಾಹ ಪೀಡಿತ ನಗರವೊಂದರ ಸೈಕಲ್ ಪ್ರೇಮಿಗಳ ಚಿತ್ರ ನೋಡಿದಾಗ ಸಂತೋಷವಾಯಿತು. ಅದರಲ್ಲಿ ಒಬ್ಬಾತ ತನ್ನ ಸೈಕಲ್ಲನ್ನು ದೋಣಿಯಲ್ಲಿ ಇಟ್ಟುಕೊಂಡು ಸಾಗಿಸುತ್ತಿದ್ದ ದೃಶ್ಯವಿತ್ತು. ಇನ್ನೊಂದರಲ್ಲಿ ಆ ನೆರೆಯಲ್ಲೂ ಒಬ್ಬ ಸೈಕಲ್ಲನ್ನು ಎರಡೂ ಕೈಗಳಿಂದ ಮೇಲೆತ್ತಿ ಹಿಡಿದು ಆತ ನದಿಯನ್ನು ದಾಟುತ್ತಿದ್ದ ಚಿತ್ರವಿತ್ತು. ಅವರಿಗಿದ್ದ ಸೈಕಲ್‌ನ ಮೇಲಿನ ಪ್ರೇಮ ಹಾಗು ಅದರ ಆವಶ್ಯಕತೆ ಇನ್ನೆಷ್ಟಿರಬಹುದು, ಅಲ್ಲವೆ! ಬಡವರ ಪಾಲಿಗಂತೂ ಇದು ಕುಳಿತರೆ ಕುದುರೆ, ತಳ್ಳಿಕೊಂಡು ನಡೆದರೆ ಗೆಳೆಯ, ಭಾರ ಹೇರಿದರೆ ಕತ್ತೆ. ಹೀಗಾಗಿ ಅದಿಲ್ಲದೆ ಅವರ ಜೀವನವೇ ಸಾಗುವುದಿಲ್ಲ. ಆದರೆ ಇಂದು ಉಳ್ಳವರು ಸೈಕಲ್ ಎಂಬುದು ಬಡವರ ವಾಹನ ಎಂದು ಹೀನಾಯ ಮಾಡದೆ ತಾವೂ ಈ ವಿಷಯದಲ್ಲೆಲ್ಲಾ ನಿಮ್ಮೊಂದಿಗಿದ್ದೇವೆ ಎಂದು ಸಾಂತ್ವನ ಹೇಳಬಹುದು.

ಬೆಂಗಳೂರಿನಲ್ಲಿ ಏರು ತಗ್ಗುಗಳು ಹೆಚ್ಚಿರುವುದರಿಂದ ಸೈಕಲ್ ಉಪಯೋಗಿಸುವವರ ಸಂಖ್ಯೆ ಕಡಿಮೆ ಎಂದು ಒಮ್ಮೆ ನನ್ನ ಗೆಳೆಯ ಹೇಳಿದ. ಅಭ್ಯಾಸವಿದ್ದವರಿಗೆ ಇವೆಲ್ಲ ಲೆಕ್ಕಕ್ಕೇ ಇರುವುದಿಲ್ಲ. ಉಪಯೋಗಿಸಲು ಮನಸ್ಸಿಲ್ಲ, ತಮ್ಮ ಪ್ರತಿಷ್ಠೆಗೆ ಎಲ್ಲಿ ಕುಂದು ಬರುತ್ತದೋ ಎಂಬ ಭಯ ಮೊದಲಾದುವುಗಳೇ ಇದಕ್ಕೆ ಕಾರಣ ಎಂದು ನನ್ನ ಅನಿಸಿಕೆ. ಚಕ್ರ ಸುತ್ತುತ್ತಲೇ ಇರುತ್ತದೆ ಅನ್ನುತ್ತಾರಲ್ಲಾ ಹಾಗೆ (ಈಗ ರೇಡಿಯೋ ಮತ್ತೆ ಬಂದಿರುವ ಹಾಗೆ) ಸೈಕಲ್ ಸಹ ಫೀನಿಕ್ಸ್ ಪಕ್ಷಿಯಂತೆ ಮತ್ತೆ ಬರುತ್ತದೆ. ಅಮೆರಿಕ ಮೊದಲಾದ ಕಡೆಯ ಈಗಿನ ಟ್ರೆಂಡ್ ನೋಡಿದರೆ ಇದು ಸುಳ್ಳಲ್ಲ. ಹಾಗಾದರೂ ಸೈಕಲ್ಲುಗಳು ಬರಲಿ, ಜನ ಮೊದಲಿನಂತೆ ಸ್ವಲ್ಪ ನಿಧಾನಸ್ಥರಾಗಲಿ, ವಾತಾವರಣದ ಮಾಲಿನ್ಯ ಕಡಿಮೆಯಾಗಲಿ. ಸೈಕಲ್ ಎಂದು ತಾತ್ಸಾರ ಮಾಡದೆ, ಹಂಗಿಸದೆ ಎಲ್ಲರೂ ಅದನ್ನು ಸರಿಯಾಗಿ ಉಪಯೋಗಿಸಿದರೆ ಜನಗಳ ಆರೋಗ್ಯವೊಂದೇ ಅಲ್ಲ ನಗರದ ಆರೋಗ್ಯವೂ, ಪೆಟ್ರೋಲಿನ ಅಭಾವವೂ ಸುಧಾರಿಸಬಹುದು. ಎಲ್ಲರೂ ಹೆಚ್ಚಾಗಿ ಸೈಕಲ್, ಸಾರ್ವಜನಿಕ ವಾಹನಗಳನ್ನು ಬಳಸಿದರೆ ಆಗ ವಾತಾವರಣವೂ ಹಿತವಾಗಿ ಓಡಾಡಲು ತೊಂದರೆಯಾಗು ವುದಿಲ್ಲ. ೨೦೦೮ ಮಾತ್ರ ಏಕೆ, ಎಲ್ಲ ವರ್ಷಗಳನ್ನೂ ಸೈಕಲ್ಲಿನ ವರ್ಷಗಳನ್ನಾಗಿ ಮಾಡಿಬಿಟ್ಟರೆ ಒಳ್ಳೆಯದಲ್ಲವೇ?

ಬಿ. ಎಸ್. ಜಗದೀಶಚಂದ್ರ
ನಂ. ೪೪೨, ೩೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧

ಡಾ॥ ಪಾರ್ಕರ್ ಅವನಿಗೆ ಪದೇ ಪದೇ ತರ್ಕಬದ್ಧ ಕಾರಣಗಳನ್ನು ನೀಡಿ ಅವನನ್ನು ಸಮಾಧಾನ ಸ್ಥಿತಿಗೆ ತರಲು ಯತ್ನಿಸುತ್ತಾರೆ. ''ಇದೆಲ್ಲ ಮರೆಯಬೇಕು ನೀನು, ನೀನು ಅಪರಾಧಿಯಲ್ಲ. ಹಿರೋಷಿಮಾದ ಮೇಲೆ ಆ ವಿಮಾನ ಹಾರಿಸುವ ಜವಾಬ್ದಾರಿ ನಿನ್ನ ಪಾಲಿಗೆ ಬಂತು ಅಷ್ಟೆ. ನಿನ್ನ ಜಾಗದಲ್ಲಿ ಇದೇ ಕರ್ತವ್ಯ ನಿರ್ವಹಿಸಲು ಬೇಕಾದಷ್ಟು ಚಾಲಕರು ಇದ್ದರು. ಯುದ್ಧ ಮುಗಿಯಿತು. ಎಲ್ಲ ಮನೆಗೆ ಹೋದರು. ನೀನು ತಾನೆ ಮಾಡಿದ್ದೇನು ? ಹವಾಮಾನದ ವರದಿ ನೀಡಿದೆ, ಅಷ್ಟೆ'' ಎಂದು ಪದೇ ಪದೇ ಹೇಳಿದರು. 'ಹದಿನಾಲ್ಕು ತಿಂಗಳು ಪ್ರತಿದಿವಸ ಇದೇ ಪ್ರವಚನ ನಡೆಯಿತು. ಕೊನೆಗೊಮ್ಮೆ ಆ ವೈದ್ಯನನ್ನು ನೋಡಲು ನಿರಾಕರಿಸುವ ಸ್ಥಿತಿಗೆ ಬಂದೆ. ನನ್ನ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು'. ತಾನೊಬ್ಬ ಯುದ್ಧವಿರೋಧಿ, ಖಂಡಿತವಾಗಿ. 'ಆದರೆ ಹಿರೋಷಿಮಾ ನಂತರ ನನಗೆ ಧರ್ಮ, ದೇವರುಗಳಲ್ಲಿ ನಂಬಿಕೆ ಹೇಗೆ ಸಾಧ್ಯ ?' ತಾನು ನಡೆಸಿದಂಥ ಕೃತ್ಯ ಎಸಗಿದವನು ಮೌನವ್ರತದ ದೀಕ್ಷೆ ಪಡೆದ ಸನ್ಯಾಸಿಯ ತರಹ ಬದುಕಬೇಕು. ಆ ಸನ್ಯಾಸಿಯ ಪ್ರಾರ್ಥನೆ ಒಂದೇ, ''ಕ್ಲಾಡ್ ಎದರ್ಲಿ, ಪಾಲ್ ಟಿಬೆಟ್ಸ್ ಮತ್ತು ಈ ಬಾಂಬ್‌ನ ಹಿಂದೆ ಇರುವ ಎಲ್ಲ ವಿಜ್ಞಾನಿಗಳು ಅಂಥವರು ಮತ್ತೆ ಎಂದೆಂದಿಗೂ ಹುಟ್ಟದೇ ಇರಲಿ'' ಎಂದು ಮಾತ್ರ ಆಗಿರಬೇಕು.



# ಪರಮಾಣು ಬಾಂಬು ಎಂದೆಂದಿಗೂ ವಿಪತ್ಕಾರಿ

**ಪ್ರೊ॥ ಜಿ. ಕೆ. ಗೋವಿಂದ ರಾವ್**

ಹಿಟ್ಲರನ ನಾಝಿ ಜರ್ಮನಿ ಹನ್ನೆರಡು ವರ್ಷಗಳಲ್ಲಿ ಆರು ದಶಲಕ್ಷ ಯೆಹೂದಿಗಳ ಹತ್ಯೆ ನಡೆಸಿತು ಎಂಬುದು ಈಗ ಇತಿಹಾಸ. ಅಂದರೆ ನಿಮಿಷಕ್ಕೆ ಒಬ್ಬನಂತೆ ಹನ್ನೆರಡು ವರ್ಷಗಳ ಕಾಲ ಈ ಮಾರಣಹೋಮ ನಡೆಸಿತು. ಆದರೆ ಅಮೆರಿಕ ೧೯೪೫ ಆಗಸ್ಟ್ ಆರರ ಬೆಳಗ್ಗೆ ಹತ್ತೇ ನಿಮಿಷಗಳಲ್ಲಿ ೬೦,೦೦೦ ನಾಗರಿಕರನ್ನು ಅಣುಬಾಂಬಿನ ಪ್ರಯೋಗದಿಂದ ಹತ್ಯೆ ನಡೆಸಿತು. ಅಂದರೆ ನಿಮಿಷಕ್ಕೆ ೬೦೦೦ ಜನರನ್ನು ಕೊಂದಂತಾಯಿತು. ಹಿಟ್ಲರನ ಭಯಾನಕ ಕೃತ್ಯಕ್ಕಿಂತ ೬೦೦೦ಪಟ್ಟು ಮಿಗಿಲಾದ ಅಮಾನುಷ ಕೃತ್ಯವನ್ನು ಅಮೆರಿಕ ನಡೆಸಿತು ಎಂಬ ಸತ್ಯ ಅಂತರರಾಷ್ಟ್ರೀಯ ನಾಗರಿಕ ಪ್ರಜ್ಞೆಯಲ್ಲಿ ಇಂದಿಗೂ, ಬಹುಶಃ, ಸಾಕಷ್ಟು ಆಳವಾಗಿ ಅಚ್ಚೊತ್ತಿದಹಾಗೆ ಕಾಣುವುದಿಲ್ಲ. ವಿಶ್ವವಿಖ್ಯಾತ ವಿಜ್ಞಾನಿಗಳಾದ ಆಲ್ಬರ್ಟ್ ಐನ್‌ಸ್ಟೀನ್ ಮತ್ತು ನೀಲ್ಸ್ ಬ್ಹೋರ್ ಅಂಥವರ ಸಲಹೆ, ಎಚ್ಚರಿಕೆಗಳೆಲ್ಲವನ್ನೂ ತಿರಸ್ಕರಿಸಿ ಅಮೆರಿಕನ್ ಸರ್ಕಾರ ಈ ಅಣುಬಾಂಬಿನ ಸಾಮರ್ಥ್ಯವನ್ನು ಮತ್ತು ಅದರಿಂದಾಗಿ ಅಮೆರಿಕ ರಾಷ್ಟ್ರದ ಮಿಲಿಟರಿ ಸಾರ್ವಭೌಮತ್ವವನ್ನು ಸ್ಥಾಪಿಸಲು ೬೦,೦೦೦ ಜನರ ಆಹುತಿ ತೆಗೆದುಕೊಂಡಿತು. ಅಂದಿನ ರಾಷ್ಟ್ರಾಧ್ಯಕ್ಷ ಟ್ರೂಮನ್ ಹೇಳಿದ್ದ 'ಈ ಜಗತ್ತು ಕಂಡರಿಯದಂಥ ವಿನಾಶವನ್ನು ಆಕಾಶದಿಂದ ಮಳೆಸುರಿಸಿ ಜಪಾನಿಗೆ ಪಾಠ ಕಲಿಸುತ್ತೇವೆ' ಎಂಬ ಮಾತಿನಂತೆಯೇ ಆಯಿತು.

ಆದರೆ ಪ್ರಶ್ನೆ ಕೇವಲ ಜಪಾನಿಯರ ಹತ್ಯೆಯಷ್ಟೇ ಈ ಅಣುಬಾಂಬಿನ ದುರಂತದ ಕತೆಯೆ ? ಆ ಅಷ್ಟೂ ಜನ ಹತ್ಯೆಗೊಂಡರು ಹಾಗೂ ಇಂದಿಗೂ ಕೂಡ ದೈಹಿಕವಾಗಿ ಜಪಾನಿಯರು ಈ ಬಾಂಬಿನ ದುಷ್ಪರಿಣಾಮಗಳ ಕಹಿಯನ್ನು ಅನುಭವಿಸುತ್ತಿದ್ದಾರೆ ಎಂಬುದು ನಿಜ. ಅದಕ್ಕೂ ಹೆಚ್ಚಿನ ದುರಂತದ ಮಗ್ಗಲೂ ಈ ಇಡೀ ದಾರುಣ ಅಧ್ಯಾಯಕ್ಕಿದೆ. ಈ ಲೇಖನದ ಉದ್ದೇಶ ಈ ದುರಂತದ ವಿವರಗಳನ್ನು ಅರಸಿಹೊರಡುವುದೇ ಆಗಿದೆ.

ಹಿರೋಷಿಮಾದ ಮೇಲೆ ಬಾಂಬನ್ನು ಹಾಕಿದ ಯುದ್ಧ ವಿಮಾನದ ಹೆಸರು 'ಅಂಕೋಲಾ ಗೇ' ಎಂದು. ಇದಕ್ಕೂ ಮುಂದೆ ಬಾಂಬು ಸಿಡಿಸಲು ಹಿರೋಷಿಮಾ ವಾತಾವರಣದ ಕುರಿತಾಗಿ ಮಾಹಿತಿ ನೀಡುವುದಕ್ಕಾಗಿ ಹೊರಟಿದ್ದ ವಿಮಾನದ ಹೆಸರು 'ಸ್ಟ್ರೈಟ್ ಫ್ಲಷ್'. ಈ ಹೆಸರು ಕೊಟ್ಟಿದ್ದು ಕೂಡ – ಒಂದು ಅರ್ಥದಲ್ಲಿ ಈ ಲೇಖನದ ಪ್ರಧಾನ ಪಾತ್ರವಾದ – ಕ್ಯಾಪ್ಟನ್ ಕ್ಲಾಡ್ ಎದರ್ಲಿ ಎಂಬ ಒಬ್ಬ ಸಮರ್ಥ ವಿಮಾನಯಾನ ಪಟು. ಒಂದು ವರ್ಷಕಾಲ ಈ ಮೂರು ವಿಮಾನಗಳ ಚಾಲಕರಿಗೆ ಅತ್ಯಂತ ಗುಟ್ಟಿನಲ್ಲಿ ಮತ್ತು ಅತ್ಯಂತ ತೀವ್ರರೀತಿಯ ತರಬೇತಿ ನೀಡಲಾಗಿತ್ತು. ಕುತೂಹಲದ ಸಂಗತಿಯೆಂದರೆ ಈ ಯಾವ ಚಾಲಕನಿಗೂ – ಕಮಾಂಡರ್ ಟಿಬೆಟ್ಸ್‌ನಿಗೂ – ಈ ತರಬೇತಿ ಯಾಕೆ, ಇಷ್ಟು ಗುಟ್ಟು ಯಾಕೆ, ಎಂಥ ಬಾಂಬು, ಈ ಯಾವ ವಿವರಗಳೂ ಕೊನೆಯವರೆವಿಗೂ ತಿಳಿದಿರಲಿಲ್ಲ. ಒಟ್ಟು ಹದಿಮೂರು ಜನರಿದ್ದ ಈ ಚಾಲಕ ತಂಡದವರು ಬಹುಶಃ, ಎದರ್ಲಿ ರೀತಿಯಲ್ಲಿ, ತಮಗೆ ನಿರ್ವಹಿಸಿರುವ ಕರ್ತವ್ಯವೆಂದರೆ ಯಾವುದೋ ಉದ್ದೇಶಿತ ಗುರಿಯಮೇಲೆ ಒಂದೆರಡು ಬಾಂಬು ಸಿಡಿಸುವುದು ಎಂದು ಮಾತ್ರ ಅಂದುಕೊಂಡಿದ್ದರು.

ಆಗಸ್ಟ್ ಆರೂ ಬಂದಿತು. ಅಮೆರಿಕದ ಸಮಯದ ಪ್ರಕಾರ ಮಧ್ಯರಾತ್ರಿಯಲ್ಲಿ ಹೊರಟ ವಿಮಾನಗಳು ಹಿರೋಷಿಮಾವನ್ನು ಬೆಳಗ್ಗೆ ಸುಮಾರು ಎಂಟು ಗಂಟೆಯ ಹೊತ್ತಿಗೆ ತಲುಪಿ, ಎದರ್ಲಿ ವರದಿಯ ಪ್ರಕಾರ ಹವಾಮಾನವು ಪ್ರಶಸ್ತವಾಗಿ ಕಂಡು ಸುಮಾರು ೮.೨೦ರ ವೇಳೆಗೆ ಬಾಂಬುಗಳನ್ನು ಹಿರೋಷಿಮಾದ ಮೇಲೆ ಸಿಡಿಸಿ ಕ್ಷಣಾರ್ಧದಲ್ಲಿ ಮಾಯವಾದವು. ಪ್ರತಿಚಾಲಕನ ಕಣ್ಣಿಗೂ ಸ್ಪಷ್ಟವಾಗಿ ಕಂಡದ್ದು ಮಾತ್ರ ಸಿಡಿದ ಬಾಂಬು ಹೊಮ್ಮಿಸಿದ ದಟ್ಟ ಹಳದಿ ಮೋಡವಷ್ಟೆ. ಈ ನೆನಪು ಅಚ್ಚಳಿಯದ ಹಾಗೆ ಉಳಿದು ಪ್ರಜ್ಞೆಯಾಳದಲ್ಲಿ ಹೊಕ್ಕು ಜೀವನ ಪರ್ಯಂತ ಕಾಡಿ, ಹುಚ್ಚನನ್ನಾಗಿಸಿ ಕೊನೆಗೆ ತನ್ನ ಜೀವವನ್ನೇ ಬಲಿಯಾಗಿ ಅರ್ಪಿಸಬೇಕಾಗಿ ಬಂದಿದ್ದು

ಕ್ಲಾಡ್ ಎದರ್ಲಿಯಂಥ ಒಬ್ಬ ಚಾಲಕನಿಗೆ ಮಾತ್ರ. ಇವನಿಗೂ ಮೊದಲು, ಯುದ್ಧ ಮುಗಿದು ದೇಶಾದ್ಯಂತ ವಿಜಯೋತ್ಸವವನ್ನು ಆಚರಿಸುವ ಸಂಭ್ರಮದಲ್ಲಿದ್ದಾಗಲೇ, ಅದಕ್ಕೆ ಮುನ್ನಾ ದಿನವೇ, ಮತ್ತೊಬ್ಬ ಚಾಲಕ ಆತ್ಮಹತ್ಯೆ ಮಾಡಿಕೊಂಡಿದ್ದ 'ಅಂಕೋಲಾ ಗೇ' ವಿಮಾನ ಚಾಲಕ, ಈ ಇಡೀ ಪ್ರಯೋಗಕ್ಕೆ ಕಮಾಂಡರ್ ಆಗಿದ್ದ ಟಿಬೆಟ್ಸ್ ಮಾತ್ರ ಕೊನೆಯವರೆವಿಗೂ, ತನ್ನ ಎಪ್ಪತ್ತನೇ ವಯಸ್ಸಿನಲ್ಲಿ ಕೂಡ ''ನಾನು ನನಗೆ ನಿರ್ವಹಿಸಿದ ಕರ್ತವ್ಯವನ್ನು ಮಾಡಿದೆ. ಈ ವಿಷಯದಲ್ಲಿ ಪಶ್ಚಾತ್ತಾಪ ಎಂಬುದಿಲ್ಲ. ಅಂಥದೇ ಸಂದರ್ಭ ಬಂದರೆ ಪುನಃ ನಾನು ಹಾಗೆಯೇ ಮಾಡುತ್ತೇನೆ'' ಎಂದು ಬಹು ಖಚಿತವಾಗಿ ನುಡಿದ. ಇನ್ನೊಬ್ಬ ಅವನ ಸಹ ಚಾಲಕ ರಾಬರ್ಟ್ ಕೆರಾನ್ ಎಂಬುವನು ಈ ಬಗ್ಗೆ ಮಾತನಾಡುತ್ತ, 'ನಮಗೆ ಆ ತತ್‌ಕ್ಷಣದಲ್ಲಿ ಹೊಳೆಯದೇ ಹೋದ ವಿಷಯವೆಂದರೆ ನಾವೇನೂ ಪ್ರತಿಯೊಬ್ಬರ ಕಣ್ಣಿನಲ್ಲಿಯೂ ದೊಡ್ಡ 'ಹೀರೋ'ಗಳಾಗಿ ಕಾಣದೇ ಹೋಗಬಹುದು ಎಂಬುದು' ಎಂದು ಹೇಳಿದ.

* * *

ಪ್ರಮುಖವಾಗಿ ನಾನು ಇಲ್ಲಿ ಕ್ಲಾಡ್ ಎದರ್ಲಿ ಎಂಬುವನ ವಿವರಗಳನ್ನು ಮಾತ್ರ ಕೊಡುತ್ತಿದ್ದೇನೆ. ಬಹುಶಃ ಈ ಉದಾಹರಣೆ ವಿಭಿನ್ನವಾದದ್ದು ಅಥವಾ ಅಪರೂಪದ್ದು ಮಾತ್ರ ಎಂದು ನನಗೆ ಅನ್ನಿಸುವುದಿಲ್ಲ. ಐನ್‌ಸ್ಟೀನ್ ಎಚ್ಚರಿಸಿದ್ದಂತೆ 'ಈ ಬಾಂಬನ್ನು ಸಿಡಿಸುವುದೆಂದರೆ ಮಾನಸಿಕ ಆಘಾತಗಳು ಉಂಟಾಗಿ ಒಟ್ಟು ಅಮೆರಿಕಾ ದೇಶವೇ ಬೆಲೆ ತೆರಬೇಕಾಗುತ್ತದೆ' ಎಂಬುದಕ್ಕೆ ಈ ವಿಮಾನ ಚಾಲಕರ ಜೀವನ ವಿವರಗಳು ಒಂದು ನಿದರ್ಶನವಷ್ಟೆ.

ಕ್ಲಾಡ್ ಹುಟ್ಟಿದ್ದು ಟೆಕ್ಸಾಸ್ ನಗರದಲ್ಲಿ, ಆರು ಜನ ಮಕ್ಕಳಲ್ಲಿ ಕೊನೆಯ ಹುಡುಗ ಇವನು. ಟೆಕ್ಸಾಸ್ ನಾರ್ತ್ ಕಾಲೇಜಿನ ಫುಟ್‌ಬಾಲ್ ಪಡೆಯ ಬಹು ಪ್ರಮುಖ ಆಟಗಾರ. ಸಾಕಷ್ಟು ಸಮಸ್ಥಿತಿಯ ಮತ್ತು ಬುದ್ಧಿಶಕ್ತಿಯ ಯುವಕನಾಗಿದ್ದವನು. ಪರ್ಲ್ ಹಾರ್ಬರ್‌ನ ಸುದ್ದಿ ಮುಟ್ಟಿದ ಕೂಡಲೆ ಹಗೆ ತೀರಿಸಿಕೊಳ್ಳುವ ಉತ್ಕಟ ದೇಶಪ್ರೇಮದಲ್ಲಿ ಅಮೆರಿಕ ಸೈನ್ಯಕ್ಕೆ ಸೇರ್ಪಡೆ ಯಾದವರಲ್ಲಿ ಬಹು ಹೆಚ್ಚಿನ ಸಂಖ್ಯೆಯವರು ಟೆಕ್ಸಾಸ್‌ನವರು. ಕ್ಲಾಡ್ ಬಹುಬೇಗ ಸಮರ್ಥ ವಿಮಾನ ಚಾಲಕನೆನಿಸಿಕೊಂಡ. ಮೂರು ವರ್ಷಗಳಲ್ಲಿ ಮೇಜರ್ ಪದವಿಗೇರಿದ. ಎರಡು ವೀರಸಾಹಸ ಪದಕಗಳನ್ನು ಗಳಿಸಿದ. ಆ ಎರಡು ಪದಕಗಳೇ ಅವನ ಗೋರಿಯನ್ನೂ ತೋಡಿದಂತೆ ಆಯಿತು ಎಂಬುದೇ ಒಂದು ಅಣಕ. ೧೯೪೫ರಲ್ಲಿ ಕ್ಲಾಡ್ ಮನೆಗೆ ಹಿಂತಿರುಗಬಹುದು ಎಂಬ ಆದೇಶ ಬಂದಿತು – ಆದರೆ ಬಹು ಮುಖ್ಯವಾದ ಮತ್ತೊಂದು ಕರ್ತವ್ಯ ನಿರ್ವಹಿಸಿದಮೇಲೆ ತನ್ನ ತಾಯಿಗೆ ಪತ್ರ ಬರೆದು ''ಖೈದಿಗಳ ಬಾಯಿಯಲ್ಲಿ ಮತ್ತೊಂದೇ ಸಿಗರೇಟು ತುರುಕುವುದು ಬಾಕಿ. ಏನೂ ಚಿಂತಿಸಬೇಡ'' ಎಂದು ಹೇಳಿ ನ್ಯೂ ಮೆಕ್ಸಿಕೋದಲ್ಲಿ ಅತ್ಯುತ್ತಮ, ಕೆಚ್ಚೆದೆಯ, ಹೆಸರಾಂತ ವಿಮಾನ ಚಾಲಕರ ಈ ಸೂಪರ್ ಪಡೆಯನ್ನು ಸೇರಿಕೊಂಡ. ಮಹಾಗೋಪ್ಯದಲ್ಲಿ ತರಪೇತಿ ನೀಡಲಾದ ಮೇಲೆ ಇವನಿಗೆ ಬೋಯಿಂಗ್ ಬಿ-೨೯ ಎಂಬ ಭದ್ರಕೋಟೆಗೆ ಸಮನಾದ ವಿಮಾನದ ಜವಾಬ್ದಾರಿ ನೀಡಲಾಯಿತು. ಇದಕ್ಕೆ ತಾನೇ 'ಸ್ಟ್ರೈಟ್ ಫ್ಲಷ್' ಎಂದು ನಾಮಕರಣವನ್ನೂ ಮಾಡಿದ.

ಮೊದಲಿನಿಂದಲೂ ಅವನ ಹೆಸರಿನ ಸುತ್ತ ಅವನ ಪ್ರತಾಪಗಳು, ಅವನ ಜೂಜುಕೋರುತನ, ಹೆಣ್ಣು ಮಕ್ಕಳನ್ನು ಅಟ್ಟಿಹೋಗುವುದು ಮತ್ತು ಧಾರಾಳವಾಗಿ ಬುರುಡೆಗಳ ಸರಮಾಲೆಯನ್ನೇ ಕಟ್ಟುವುದು ಇವೆಲ್ಲವೂ – ಕಮಾಂಡರ್ ಟಿಬೆಟ್ಸ್‌ಗೂ ಸೇರಿದಹಾಗೆ – ಎಲ್ಲರಿಗೂ ತಿಳಿದಿತ್ತು. ಈ ಗುಪ್ತ ತರಬೇತಿಗಳ ಮಧ್ಯದಲ್ಲಿ ನೀಡಲಾಗುತ್ತಿದ್ದ ಎರಡು ಮೂರು ದಿನಗಳ ವಿಶ್ರಾಂತಿ ಯನ್ನು ಬೇಕಾಬಿಟ್ಟಿ ಸಂಭ್ರಮಿಸುವದರಲ್ಲಿ ಪ್ರವೀಣನೂ ಆಗಿದ್ದ. ಒಂದು ಬಗೆ 'ಸಮಸ್ಯೆಯ ಯುವಕ' ಎಂದು ಕೂಡ ಅನುಮಾನವಿದ್ದಿತು. ಆದರೆ ಕಮಾಂಡರ್ ಟಿಬೆಟ್ಸ್ ಮಾತ್ರ ಯಾವ ಕಾರಣಕ್ಕೂ ಈ ವಿಚಿತ್ರ ಯುವಕನ ಕೈಬಿಡಲು ಒಪ್ಪುತ್ತಿರಲಿಲ್ಲ. ಒಂದೇ ಪ್ರಮುಖ ಅಂಶ ಅವನ ಪರವಾಗಿದ್ದಿದ್ದೆಂದರೆ ಅವನ ವಿಮಾನಚಾಲನಾ ಸಾಮರ್ಥ್ಯ.

ಆಗಸ್ಟ್ ೬ರಂದು ಮೊದಲನೆಯ ಚಾಲಕನಾಗಿ ಹೊರಟ ಎದರ್ಲಿಯ ವಿಮಾನದಲ್ಲಿ ಬಾಂಬುಗಳು ಇರಲಿಲ್ಲ. ತನ್ನ ಹಿಂದೆ ಮತ್ತೆರಡು ವಿಮಾನಗಳು ಬರುತ್ತಿವೆ ಮತ್ತು ಅವಕ್ಕೆ ವಾತಾವರಣದ ವರದಿ ನೀಡುವುದು ತನ್ನ ಪಾಲಿನ ಕರ್ತವ್ಯ ಎಂದು ಮಾತ್ರ ಗೊತ್ತಿದ್ದ ಎದರ್ಲಿ ತನ್ನ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿ ಹಿಂದಿನ ವಿಮಾನಗಳು ಬಾಂಬುಗಳು ಸಿಡಿಸುವುದಕ್ಕೆ ಅನುವು ಮಾಡಿಕೊಟ್ಟು ತಾನು ಒಂದು ಕಾಲದಲ್ಲಿ ಕನಸು ಕಾಣುತ್ತಿದ್ದ 'ಜಗತ್ಪ್ರಸಿದ್ಧ ಹೀರೋ' ಆದ.

ಬಾಂಬು ಸಿಡಿಯಿತು. ಹಿಂತಿರುಗಿ ಬಂದ ಮೇಲೆ ಕ್ಷಣ ಕ್ಷಣಕ್ಕೂ, ದಿನದಿಂದ ದಿನಕ್ಕೂ ವಿವರಗಳು ಬರಲು ಆರಂಭಿಸಿದವು. ಇಂಥ ಜವಾಬ್ದಾರಿಗಳನ್ನು ಯಶಸ್ವಿಯಾಗಿ ಪೂರೈಸಿ ಹಿಂತಿರುಗಿದ ಪಡೆಯಲ್ಲಿ ಪರಸ್ಪರ ಅಭಿನಂದನೆ, ಆಲಿಂಗನ, ಸಂಭ್ರಮಾಚರಣೆಗಳು ಇರುತ್ತಿದ್ದವು. ''ಆದರೆ ಈ ಬಾರಿ ಎಲ್ಲ ನಿಶ್ಶಬ್ದ. ಎಲ್ಲರೂ ಮೌನ. ಪ್ರತಿಯೊಬ್ಬರೂ ಸಿಡಿಸಿದ ಈ ಬಾಂಬಿಗಾಗಿ ಕ್ಷಮೆ ಕೇಳುತ್ತಿದ್ದಿರಬೇಕು. ಪಶ್ಚಾತ್ತಾಪ ಪಡುತ್ತಿದ್ದಿರಬೇಕು. ನಾನು ಆಸ್ತಿಕನಲ್ಲ, ಯಾರ ಕ್ಷಮೆ ಕೇಳಲಿ ನಾನು ? ಆದರೆ ಆ ಕ್ಷಣದಲ್ಲಿ ನನಗೆ ನಾನೇ ವಚನ ನೀಡಿಕೊಂಡೆ, ಇನ್ನು ಮುಂದೆ, ಎಂದೂ ಬಾಂಬುಗಳನ್ನು ನಾನು ಸಮರ್ಥಿಸುವುದಿಲ್ಲ. ಎಲ್ಲ ಯುದ್ಧಗಳನ್ನು ವಿರೋಧಿಸುತ್ತೇನೆ. ಮತ್ತೆಂದೂ ಆ ಭಯಾನಕ ಹಳದಿ ಮೋಡ ಸಾಧ್ಯವಾಗಬಾರದು.'' ಈ ಮಾತುಗಳು ಹೇಳುತ್ತಿದ್ದಂತೆ ಅವನ ಜೀವನ ಪರ್ಯಂತ ಈ ಹಳದಿ ಮೋಡಗಳು ಉಸಿರುಕಟ್ಟಿಸುತ್ತಿವೆ ಎಂಬುದು ಸ್ಪಷ್ಟ ಗೋಚರವಾಗುತ್ತದೆ.

ಯುದ್ಧ ಮುಗಿಯಿತು. ಎದರ್ಲಿಗೆ ತನ್ನ ನಾಯಕ ಟಿಬೆಟ್ಸ್‌ನ ರೀತಿ ಉಕ್ಕಿನ ನರಗಳಿಲ್ಲ ಎಂದೇ ವಾಯುಪಡೆಯಿಂದ ನಿವೃತ್ತಿ ಬಯಸಿ ಎಲ್ಲರನ್ನೂ ಅಚ್ಚರಿಪಡಿಸಿದ. ಪಡೆಯಲ್ಲಿ ಅದ್ಭುತ ಭವಿಷ್ಯವಿರುವ ಈ ಯುವಕ ಹೀಗೆ ದಿಢೀರ್ ತೀರ್ಮಾನ ತೆಗೆದುಕೊಂಡದ್ದು ಯಾರಿಗೂ ನಂಬಲಿಕ್ಕಾಗಲಿಲ್ಲ. 'ಏನು ಕಾರಣ ನೀಡಿದಿರಿ ?' ಎಂದು ಕೇಳಿದ್ದಕ್ಕೆ 'ಆಯಾಸ, ತೀವ್ರ ದಣಿವು' ಎಂದು ಮಾತ್ರ ಹೇಳಿದ. ೨೩೭ ಡಾಲರುಗಳ ವಿಶ್ರಾಂತಿವೇತನವನ್ನು ನೀಡಬಂದ ಅಧಿಕಾರಿಗಳಿಗೆ 'ಬೇಡ' ಎಂದು ಹೇಳಿ, ಆ ಹಣವನ್ನು ಯುದ್ಧದಲ್ಲಿ ಮಡಿದವರ ವಿಧವೆಯರಿಗೆ ಕಾಣಿಕೆಯಾಗಿ ನೀಡಿಬಿಟ್ಟ. 'ನನ್ನ ವಿಮಾನಯಾನ, ವಾಯುಪಡೆಯೊಂದಿಗಿನ ಸಂಬಂಧಗಳೆಲ್ಲ ಇಂದಿಗೆ ಮುಕ್ತಾಯವಾಯಿತು' ಎಂದು ಘೋಷಿಸಿದ.

ಟೆಕ್ಸಾಸಿಗೆ ಮರಳಿಬಂದ ಮೇಲಿನ ಕತೆಯನ್ನು ನಿರುತ್ಸಾಹದಿಂದ ಬಣ್ಣಿಸುತ್ತಾನೆ. ತನ್ನನ್ನು ಗುರುತೇ ಹಿಡಿಯಲಾಗದ ತನ್ನ ಬಂಧುವರ್ಗ ತನ್ನ ವ್ಯಕ್ತಿತ್ವಕ್ಕೆ ಹೊಸದಾಗಿ ಬಡಿದುಕೊಂಡ ಸಿಡುಕುತನ, ನರೋದ್ರೇಕ ಸ್ಥಿತಿಗಳಿಂದ ಕಳವಳಿಸುತ್ತಾರೆ. ಬಹುದಿನಗಳ ಪರಿಚಯದ ಹುಡುಗಿ ಕೊನ್‌ಸಿಟಾ ಮಾರ್ಗೆಟಿ ಎಂಬುವಳನ್ನು ಮದುವೆಯಾಗುತ್ತಾನೆ. ಮಧ್ಯರಾತ್ರಿಗಳಲ್ಲಿ ಹಠಾತ್ತನೆ ಹಾಸಿಗೆಯಿಂದ ಜಿಗಿದೆದ್ದು, ಹೆಂಡತಿಯನ್ನು ಎಚ್ಚರಿಸಿ, 'ನೆಲದಲ್ಲಿ ಅಂಗಾತ ಬಿದ್ದುಕೊ, ಆ ಹಳದಿ ಮೋಡ ಆವರಿಸುತ್ತಿದೆ' ಎಂದು ಚೀರುತ್ತಾನೆ. ನಾಲ್ಕು ವರ್ಷಗಳ ಕಾಲ ಈ ಬಗೆಯ ಬದುಕು ಮುಂದುವರೆಯುತ್ತದೆ.

ಸಾಕಷ್ಟು ತಾಳ್ಮೆ, ಎಲ್ಲ ಸರಿಹೋಗಬಹುದೆಂಬ ಆಸೆ ಎಲ್ಲವನ್ನೂ ಪ್ರದರ್ಶಿಸಿದರೂ ಕೊನೆಗೆ, ಅನಿವಾರ್ಯವಾಗಿ ಅವನ ಬಂಧುಗಳು ವಾಕೋನಗರದ ಮನೋರೋಗದ ಚಿಕಿತ್ಸಾಲಯಕ್ಕೆ ದಾಖಲಿಸುತ್ತಾರೆ. ತೀವ್ರ ರೀತಿಯ ಚಿಕಿತ್ಸೆಯನ್ನೇ ನೀಡಿದ ವೈದ್ಯ ಡಾ|| ಪಾರ್ಕರ್ ಅವನಿಗೆ ಪದೇ ಪದೇ ತರ್ಕಬದ್ಧ ಕಾರಣಗಳನ್ನು ನೀಡಿ ಅವನನ್ನು ಸಮಾಧಾನ ಸ್ಥಿತಿಗೆ ತರಲು ಯತ್ನಿಸುತ್ತಾರೆ. ''ಇದೆಲ್ಲ ಮರೆಯಬೇಕು ನೀನು, ನೀನು ಅಪರಾಧಿಯಲ್ಲ. ಹಿರೋಷಿಮಾದ ಮೇಲೆ ಆ ವಿಮಾನ ಹಾರಿಸುವ ಜವಾಬ್ದಾರಿ ನಿನ್ನ ಪಾಲಿಗೆ ಬಂತು ಅಷ್ಟೆ. ನಿನ್ನ ಜಾಗದಲ್ಲಿ ಇದೇ ಕರ್ತವ್ಯ ನಿರ್ವಹಿಸಲು ಬೇಕಾದಷ್ಟು ಚಾಲಕರು ಇದ್ದರು. ಯುದ್ಧ ಮುಗಿಯಿತು. ಎಲ್ಲ ಮನೆಗೆ ಹೋದರು. ನೀನು ತಾನೆ ಮಾಡಿದ್ದೇನು ? ಹವಾಮಾನದ ವರದಿ ನೀಡಿದೆ, ಅಷ್ಟೆ ಎಂದು ಪದೇ ಪದೇ ಹೇಳಿದರು.'' ಹದಿನಾಲ್ಕು ತಿಂಗಳು ಪ್ರತಿದಿವಸ ಇದೇ ಪ್ರವಚನ

## ಅಭಿನಂದನೆಗಳು



**ಶ್ರೀ ಟಿ. ಆರ್. ಅನಂತರಾಮು**
**ಕರ್ನಾಟಕ ವಿಜ್ಞಾನ – ತಂತ್ರಜ್ಞಾನ ಅಕಾಡೆಮಿ**
**ನೀಡುವ ವಿಜ್ಞಾನ ಪ್ರಸಾರ ಪ್ರಶಸ್ತಿ ಪುರಸ್ಕೃತರು**

ನಡೆಯಿತು. ಕೊನೆಗೊಮ್ಮೆ ಆ ವೈದ್ಯನನ್ನು ನೋಡಲು ನಿರಾಕರಿಸುವ ಸ್ಥಿತಿಗೆ ಬಂದೆ. ನನ್ನ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು. ತಾನೊಬ್ಬ ಯುದ್ಧವಿರೋಧಿ, ಖಂಡಿತ ವಾಗಿ. 'ಆದರೆ ಹಿರೋಷಿಮಾ ನಂತರ ನನಗೆ ಧರ್ಮ, ದೇವರುಗಳಲ್ಲಿ ನಂಬಿಕೆ ಹೇಗೆ ಸಾಧ್ಯ?' ತಾನು ನಡೆಸಿದಂಥ ಕೃತ್ಯ ಎಸಗಿದವನು ಮೌನವ್ರತದ ದೀಕ್ಷೆ ಪಡೆದ ಸನ್ಯಾಸಿಯ ತರಹ ಬದುಕಬೇಕು. ಆ ಸನ್ಯಾಸಿಯ ಪ್ರಾರ್ಥನೆ ಒಂದೇ, ''ಕ್ಲಾಡ್ ಎದರ್ಲಿ, ಪಾಲ್ ಟಿಬೆಟ್ಸ್ ಮತ್ತು ಈ ಬಾಂಬ್‌ನ ಹಿಂದೆ ಇರುವ ಎಲ್ಲ ವಿಜ್ಞಾನಿಗಳು ಅಂಥವರು ಮತ್ತೆ ಎಂದೆಂದಿಗೂ ಹುಟ್ಟದೇ ಇರಲಿ'' ಎಂದು ಮಾತ್ರ ಆಗಿರಬೇಕು.

ಚಿಕಿತ್ಸೆಯ ನಂತರ ಸಮಸ್ಯೆಗಳು ದುಪ್ಪಟ್ಟಾದವು. ಹಿರೋಷಿಮಾದ ಎಲ್ಲ ನತದೃಷ್ಟರಿಗೆಂದು ಒಂದು ಚೆಕ್ಕನ್ನು ಕಳ್ಳ ರುಜುಮಾಡಿ ರವಾನಿಸಿದ. ಬ್ಯಾಂಕೊಂದನ್ನು ಪ್ರವೇಶಿಸಿದ. ಆಟದ ಪಿಸ್ತೂಲ್ ತೋರಿಸಿ ಎಲ್ಲರನ್ನೂ ಬೆದರಿಸಿ ಮರುಕ್ಷಣ ಗಹಗಹಿಸಿ ನಕ್ಕು ನಿಷ್ಕ್ರಮಿಸಿದ. ಮತ್ತೊಮ್ಮೆ ಒಂದು ಮಾರಾಟದ ಮಳಿಗೆ ಪ್ರವೇಶಿಸಿ ಹಣಪಾವತಿ ಕೌಂಟರಿನ ಮಹಿಳೆಯನ್ನು ಬೆದರಿಸಿ, ತಾನು ತಂದಿದ್ದ ಚೀಲಕ್ಕೆ ಹಣ ಸುರಿಯಬೇಕೆಂದು ಹೇಳಿ ಇಡೀ ಚೀಲದ ದುಡ್ಡನ್ನು ಮಳಿಗೆಯ ಮೇಲಂತಸ್ತಿನಲ್ಲಿ ನಿಂತು ಗಾಳಿಗೆ ತೂರಿಬಿಟ್ಟು ಪರಾರಿಯಾದ. ಮತ್ತೆ ಚಾಕೋ ಆಸ್ಪತ್ರೆಗೆ ಸೇರಿಸಿದರು. ಈ ಬಾರಿ ಸ್ವತಂತ್ರ ರೋಗಿಯಾಗಿ ಅಲ್ಲ, ಸೆರೆಯಲ್ಲಿಡಬೇಕಾದ ಮನೋವಿಕಾರಿಯಾಗಿ. 'ಸಮಾಜ ಘಾತಕ' ಕೃತ್ಯಗಳಲ್ಲಿ ತೊಡಗಿದವನು ಎಂಬ ಲಘು ವಿವರಣೆ ಕೊಟ್ಟರೂ ಕೂಡ, ಅವನು ಸೇನೆಯಲ್ಲಿ ಸಲ್ಲಿಸಿದ್ದ ಉತ್ಕೃಷ್ಟ ಸೇವೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಾತ್ರ.

ಮತ್ತೆ ಹದಿನಾಲ್ಕು ತಿಂಗಳು ಕಳೆದು ಚಿಕಿತ್ಸಾಲಯ ದಿಂದ ಪ್ರೇತದ ಹಾಗೆ ಹೊರಬರುತ್ತಾನೆ. ಹೆಂಡತಿ ಬಿಟ್ಟು ಹೋಗುತ್ತಾಳೆ. ಅವನ ಬ್ಯಾಂಕ್ ಲೆಕ್ಕವನ್ನು ಅವನ ಸೋದರ ಮುಚ್ಚಿಬಿಡುತ್ತಾನೆ. ತನ್ನನ್ನೇ ಆಗಲಿ, ತನ್ನ ಹಣಕಾಸಿನ ವ್ಯವಹಾರವನ್ನೇ ಆಗಲಿ ನೋಡಿ ಕೊಳ್ಳಲಿಕ್ಕಾಗದ ಸ್ಥಿತಿ ತಲಪುತ್ತಾನೆ. ಅವನ ಪ್ರತಿಭಟನೆಯ ಸ್ವರೂಪಗಳು ಮತ್ತೂ ತೀವ್ರಗೊಳ್ಳುತ್ತವೆ. ಟೆಕ್ಸಾಸಿನ ಒಂದು ಬಾರಿಗೆ ನುಗ್ಗಿ ಸಿನಿಮೀಯ ರೀತಿಯಲ್ಲಿ ಅಲ್ಲಿರುವವರನ್ನೆಲ್ಲ ಬೆದರಿಸಿ ಹಣ ದೋಚುತ್ತಾನೆ. ಅಲ್ಲಿಗೆ ಅವನ ವಿಪರೀತದ 'ಹುಚ್ಚಾಟ'ಗಳಿಗೆಲ್ಲ ತೆರೆ ಬೀಳುತ್ತದೆ. ಕೈಗಳಿಗೆ ಬೇಡಿ ತೊಡಿಸಿ ಸೆರೆಮನೆಗೆ ಒಯ್ಯುತ್ತಾರೆ. ಅವನ ಬದುಕಿನಲ್ಲಿ ಮೊದಲಬಾರಿಗೆಂಬಂತೆ ಜೈಲುವಾಸ ಅನುಭವಿಸಬೇಕಾಗುತ್ತದೆ. ಅವನನ್ನು ಒಯ್ಯುತ್ತಿದ್ದ ಪೊಲೀಸ್ ಸಾರ್ಜೆಂಟಿಗೆ ಇವನು ಯಾರು ಎಂದು ತಿಳಿದಕೂಡಲೆ ಅಚ್ಚರಿ ಹಾಗೂ ವಿಚಿತ್ರ ರೀತಿಯ ಗೌರವವೂ ಮೂಡುತ್ತದೆ. ಈ ಜೈಲುವಾಸದ ಬಗ್ಗೆ ಕೇಳಿದಾಗ, 'ಅದೇನೂ ಹೊಸದಲ್ಲ, ನನ್ನ ಇಡೀ ಬದುಕು ಸೆರೆಮನೆಯಲ್ಲಿಯೇ ಕಳೆದಿದ್ದೇನೆ' ಎಂದನ್ನುತ್ತಾನೆ. ಬುದ್ಧಿ ವಿಕಲ್ಪವಾದವರ ಕೊಟ್ಟಿಗೆಯಲ್ಲಿ ಬಂದಿಯಾಗುತ್ತಾನೆ.

ಬೇರೆಯವರಿಗೆ ಇವನ ವರ್ತನೆಗಳು, ಇವನ ಜೀವನರೀತಿಗಳನ್ನು ಸಹಿಸುವುದೇ ಅಸಾಧ್ಯವಾಗುತ್ತ ಬರುತ್ತದೆ. ಆ ಕಾಲ ಕಂಡಕಂಡವರನ್ನೆಲ್ಲ ಕಮ್ಯುನಿಸ್ಟರೆಂದು ಅನುಮಾನಿಸುತ್ತಿದ್ದ, ಶಿಕ್ಷಿಸುತಿದ್ದ ಅಮೆರಿಕನ್ ಸೆನೆಟರ್ ಮೆಕಾರ್ಥಿ ಮೆರೆಯುತ್ತಿದ್ದ ಕಾಲವೆಂದೂ ನಾವು



ಅಂಚೆ ಬೆಲೆ ಏರಿದೆ... ಹಾಗಾಗಿ
ಮಾಟ-ಮಂತ್ರಕ್ಕೂ ಬೆಲೆ ಏರಿಸಿದ್ದೇವೆ!

ನೆನಪಿನಲ್ಲಿಡಬೇಕು. ಈ 'ಯುದ್ಧ ವಿರೋಧಿ' ಎದರ್ಲಿ ಕೂಡ ಮೆಕಾರ್ಥಿಯ ಹದ್ದುಕಣ್ಣುಗಳಿಗೆ ಬಿದ್ದಿದ್ದರೆ ಆಶ್ಚರ್ಯವಿಲ್ಲ. ಯುದ್ಧ ಕಾರ್ಯಗಳಿಗೆ ಇವನೊಂದು ಅಡಚಣೆಯಾಗಿಯೇ ಕಂಡಿರಬೇಕು. ಆದರೆ ಈ ಮೆಕಾರ್ಥಿ ಉರಿಯುವ ಹಳದಿ ಬೆಂಕಿ ಚೆಂಡನ್ನಾಗಲೀ ಅದರಿಂದ ಹೊಮ್ಮಿದ ಅಲೆಗಳನ್ನಾಗಲೀ ಎಂದೂ ಕಂಡಿರಲಿಲ್ಲ. ಬಹುಶಃ ಇದೇ ಬಗೆಯ ಮನಸ್ಥಿತಿಯವನು ಅವನ ಜೀವನ ಚರಿತ್ರೆ ಬರೆದ ವಿಲಿಯಂ ಬ್ರಾರ್‌ಫೋರ್ಡ್ ಹೂಯಿ ಕೂಡ ಎಂದು ಕಾಣುತ್ತದೆ. ಕೇವಲ ಎರಡು ದಿನಗಳಷ್ಟೆ ಎದರ್ಲಿಯ ಸಂದರ್ಶನ ಮಾಡಿ ಜೀವನಚರಿತ್ರೆ ಬರೆದ ಈ ಲೇಖಕ 'ಎದರ್ಲಿಗೆ ಬಾಂಬು ನೇರ ತಾನೆ ಸಿಡಿಸಲಿಲ್ಲ; ಹವಾಮಾನ ವೀಕ್ಷಣಾ ವಿಮಾನ ಚಾಲಕ ಮಾತ್ರ ತಾನಾಗಿದ್ದೆ ಎಂಬ ಕಾರಣಕ್ಕೆ ತೀರ ಖೇದದಲ್ಲಿ ಟಿಬೆಟ್ಸ್‌ನ ಕುರಿತಾದ ಅಸೂಯೆಯೂ ಹುಟ್ಟಿ, ಹೀಗೆ ನಂತರದ ದಿನಗಳಲ್ಲಿ ದೊಡ್ಡ ಹೀರೋನಂತೆ ಠಕ್ಕುವೇಷ ಧರಿಸಿ ನಡೆದುಕೊಂಡ' ಎಂದು ತೀರ್ಮಾನಿಸಿಬಿಡುತ್ತಾನೆ.

ತನ್ನನ್ನು ಭೆಟ್ಟಿಯಾಗಲು ಬಂದ ಪತ್ರಕರ್ತನನ್ನು ನೋಡಲು ಬಂದಾಗಿನ ರೀತಿಯಲ್ಲಿಯೇ, ದಿಢೀರನೆ ಎದ್ದು ಹೊರಟೂ ಹೋಗುತ್ತಾನೆ. ಈ ಭೆಟ್ಟಿ ನಡೆದ ಹದಿನಾಲ್ಕು ತಿಂಗಳೊಳಗೆ ಎದರ್ಲಿ ಆತ್ಮಹತ್ಯೆ ಮಾಡಿಕೊಂಡ.



ಕ್ಲಾಡ್ ಎದರ್ಲಿ ಅವಿಸ್ಮರಣೀಯ ವ್ಯಕ್ತಿಯಾಗಿ ಬಿಟ್ಟಿದ್ದಾನೆ. ಕಮ್ಯುನಿಸ್ಟ್ ರಾಷ್ಟ್ರಗಳಲ್ಲಿಯಂತೂ ಅವನ ಯುದ್ಧ ವಿರೋಧಿ, ಅಣುಬಾಂಬು ವಿರೋಧಿ ನಿಲುವಿಗಾಗಿ ಗೌರವಾನ್ವಿತನಾಗಿ ಕಂಡಿದ್ದಾನೆ. ''ಹಿರೋಷಿಮಾ ಪಾಪಕೃತ್ಯಕ್ಕಾಗಿಯಲ್ಲ, ಒಂದು ಅಲ್ಪ ಪ್ರಮಾಣದ ಅಪರಾಧಕ್ಕಾಗಿ ಅವನಿಗೆ ಸೆರೆಮನೆ ಯಾಯಿತು'' ಎಂದು ಮಾತನಾಡಿಕೊಳ್ಳುತ್ತಾರೆ.

ಬರ್ಟ್ರಂಡ್ ರಸೆಲ್‌ನಂಥ ಮಹಾ ಸಾಮಾಜಿಕ ವಿಜ್ಞಾನಿ ಅವನ ಬಗ್ಗೆ ಮಾತನಾಡುತ್ತ, ''ಏನೂ ಗೊತ್ತಿಲ್ಲದೆ, ಸಂಪೂರ್ಣ ಅಮಾಯಕತನದಲ್ಲಿ ಈ ಮನುಕುಲದ ಹತ್ಯಾಕಾಂಡದಲ್ಲಿ ಭಾಗಿಯಾಗಿದ್ದಕ್ಕಾಗಿ ಅವನು ಈಗ ಶಿಕ್ಷೆ ಅನುಭವಿಸುವಂತಾಯಿತು'' ಎಂದು ಉದ್ಗರಿಸುತ್ತಾರೆ. ರಾಬರ್ಟ್ ಯುಂಕ್ ಒಬ್ಬ ಖ್ಯಾತ ವಿಜ್ಞಾನ ಲೇಖಕ ತನ್ನ ಎರಡು ಅದ್ಭುತ ಪುಸ್ತಕಗಳಲ್ಲಿ – ಒಂದು ''ಬೈಟರ್ ದ್ಯಾನ್ ಎ ತೌಸಂಡ್ ಸನ್ಸ್'' – ಈ ಅಣ್ವಸ್ತ್ರದ ಕುರಿತು ಬರೆದಿದ್ದಾನೆ. ಅವನು ಎದರ್ಲಿಯ ಪತ್ರಸಂಗ್ರಹದ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತ ''ಸಂತ ಮನಸ್ಸಿನ ಮರುಳನೊಬ್ಬ ಸುತ್ತಲವರಿಗಿಂತ ಭಿನ್ನವಾಗಿ ಯೋಚಿಸಿ ಆಳುವವರ್ಗಕ್ಕೆ ಒಂದು ಸವಾಲೇ ಹಾಕಿದ್ದಾನೆ. ಅವರ ನಶಿಸುತ್ತಿರುವ ಮಾನವೀಯ ಗುಣಗಳಿಗೆ ಕನ್ನಡಿ ಇಟ್ಟಿದ್ದಾನೆ. ಇದೊಂದು ಮನುಷ್ಯನ ಇತಿಹಾಸದಲ್ಲಿ ಪುನರಾವರ್ತನೆಗೊಳ್ಳುತ್ತಿರುವ ಪ್ರಕ್ರಿಯೆ'' ಎಂದನ್ನುತ್ತಾನೆ.

ಇವನ ಕುರಿತು ಬರೆಯುವಾಗ ಎರಡು ಭಿನ್ನರೀತಿಯ ನೋಟಗಳು ಕಾಣಸಿಗುತ್ತವೆ. ವಿಲಿಯಂ ಹೂಮಿ ಎಂಬ ಲೇಖಕ ಎದರ್ಲಿ ಜೀವನಚರಿತ್ರೆಯಲ್ಲಿ 'ಅವನೊಬ್ಬ ಪ್ರಚಾರಪ್ರಿಯ, ಜೂಜುಕೋರ, ಹೆಣ್ಣಿನ ಚಟವುಳ್ಳ ಒಬ್ಬ ವೈಪರೀತ್ಯಗಳ ವ್ಯಕ್ತಿ' ಎಂದು ಬಣ್ಣಿಸುತ್ತಾನೆ. ಮಿತಿಮೀರಿದ ದೇಶದ ಕುರಿತಾದ ಅಭಿಮಾನವೊಂದು ಕಡೆ, ಮತ್ತೊಂದು ಕಡೆ ವ್ಯಕ್ತಿಯ ಆಳದಲ್ಲಿ ಹುದುಗಿರ ಬಹುದಾದ, ಅವನ ಎಣಿಕೆಗೆ ಬಾರದ ಮನುಕುಲಕ್ಕೆ ಎಸಗಿದ ದ್ರೋಹದ ಕುರಿತಾದ ಭಯಂಕರ ಯಾತನೆಯ ಕಲ್ಪನೆ, ಇವುಗಳೇ ಎದರ್ಲಿ ಅಂಥ ವ್ಯಕ್ತಿಯ ಕುರಿತು ಮಾತನಾಡುವವರಲ್ಲಿ ಕಾಣುವ ಲಕ್ಷಣಗಳು.

ಬಹುಶಃ ನಮ್ಮ ಆಯ್ಕೆ ಇರುವುದು, ನೀಡಿದ ಆದೇಶಗಳನ್ನು ಯಾಂತ್ರಿಕವಾಗಿ ಪರಿಪಾಲಿಸಿ ಕೃತಾರ್ಥ ನಾಗುವ ಟಿಬೆಟ್ಸ್ ರೀತಿಯ ವ್ಯಕ್ತಿ ಒಂದು ಕಡೆ, ಮತ್ತೊಂದೆಡೆ ನಡೆದು ಹೋದ ಭಯಾನಕ ಘಟನೆಯಲ್ಲಿ ತನ್ನ ಪಾತ್ರದ ಕುರಿತಾದ ಆಂತರಿಕ ನರಳಾಟದಲ್ಲಿ ನಲುಗಿ ನಶಿಸಿ ಕೊನೆಗೆ ಜೀವವನ್ನೇ ತೆತ್ತುಬಿಡುವ ಎದರ್ಲಿ ಒಂದು ಕಡೆ; ಇವರುಗಳ ಮಧ್ಯೆ, ಪ್ರಶ್ನೆ ಮೆಚ್ಚುಗೆ ಪ್ರಶಂಸೆಗಳದ್ದಲ್ಲ, ಪ್ರಶ್ನೆ ಇರುವುದು ಮನುಷ್ಯಕುಲದ ನೆಮ್ಮದಿಯ ನಿರಂತರತೆಯ ಸವಾಲಿನದು.

ಇಂಥದೊಂದು ಬಹು ದೊಡ್ಡ ಪ್ರಮಾಣದ ಸವಾಲಿನ ಉದ್ಘಾಟನೆಯಾದದ್ದೇ ೧೯೪೫ರ ಆಗಸ್ಟ್ ಆರರ ಮುಂಜಾನೆ ಹಿರೋಷಿಮಾ, ನಾಗಸಾಕಿಗಳ ಮೇಲೆ ಬಾಂಬುಗಳು ಸಿಡಿಸಿದ ಗಳಿಗೆಯಿಂದ ಎಂದು ನನಗೆ ಅನ್ನಿಸುತ್ತದೆ.

ಪ್ರೊ|| ಜಿ. ಕೆ. ಗೋವಿಂದ ರಾವ್

# ಹಳೆಮನೆ ನೆನಪು



*ಜೂನ್ ೮ರಂದು ನಮ್ಮನ್ನಗಲಿದ ಪ್ರೊ॥ ಲಿಂಗದೇವರು ಹಳೆಮನೆ ಅವರಿಗೆ 'ಹೊಸತು' ವಿನಮ್ರವಾಗಿ ಗೌರವ ಸಲ್ಲಿಸುತ್ತದೆ*

ರಂಗಭೂಮಿಗೆ ಆಪ್ತರಾದವರ ಮನೆಯಲ್ಲಿ ಒಂದು ಮದುವೆಗೆ ನಾವೆಲ್ಲ ತೀರ ಇತ್ತೀಚೆಗೆ ಸೇರಿದ್ದೆವು. ಅಲ್ಲಿ ವೈದಿಕರ ಮಂತ್ರದ ಜತೆಜತೆಗೆ ಹೆಂಗಸರ ಹಾಡು ಹಸೆ ಜರುಗಿತ್ತು. ಮಂಟಪದ ಹತ್ತಿರದಲ್ಲೇ ಕುಳಿತಿದ್ದ ನಾವು, ಎಂದರೆ ನಾನು, ಲಿಂಗದೇವರು ಹಳೆಮನೆ ಮುಂತಾದವರು, ಇವೆರಡನ್ನೂ ಕೇಳಿಸಿಕೊಳ್ಳುತ್ತಿರಲಿಲ್ಲ. ಹಾಗೇ ಅಲ್ಲಿ ಬಹಳಷ್ಟು ಜನ ಏನನ್ನೂ ಕೇಳಿಸಿಕೊಳ್ಳುತ್ತಿರಲಿಲ್ಲ. ಇಷ್ಟಾಗಿ ಅಲ್ಲಿ ನಡೆಯುತ್ತಿದ್ದ ಕಲಾಪದಲ್ಲಿ ಅವೆರಡೇ ಮುಖ್ಯ... ! 'ಇದೇನು ವಿಚಿತ್ರ ಹಳೆಮನೆ ! ಅಲ್ಲಿ ಜನಪದ ಮತ್ತು ವೈದಿಕ ಒಟ್ಟಿಗೆ ಇದೆ. ಇಲ್ಲಿ ನಮಗೆ ಅವೆರಡೂ ಬೇಕಿಲ್ಲ. ಆದರೆ ನಾವು ಸೇರಿರೋದು ಇದು ಸೃಷ್ಟಿ ಮಾಡಿರೋ ಸಂಬಂಧದಲ್ಲಿ...' ಎಂದು ಮಾತು ಶುರುಮಾಡಿದೆ. ನಾವು ಸೇರಿದಾಗ ಬಹಳಸಲ ಹೀಗೆ ಯಾವುದೋ ವಿಷಯ ಹಿಡಿದು ಚರ್ಚೆ ಜಗಳ. ಇದು ನಮ್ಮ ಆತ್ಮೀಯತೆಯನ್ನು ಹೆಚ್ಚು ಮಾಡುತ್ತಿದ್ದ ವಿಷಯ. 'ಜನಗಳ ನಂಬಿಕೆಯನ್ನ ತೀರ ಇಷ್ಟು ಹಗುರ ಮಾಡಬೇಡಯ್ಯ', ಎಂದು ಎಂದಿನಂತೆ ತನ್ನ ಸಮೀಕರಣವನ್ನು ನನ್ನ ತಲೆಗೇ ಕಟ್ಟಿ ನಗೆಚಾಟಿಕೆಯಲ್ಲಿ ತೇಲಿಸಿಬಿಟ್ಟದ್ದು ಒಂದು ಉದಾಹರಣೆ ಮಾತ್ರ. ಅದು ಕೊನೆಯ ಉದಾಹರಣೆ ಆಗಬಹುದೆಂದು ನಾವ್ಯಾರೂ ಭಾವಿಸಿರಲಿಲ್ಲ. ಅಲ್ಲಿಂದ ಹತ್ತು ದಿನಕ್ಕೆ ನಮ್ಮ ನಂಬಿಕೆಗಳನ್ನೆಲ್ಲ ಹುಸಿಯಾಗಿಸಿ, ಉಸಿರಾಡಲು ಹೊಸ ಗಾಳಿ ಬೇಕೆಂದು ಹೊಸಮನೆಯ ಮೇಲೆ ಹೋದಾತ ಅಲ್ಲೇ ಅಸು ನೀಗಿದ.

ಮೇಲಿನ ಮಾತುಗಳನ್ನು ಹೇಳುವುದಕ್ಕೆ ಹಲವು ಕಾರಣಗಳಿವೆ. ಬಹಳ ಮುಖ್ಯವಾದ ಕಾರಣ ಭಾಷೆಯನ್ನು ನಂಬಿ, ಅಧ್ಯಯನದಲ್ಲಿ ತೊಡಗಿ, ಸಂಸ್ಕೃತಿಯ ಚಿಂತನೆ ಮತ್ತು ಅದಕ್ಕಾಗಿ ಕಲೆಗಳಲ್ಲಿನ ಆಸಕ್ತಿ, ಇದರಿಂದ ಸಮುದಾಯದ ಒಡನಾಟ, ಇವೆಲ್ಲ ನಮ್ಮ ಓರಗೆಯ ಅನೇಕರ ಸಮಾನಗುಣಗಳು. ಆದರೆ ಅದರಲ್ಲಿ ಹಳೆಮನೆಯ ನಡೆ ಮಾತ್ರ ಭಿನ್ನ. ಮೆಟ್ಟಿಲುಗಳನ್ನೇರಿ ಹೋದ ದಾರಿ ಅವರದು. ಭಾಷಾಶಾಸ್ತ್ರ, ಕನ್ನಡ ಎರಡರಲ್ಲೂ ಎಂ.ಎ. ಮಾಡಿದ ಹಳೆಮನೆ ಹೊಸ ವಿಚಾರ, ಸಿದ್ಧಾಂತಗಳಿಗೆ ಬೇಗ ತಮ್ಮನ್ನು ತೆತ್ತುಕೊಂಡವರು. ತುರ್ತುಪರಿಸ್ಥಿತಿಯಲ್ಲಿ ಸಂವೇದನೆಯುಳ್ಳ ಎಲ್ಲರೂ ವ್ಯವಸ್ಥೆಯ ಬಗ್ಗೆ ಅಸಮಾಧಾನ ತಳೆದು ವ್ಯವಸ್ಥೆ ವಿರುದ್ಧ ನಿಲುವು ತಳೆದವರು. ಅದರಲ್ಲಿ ಒಬ್ಬೊಬ್ಬರದು ಒಂದೊಂದು ಬಣ್ಣ. ಸಮುದಾಯ ಸಂಘಟನೆಯದು ಕೆಂಪು ಬಣ್ಣ. ಅದರ ಮೊದಲ ನಾಟಕ ಸಂಸರ 'ವಿಗಡವಿಕ್ರಮರಾಯ'ವನ್ನು ಹೊಸರೂಪದಲ್ಲಿ ಕೆ. ವಿ. ನಾರಾಯಣ ರಚಿಸಿದ 'ಹುತ್ತವ ಬಡಿದರೆ'. ಇದೊಂದು ಟ್ರೆಂಡ್ ಆಯಿತು. ಮೈಸೂರಿನಲ್ಲಿ ಸಮುದಾಯದ ಮುಖ್ಯ ಸಂಘಟಕ ಹಳೆಮನೆ, 'ಬಿರುದಂತೆಂಬರ ಗಂಡ'ಕ್ಕೆ ಪ್ರತಿಯಾಗಿ ಎಂಬಂತೆ 'ಅಂತೆಂಬರ ಗಂಡ' ನಾಟಕ ರಚಿಸಿದರು. ಮೈಸೂರಿನ ಇತಿಹಾಸವನ್ನೇ ಆಧರಿಸಿ ಚಿಕ್ಕದೇವಭೂಪ, ಹೈದರ್ ನಾಟಕಗಳನ್ನೂ ರಚಿಸಿದರು. ಬ್ರೆಕ್ಟ್ ಗಾಳಿ ಬಲವಾಗಿದ್ದ ಕಾಲದಲ್ಲಿ ಧರ್ಮಪುರಿಯ ದೇವದಾಸಿ, ಮದರ್ ಕರೇಜ್ ನಾಟಕಗಳನ್ನೂ ಕನ್ನಡಕ್ಕೆ ಅನುವಾದ ಮಾಡಿದರು. ಬೀದಿನಾಟಕಗಳನ್ನು ಬರೆದರು. ವಯಸ್ಕರ ಶಿಕ್ಷಣ, ಅನೌಪಚಾರಿಕ ಶಿಕ್ಷಣಗಳ ಬಗ್ಗೆ ಕೆಲಸಮಾಡಿದ ಇವರು ಪ್ರತಿಭಟನೆಗಾಗಿದ್ದ ಬೀದಿ ನಾಟಕಗಳನ್ನು ಪ್ರಚಾರ ನಾಟಕಗಳನ್ನಾಗಿಯೂ ಪ್ರೇರೇಪಿಸಿದರು. ಬಹಳ ಹಿಂದೆ ವಿ. ರಾಮಮೂರ್ತಿ ಮತ್ತು ಇವರು ಶಾರ್ಟ್ ಫಿಲ್ಮ್ ಮಾಡಿದ್ದರು. ಭಾಷಾ ಮಂದಾಕಿನೀ ಎಂಬ ಯೋಜನೆಯಡಿ ಸಾಹಿತಿ, ಕಲಾವಿದರು, ಕಲಾಪ್ರಕಾರಗಳ ಬಗ್ಗೆ ಸಿ.ಡಿ. ತಯಾರಿಸುವ ಯೋಜನೆಯಲ್ಲಿ ಅನೇಕರನ್ನು ಬೆಳಕಿಗೆ ತಂದರು. ಮೈಸೂರಿನ 'ಆಂದೋಲನ' ಪತ್ರಿಕೆ ಇರಲಿ, ಹೊಸದಾದ 'ಅರುಹು ಕುರುಹು' ವಿದ್ವತ್ ಪತ್ರಿಕೆ ಇರಲಿ ಇವರು ಅದರ ಜತೆ. ಭಾಷಣಗಳಂತೂ ಸರಿಯೇಸರಿ. ಎಲ್ಲ ವಿಷಯದಲ್ಲೂ ಹಳೆಮನೆ ಹೊಸಮನೆಗೆ ಎಡತಾಕುವವರು.

ಎಡಪಂಥೀಯ ವಿಚಾರಧಾರೆಗಳನ್ನು ಅರಗಿಸಿಕೊಂಡು ಅದನ್ನು ನೇರವಾಗಿ ತಿಳಿಸುವ ಹಂಬಲ ಹೊತ್ತು, ಭಾಷಣ, ಬರವಣಿಗೆಗಳಲ್ಲಿ ತೊಡಗಿಕೊಂಡ ಹಳೆಮನೆಗೆ ಎಲ್ಲ ವಿಷಯಗಳನ್ನೂ ಪರಸ್ಪರ ವಿರೋಧ ಸಂಘರ್ಷಗಳ ಮೂಲಕವೇ ನೋಡುವ ರೂಢಿಯಾಗಿಬಿಟ್ಟಿತ್ತು. ಚಿಂತನೆ, ಭಾಷಣ, ಲೇಖನಗಳಲ್ಲಿ, ಎಡಪರ, ಬಲವಿರೋಧೀ ಎಂಬ ನೇರ ನಿಲುವುಗಳನ್ನು ತೆಗೆದುಕೊಳ್ಳುತ್ತಿದ್ದ ಅವರಿಗೆ ಸಂಘಟನೆಯಲ್ಲಿ, ಎಂದರೆ ಮಾನವ ಸಂಬಂಧಗಳಲ್ಲಿ, ಯಶಸ್ಸು ಇದ್ದದ್ದು ಸಮನ್ವಯವನ್ನೇ ಪ್ರಮುಖವಾಗಿ ತೋರಿದ್ದರಿಂದ. ವಿಚಾರಗಳಲ್ಲಿ ಕಟುತ್ವ, ಆದರೆ ಸಂಬಂಧಗಳಲ್ಲಿ ಹಾಗಲ್ಲ. ಆದ್ದರಿಂದಲೇ ಹಲವು ಬಣ್ಣದ ಗುಂಪುಗಳಲ್ಲಿ ಸಲೀಸಾಗಿ ಅಡ್ಡಾಡಬಲ್ಲವರಾಗಿದ್ದರು. ರಾಜಕಾರಣಿಗಳಿಗೆ ತೀರ ಹತ್ತಿರವಾಗಿಯೂ ಸ್ವತಃ ಸಕ್ರಿಯ ರಾಜಕಾರಣಿ ಅಲ್ಲ. ರಾಜ್ಯದಲ್ಲಿ ಜನತಾಪಕ್ಷದ ಸರಕಾರ ಇದ್ದಾಗ ರಾಜಕೀಯಕ್ಕೆ ತುಂಬ ಹತ್ತಿರವಾದರು. ವಿಪರ್ಯಾಸವೆಂದರೆ ಜನತಾ ಸರಕಾರ, ಕಾಂಗ್ರೆಸ್ ಸರಕಾರಗಳಲ್ಲಿ ಆಗದೆ ಉಳಿದ ರಂಗಾಯಣದ ನಿರ್ದೇಶಕ ಸ್ಥಾನ ಕೇಸರಿ ಬಣ್ಣದ ಸರಕಾರದಲ್ಲಿ ಅವರಿಗೆ ಸಾಧ್ಯವಾಯಿತು. ಈ ಮೊದಲು ರಂಗಾಯಣದ ಜತೆ ನಿಕಟಸಂಪರ್ಕ ಹೊಂದಿದ್ದ ಹಳೆಮನೆ ಅಲ್ಲಿನ ರಂಗತರಬೇತಿ ಸಂಸ್ಥೆಯಲ್ಲೂ ದುಡಿದರು. ಇವರಿಗಿಂತ ಮೊದಲಿನ ನಿರ್ದೇಶಕರಿಗೆ ರಂಗಾಯಣದಲ್ಲಿ ಕಲಾವಿದರೊಂದಿಗೆ ತಿಕ್ಕಾಟವಾದಾಗ ಸಂಧಾನದ ಪ್ರಯತ್ನ ಮಾಡಿದರು. ಇವರೇ ನಿರ್ದೇಶಕರಾಗುತ್ತಾರೆಂದಾಗ ಬಲಪಂಥೀಯರು ವಿರೋಧಿಸಿದರು. ಆಗಲೂ ಹೇಳಿಕೆ ಕೊಟ್ಟಿದ್ದು 'ತಾನು ಎಡಪಂಥೀಯನೆಂದು ವಿರೋಧಿಸುತ್ತಿದ್ದಾರೆ. ಆದರೆ ತನ್ನ ನಿಲುವೇನೂ ಬದಲಾಗುವುದಿಲ್ಲ' ಎಂದು. ಕುದುರೆಮೋತಿಯಂಥ ಕಡೆ ದಲಿತರ ಪರವಾಗಿ ಇವರ ನಿಲುವಿದ್ದರೂ ಕೆಲವು ಮಠಗಳು ಇವರನ್ನು ಬೆಂಬಲಿಸಿದವು. ಆ ಮಠಗಳನ್ನು ಇವರು ವಿರೋಧಿಸಲಿಲ್ಲ. ಹಾಗೆಂದು ತಮ್ಮ ನಿಲುವನ್ನೂ ಬಿಟ್ಟುಕೊಡಲಿಲ್ಲ. ಬಿಜೆಪಿ ಸರಕಾರ ಇವರನ್ನು ರಂಗಾಯಣದ ನಿರ್ದೇಶಕರನ್ನಾಗಿ ಮಾಡಿದರೂ ಇವರು ಅಲ್ಲೆಲ್ಲೂ ಭಟ್ಟಂಗಿತನ ಮಾಡಿ ತನ್ನ ಅಭಿಪ್ರಾಯ, ಚಿಂತನೆ ಬದಲಾಗಿದೆ ಎನ್ನಲಿಲ್ಲ. ಪ್ರಭುತ್ವದ ಕೆಲಸ ಮಾಡುತ್ತಲೇ ತನ್ನ ಸ್ವತಂತ್ರ ನಿಲುವು ನಡೆಗಳನ್ನು ನಡೆಸಿಕೊಂಡು ಹೋಗುವುದೇ ಪ್ರಜಾಸತ್ತೆ ಎಂಬ ಧೋರಣೆ ಗಮನಾರ್ಹ. ಆದ್ದರಿಂದಲೇ ಮೈಸೂರಿನ ಸಚಿವ ರಾಮದಾಸ್, ಹಳೆಮನೆ ಕಳೇಬರ ನೋಡಲು ಬಂದಾಗ ಸಮುದಾಯದ ನಂಟಿನ ಬಗ್ಗೆ ಮಾತನಾಡುವುದು ಅನಿವಾರ್ಯವಾಯಿತು.

ಹಳೆಮನೆ ಭಾಷಣ ಬರವಣಿಗೆಗಳಲ್ಲಿ ಅಚ್ಚುಕಟ್ಟು. ಲೇಖನ ಕೊಡುತ್ತೇನೆಂದವರಿಗೆ ರಾತ್ರೋರಾತ್ರಿ ಬರೆದು ಕೊಟ್ಟುಬಿಡುತ್ತಿದ್ದರು. ಕೊನೆಗೆ ಚಿಕ್ಕನಾಯಕನಹಳ್ಳಿಯ ಸಾಹಿತ್ಯ ಸಮ್ಮೇಳನಕ್ಕೂ ಅಧ್ಯಕ್ಷ ಭಾಷಣ ಬರೆದು ಕಳುಹಿಸಿಬಿಟ್ಟಿದ್ದರು. ಅದನ್ನು ಓದಲು ಆತ ಆವತ್ತು ಬದುಕಿರಲಿಲ್ಲ ಅಷ್ಟೆ. ಆವತ್ತು ಅವರ ತಾಯಿ ಮತ್ತು ಮನೆಯವರ ಇಷ್ಟದಂತೆ ಹುಟ್ಟೂರಿನಲ್ಲಿ ಅಂತ್ಯಕ್ರಿಯೆ ಆಯಿತು. ಇವರೆಲ್ಲರನ್ನ ನೋಡಿದಾಗ ಇವರ ಬರವಣಿಗೆಯಂತೆ ಬದುಕಿನಲ್ಲೂ ಹೊತ್ತೊತ್ತಿಗೆ ಸರಿಯಾದ ಊಟೋಪಚಾರಗಳಲ್ಲಿದ್ದು ಆರೋಗ್ಯಕ್ಕೆ ಗಮನ ಕೊಟ್ಟಿದ್ದರೆ, ಅವರ ಮಾತನ್ನು ಬೇರೆಯವರಾಡುವ ಪ್ರಸಂಗ ಬರುತ್ತಿರಲಿಲ್ಲವೇನೋ ಎನಿಸುತ್ತದೆ.

'ಗೆಳೆಯ, ಚಿರನಿದ್ರೆಯಲ್ಲಿ ಕೆಂಪು ಕೇಸರಿಗಳ ನಡುವೆ ಎಷ್ಟೊಂದು ಬಣ್ಣಗಳಿರಬಹುದಲ್ಲವೆ ? ನೋಡುತ್ತಿರು. ಆದರೆ ನಿನಗದನ್ನು ಬೇರೆಯವರಿಗೆ ಹೇಳಲಾದೀತೆ. ಮೂಕನ ಕನಸು ಕಾಣಿಸುವುದಿಲ್ಲ, ತಾನಷ್ಟೆ ಕಾಣುತ್ತದೆ.'

**ಡಾ॥ ಜೆ. ಶ್ರೀನಿವಾಸಮೂರ್ತಿ**

ನಂ. ೩೫, ೩ನೇ ಅಡ್ಡರಸ್ತೆ, ಕೋದಂಡರಾಮಪುರ, ಬೆಂಗಳೂರು - ೫೬೦ ೦೦೩

# ಮೀನು ಸಾಬಣ್ಣ

ಎಂ. ಬಿ. ನಾಯ್ಕ್

ಸಾಬಣ್ಣನ ಸೈಕಲ್ಲು ಹೋಗುವಾಗಲೂ ಭರ್ತಿಯಾಗಿರುತ್ತದೆ. ಅಂತೆಯೇ ಬರುವಾಗಲೂ ಭರ್ತಿಯಾಗೇ ಇರುತ್ತದೆ. ಮೀನು ಖಾಲಿ ಮಾಡಿ ಬರುವಾಗ ಆ ಖಾಲಿ ಬಾಕ್ಸಿನೊಳಗೆ ತೆಂಗಿನ ಸಿಪ್ಪೆ, ಅಡಿಕೆ ಹಾಳೆ ಮುಂತಾದವುಗಳನ್ನು ತುಂಬಿಕೊಂಡು ಬರುತ್ತಾನೆ. ಏನೂ ಸಿಗಲಿಲ್ಲವೆಂದರೆ ಬರುವಾಗ ಅಲ್ಲೆ ರಸ್ತೆಪಕ್ಕ ಸೈಕಲ್ ನಿಲ್ಲಿಸಿ ಒಂದಿಷ್ಟು ಕಟ್ಟಿಗೆಯನ್ನು ಒಟ್ಟುಮಾಡಿ ತುಂಬಿಕೊಂಡು ಬರುತ್ತಾನೆ. ಇದೆಲ್ಲಾ ಅವನ ಮನೆಯ ಅಡಿಗೆಗೆ ಉರುವಲಾಗುತ್ತದೆ. ಹೀಗೆ ಮೀನು ಸಾಬಣ್ಣ ಮತಲಬಿ ಮನುಷ್ಯ. ಅವನು ಏನೇ ಮಾಡಿದರೂ ಅದರಲ್ಲಿ ಒಂದಿಷ್ಟು ಲಾಭ ಮಾಡಿಕೊಂಡು ಜೀವನ ನಡೆಸುವುದೇ ಅವನ ಮುಖ್ಯ ಗುರಿ.

ಅದೊಂದು ಹಳೆಯ ಲಟಾರಿ ಸೈಕಲ್. ಅದಕ್ಕೆ ಮಜಬೂತಾದ ಒಂದು ಸ್ಟ್ಯಾಂಡ್ ಮತ್ತು ಒಂದು ಕ್ಯಾರಿಯರ್. ಕ್ಯಾರಿಯರ್ ಮೇಲೊಂದು ಪ್ಲಾಸ್ಟಿಕ್ ಬಾಕ್ಸ್. ಅದರೊಳಗೆ ಇಪ್ಪತ್ತು ಕೆ.ಜಿ. ಮೀನು. ಅದರಲ್ಲಿ ಭೂತಾಯಿ ಮೀನು ಹತ್ತು ಕೆ.ಜಿ. ಮತ್ತು ಬಂಗಡೆ ಹತ್ತು ಕೆ.ಜಿ. ಮೀನು ತುಂಬಿದ ಬಾಕ್ಸಿಗೆ ಹೊದೆಸಿದ್ದಾನೆ ಒಂದು ಒದ್ದೆ ಗೋಣಿಪಾಟು. ಸೈಕಲ್ಲಿನ ಬಲಗಡೆಯ ಹ್ಯಾಂಡಲ್‌ಗೆ ಸಿಕ್ಕಿಸಿದ್ದಾನೆ ಒಂದು ಬಲ್ಬ್‌ಹಾರ್ನ್. ಎಡಗಡೆಯ ಹ್ಯಾಂಡಲ್‌ನಲ್ಲಿ ಜೋತುಬಿದ್ದಿದೆ ಒಂದು ಕೈಚೀಲ. ಆ ಕೈಚೀಲದೊಳಗಿದೆ ಒಂದು ಹಳೆಯ ತಕ್ಕಡಿ, ಒಂದು ಕೆ.ಜಿ. ಭಾರ ಇರುವ ಒಂದು ಕಲ್ಲು, ಅರ್ಧ ಕೆ.ಜಿ. ಭಾರ ಇರುವ ಒಂದು ಕಲ್ಲು ಮತ್ತು ಸೈಕಲ್ ಪಂಕ್ಚರ್ ತೆಗೆಯುವ ಸಾಧನಗಳು. ಸೈಕಲ್ ಸವಾರನ ತಲೆಯನ್ನು ಅಲಂಕರಿಸಿದೆ ಒಂದು ಜಾಲರಿ ಇಸ್ಲಾಮಿ ಟೋಪಿ. ಅವನ ಬಾಯಿಯೊಳಗಿದೆ ಒಂದು ಜಡಾ ಬೀಡಾ ಮತ್ತು ತುಟಿಯ ಮಧ್ಯೆ ಸಿಲುಕಿಕೊಂಡಿದೆ ಬೆಂಕಿ ಉಗುಳುವ ಒಂದು ಮೋಟು ಬೀಡಿ. ಆ ಸೈಕಲ್ ತುಳಿದುಕೊಂಡು ಹನ್ನೆರಡು ಮೈಲಿ ದೂರದ ಕಳವೆ ಗ್ರಾಮಕ್ಕೆ ಹೊರಟಿದ್ದಾನೆ ಮಹಮ್ಮದ್ ಯಾನೆ ಮೀನು ಸಾಬಣ್ಣ ಯಾನೆ ಹೆಸರು ಹೇಳಲು ಬಾರದ ಹಳ್ಳಿಯ ಶೇರುಗಾರ ಹೆಂಗಸರ ಬಾಯಲ್ಲಿ ಮಾಧವಣ್ಣ.

ಕಳೆದ ಹತ್ತು ಹದಿನೈದು ವರ್ಷಗಳಿಂದ ಜೀವನೋಪಾಯಕ್ಕಾಗಿ ಇದೇ ವೃತ್ತಿಯನ್ನು ಆರಿಸಿಕೊಂಡಿದ್ದಾನೆ ಮಹಮ್ಮದ್. ವರ್ಷದಲ್ಲಿ ಜೋರಾಗಿ ಮಳೆ ಬೀಳುವ ಒಂದೆರಡು ತಿಂಗಳು ಬಿಟ್ಟರೆ ಉಳಿದೆಲ್ಲ ದಿನಗಳಲ್ಲಿ ನಿರಂತರವಾಗಿ ಸಾಗುತ್ತಿದೆ ಮಹಮ್ಮದ್‌ನ ಮೀನು ವ್ಯಾಪಾರ. ಅವನು ಮೀನು ಮಾರಾಟ ಮಾಡುವ ಗ್ರಾಮ ಬ್ರಾಹ್ಮಣರ ಪಾರುಪತ್ಯಕ್ಕೆ ಒಳಪಟ್ಟಿದ್ದರೂ ಅನಾದಿಕಾಲದಿಂದಲೂ ಅಲ್ಲಿ ಖಾಯಂ ಆಗಿ ನೆಲೆಸಿದ್ದ ದೀವರು, ಗೌಡರು, ಮರಾಠಿಗರು ಇದ್ದಾರೆ. ಇವರೆಲ್ಲ ಹೊಟ್ಟೆಪಾಡಿಗಾಗಿ ಬ್ರಾಹ್ಮಣರ ಮನೆಗಳಿಗೆ ಕೆಲಸಕ್ಕೆ ಹೋಗುವ ಕೂಲಿಯಾಳುಗಳು. ತಾವು ಕೆಲಸ ಮಾಡುವ ಹೊಲದೊಡೆಯನ ಬೇಣದಲ್ಲಿ ಚಿಕ್ಕ ಚಿಕ್ಕ ಗುಡಿಸಲುಗಳನ್ನು ಕಟ್ಟಿಕೊಂಡು ಇದ್ದವರು. ಹಗಲಿಡೀ ಮೈಮುರಿದು ದುಡಿಯುವ ಇವರಿಗೆ ಊಟಕ್ಕೆ ಮಾತ್ರ ಮೀನಿನ ಪಳದಿಯೇ ಬೇಕಾಗಿತ್ತು. ಮೀನಿನ ಪಳದಿಯಿಲ್ಲದೆ ಅವರಿಗೆ ಗಂಟಲಲ್ಲಿ ಅನ್ನ ಸಲೀಸಾಗಿ ಇಳಿಯುತ್ತಿರಲಿಲ್ಲ. ಒಂದು ವೇಳೆ ಹಸಿ ಮೀನು ಸಿಗದಿದ್ದರೆ ಒಣಮೀನಿನ ಸಾರನ್ನಾದರೂ ಮಾಡಿಕೊಂಡು ಪಟ್ಟಾಗಿ ಊಟ ಮಾಡುವವರು. ಒಣ ಮೀನು ಸಹ ಸಿಗದಿದ್ದರೆ ಅಲ್ಲೆಲ್ಲಾದರೂ ಬಿದ್ದಿದ್ದ ಒಣ ಮೀನಿನ ತಲೆಯನ್ನಾಗಲಿ ಬಾಲವನ್ನಾಗಲಿ ಉರಿಯುವ ನಿಗಿ ನಿಗಿ ಕೆಂಡದ ಮೇಲೆ ಹಾಕಿ ಅದರಿಂದುಂಟಾಗುವ ಪರಿಮಳವನ್ನಾದರೂ ಸವಿಯುತ್ತಾ ನಿರುಮ್ಮಳವಾಗಿ ಊಟ ಮಾಡುವಂಥವರು ಈ ಜನ. ಒಟ್ಟಾರೆಯಾಗಿ ಹೇಳಬೇಕೆಂದರೆ ಅವರಿಗೆ ಊಟಕ್ಕೆ ಮೀನು ಬೇಕೇ ಬೇಕು. ಅವರ ಈ ದೌರ್ಬಲ್ಯವೇ ಮೀನು ಸಾಬಣ್ಣನ ಜೀವನ



ಸುಲಲಿತವಾಗಿ ನಡೆಯಲು ಕಾರಣವಾಗಿತ್ತು.

ದಿನಾ ಮೀನು ಕೊಳ್ಳಲು ಈ ಶೇರುಗಾರ ಮಂದಿಯ ಹತ್ತಿರ ಹಣವಿರುತ್ತಿರಲಿಲ್ಲ. ಅವರಿಗೆ ಕೆಲಸದ ಹಣ ಬಟವಾಡೆಯಾಗುವುದು ಪ್ರತಿ ಮಂಗಳವಾರಕ್ಕೆ, ಇಲ್ಲ ಹದಿನೈದು ದಿನಗಳಿಗೊಮ್ಮೆ ಮಾತ್ರ. ಮೀನು ಪಳದಿ ಇಲ್ಲದೆ ಇದ್ದರೆ ಊಟ ಸೇರುವುದಿಲ್ಲ; ದಿನಾ ಮೀನು ತೆಗೆದು ಕೊಳ್ಳಲು ದುಡ್ಡು ಇರುವುದಿಲ್ಲ. ಹಾಗಾದರೆ ದಿನಾ ಮೀನು ತಿನ್ನುವುದು ಹೇಗೆ ? ಅದಕ್ಕಾಗಿ ಅವರು ಮೀನು ಸಾಬಣ್ಣನ ಹತ್ತಿರ ವರ್ತನೆ, ಎಂದರೆ ದಿನಾ ಮೀನು ತೆಗೆದು ಕೊಳ್ಳುವುದು, ವಾರಕ್ಕೊಮ್ಮೆ ದುಡ್ಡು ಕೊಡುವುದು ಎಂಬ ಉದ್ರಿ ವ್ಯಾಪಾರದ ಒಪ್ಪಂದ ಮಾಡಿಕೊಂಡರು. ಇದರಿಂದ ಹಳ್ಳಿಯ ಕೆಲಸಗಾರರಿಗೆ ದಿನಾ ಮೀನು ಸಿಕ್ಕಿದಂತಾಯಿತು; ಸಾಬಣ್ಣನಿಗೂ ಗಿರಾಕಿ ಹುಡುಕುವುದು ತಪ್ಪಿದಂತಾಯಿತು. ಅವನಿಗೆ ಗೊತ್ತಿತ್ತು ಹಳ್ಳಿಜನರು ಪ್ರಾಮಾಣಿಕರು, ದುಡ್ಡಿಗೇನೂ ಮೋಸ ಮಾಡುವವರಲ್ಲ ಎಂದು. ಹೀಗಾಗಿ ಅವನು ಕೆ.ಜಿ.ಗೆ ಎರಡೆರಡು ರೂಪಾಯಿ ಜಾಸ್ತಿ ಹೇಳಲಾರಂಭಿಸಿದ. ಈ ವ್ಯಾಪಾರ ಅವನಿಗೆ ಹೆಚ್ಚು ಲಾಭ ತಂದುಕೊಡುತ್ತಿತ್ತು.

ತಿಂಗಳಿಗೊಮ್ಮೆ ಬರುವ ಸಂಕಷ್ಟ ದಿನದಂದು ಮಾತ್ರ ಮೀನು ಸಾಬಣ್ಣನ ವ್ಯಾಪಾರಕ್ಕೆ ಕಲ್ಲು ಬೀಳುತ್ತಿತ್ತು. ಆ ದಿನ ಹೆಚ್ಚಾಗಿ ಯಾರೂ ಮೀನು ತಿನ್ನುವುದಿಲ್ಲ. ಇನ್ನು ಕೆಲವರು ಸೋಮವಾರ, ಶನಿವಾರದಂದು ಮೀನು ತಿನ್ನುತ್ತಿರಲಿಲ್ಲ. ಆಗೆಲ್ಲಾ ಸಾಬಣ್ಣನ ಬಾಕ್ಸ್‌ನಲ್ಲಿ ಮೀನು ಉಳಿದುಬಿಡುತ್ತಿತ್ತು. ಹೀಗೆ ಉಳಿದ ಮೀನುಗಳನ್ನು ಸಾಬಣ್ಣ ಬಿಸಾಡುತ್ತಿರಲಿಲ್ಲ. ಮನೆಗೆ ತಂದು ಅದಕ್ಕೆ ಉಪ್ಪು ಬೆರೆಸಿ ಮನೆಯ ಹಿಂದಿನ ಬೇಣದಲ್ಲಿ ಒಣಗಿಸಿ ಒಣಮೀನು ಮಾಡಿ ಅದನ್ನು ಹಳ್ಳಿಯವರಿಗೇ ಮಾರಿ ದುಡ್ಡು ಮಾಡಿಕೊಳ್ಳುವ ಚಾಕಚಕ್ಯತೆ ಅವನಲ್ಲಿತ್ತು.

ಅವನು ಮೀನು ವ್ಯಾಪಾರಕ್ಕೆಂದು ಹೋಗುವ ಕಳವೆ ಗ್ರಾಮದಲ್ಲಿ ಕೆರಿಯಾ ನಾಯಕ ಎಂಬುವವನ ಮನೆಯೊಂದಿದೆ. ಅವನದು ದೊಡ್ಡದಾದ ಅವಿಭಕ್ತ ಕುಟುಂಬ. ಅವನಿಗೆ ಎಂಟು ಜನ ಗಂಡುಮಕ್ಕಳು, ನಾಲ್ಕು ಜನ ಹೆಣ್ಣುಮಕ್ಕಳು. ಹೆಣ್ಣುಮಕ್ಕಳನ್ನೆಲ್ಲ ಮದುವೆ ಮಾಡಿ ಗಂಡಂದಿರ ಮನೆಗೆ ಕಳಿಸಿದ್ದಾನೆ. ಅವನ ಮಕ್ಕಳು, ಅವನ ಸೊಸೆಯಂದಿರು, ಮೊಮ್ಮಕ್ಕಳು, ಮರಿಮಕ್ಕಳು, ಬಂದು ಹೋಗುವ ನೆಂಟರಿಷ್ಟರು, ಹೀಗೆ ಅವರು ಇವರು ಅಂತ ಒಂದು ಹೊತ್ತಿನ ಊಟಕ್ಕೆ ಇಪ್ಪತ್ತೈದು ಮೂವತ್ತು ಮಂದಿ ಹಾಜರಿರುತ್ತಾರೆ. ಅವರೆಲ್ಲರಿಗೂ ಮೀನು ಪಳದಿ ಇಲ್ಲದಿದ್ದರೆ ಗಂಟಲಲ್ಲಿ ಅನ್ನವೇ ಇಳಿಯುವುದಿಲ್ಲ. ಅವರೆಲ್ಲರ ಊಟಕ್ಕೆ ದಿನವೊಂದಕ್ಕೆ ಕನಿಷ್ಠವೆಂದರೂ ನಾಲ್ಕೈದು ಕೆ.ಜಿ. ಮೀನು ಬೇಕೇಬೇಕು. ಹಾಗಾಗಿ ಮೀನು ಸಾಬಣ್ಣನಿಗೆ ಕೆರಿಯಾ ನಾಯಕ ದೊಡ್ಡ ಗಿರಾಕಿ. ಹಳ್ಳಿಯ ಇತರ ಜನರೆಲ್ಲಾ ಕೆ.ಜಿ., ಅರ್ಧ ಕೆ.ಜಿ. ಮೀನು ಕೊಂಡರೆ ಕೆರಿಯಾ ನಾಯಕನ ಮನೆಯವರು ಸಾಬಣ್ಣನ ಅರ್ಧ ಬಾಕ್ಸನ್ನು ಖಾಲಿಮಾಡಿ ಬಿಡುತ್ತಾರೆ. ಹಾಗಾಗಿ ಯಾರಿಗೆ ಮೀನಿಲ್ಲದಿದ್ದರೂ ಕೆರಿಯಾ ನಾಯಕನ ಮನೆಗೆ ಮಾತ್ರ ಮೀನು ತಪ್ಪಿಸುವುದಿಲ್ಲ ಸಾಬಣ್ಣ. ದುಡ್ಡಿರಲಿ, ದುಡ್ಡಿಲ್ಲದಿರಲಿ ಅವರಿಗೆ ಕೊಡಬೇಕಾದ ಮೀನನ್ನು ಕೊಟ್ಟುಬಿಡುತ್ತಾನೆ. ಕೆರಿಯಾ ನಾಯಕ ಸ್ವಲ್ಪ ಕಂಜೂಸಿ ಮನುಷ್ಯನಾದರೂ ದುಡ್ಡಿಗೆ ಮೋಸ ಮಾಡುವವನಲ್ಲ ಎಂದು ಸಾಬಣ್ಣನಿಗೆ ಗೊತ್ತು. ಮೀನು ಸಾಬಣ್ಣನಿಗೆ ದುಡ್ಡೇ ಆಗಬೇಕೆಂದೇನಿಲ್ಲ. ಅಡಿಕೆ, ತೆಂಗಿನಕಾಯಿ, ಕಾಳು ಮೆಣಸು, ಭತ್ತ, ತರಕಾರಿ ಹೀಗೆ ಏನೇ ಕೊಟ್ಟರೂ ತೆಗೆದುಕೊಳ್ಳುತ್ತಾನೆ. ಹಳ್ಳಿಗರು ಮೀನಿನ ಬದಲಾಗಿ ಕೊಟ್ಟ ವಸ್ತುಗಳನ್ನೆಲ್ಲಾ ಪೇಟೆಗೆ ತಂದು ಹೆಚ್ಚಿನ ಬೆಲೆಗೆ ಮಾರಿ ಅದರಲ್ಲೂ ಒಂದಿಷ್ಟು ಲಾಭ ಗಿಟ್ಟಿಸಿಕೊಳ್ಳುತ್ತಾನೆ.

ಸಾಬಣ್ಣನ ಸೈಕಲ್ಲು ಹೋಗುವಾಗಲೂ ಭರ್ತಿಯಾಗಿ ಇರುತ್ತದೆ. ಅಂತೆಯೇ ಬರುವಾಗಲೂ ಭರ್ತಿಯಾಗೇ ಇರುತ್ತದೆ. ಮೀನು ಖಾಲಿ ಮಾಡಿ ಬರುವಾಗ ಆ ಖಾಲಿ ಬಾಕ್ಸಿನೊಳಗೆ ತೆಂಗಿನ ಸಿಪ್ಪೆ, ಅಡಿಕೆ ಹಾಳೆ ಮುಂತಾದವುಗಳನ್ನು ತುಂಬಿಕೊಂಡು ಬರುತ್ತಾನೆ. ಏನೂ ಸಿಗಲಿಲ್ಲವೆಂದರೆ ಬರುವಾಗ ಅಲ್ಲೆ ರಸ್ತೆಪಕ್ಕ ಸೈಕಲ್ ನಿಲ್ಲಿಸಿ ಒಂದಿಷ್ಟು ಕಟ್ಟಿಗೆಯನ್ನು ಒಟ್ಟುಮಾಡಿ ತುಂಬಿಕೊಂಡು ಬರುತ್ತಾನೆ. ಇದೆಲ್ಲಾ ಅವನ ಮನೆಯ ಅಡಿಗೆಗೆ ಉರುವಲಾಗುತ್ತದೆ. ಹೀಗೆ ಮೀನು ಸಾಬಣ್ಣ ಮತಲಬಿ ಮನುಷ್ಯ. ಅವನು ಏನೇ ಮಾಡಿದರೂ ಅದರಲ್ಲಿ ಒಂದಿಷ್ಟು ಲಾಭ ಮಾಡಿಕೊಂಡು ಜೀವನ ನಡೆಸುವುದೇ ಅವನ ಮುಖ್ಯ ಗುರಿ.

ಹಳ್ಳಿ ಜನರೊಂದಿಗೆ ಸಾಬಣ್ಣನದು ಬರೀ ಮೀನು ವ್ಯಾಪಾರವೊಂದೇ ಅಲ್ಲ. ಅವನು ಹಳ್ಳಿ ಜನರೊಂದಿಗೆ ಸ್ಪಂದಿಸುತ್ತಾನೆ. ಅವರ ನೋವು ನಲಿವುಗಳಲ್ಲಿ ತಾನೂ ಭಾಗಿಯಾಗುತ್ತಾನೆ. ಯಾರೊಂದಿಗೆ ಹೇಗೆ ಮಾತನಾಡಬೇಕೆಂದು ಗೊತ್ತು ಸಾಬಣ್ಣನಿಗೆ. ಹಾಗಾಗಿ ಇಂದಿನವರೆಗೂ ಯಾರೊಂದಿಗೂ ಜಗಳ ತಂದುಕೊಂಡವನಲ್ಲ. ಹಳ್ಳಿಯಲ್ಲಿ ಯಾರಿಗಾದರೂ ಸೌಖ್ಯವಿಲ್ಲವೆಂದಾದರೆ ಅವರ ಮನೆಗಳಿಗೆ ಹೋಗಿ ಮಾತನಾಡಿಸಿಕೊಂಡು ನಾಲ್ಕು ಸಾಂತ್ವನದ ಮಾತುಗಳನ್ನು ಹೇಳಿಬರುತ್ತಾನೆ. ಯಾರಿಗಾದರೂ ಔಷಧಿ ಮುಗಿದಿದ್ದರೆ ಮೀನು ಸಾಬಣ್ಣನ ಹತ್ತಿರ ದುಡ್ಡು ಮತ್ತು ಚೀಟಿ ಕಳಿಸಿದರೆ ಆಯ್ತು, ಮರುದಿನ ಆ ಔಷಧಿ ಹಾಜರಾಗಿರುತ್ತದೆ. ಯಾರಿಗಾದರೂ ಚಿಕ್ಕಪುಟ್ಟ ಸಾಮಾನುಗಳು ಬೇಕಿದ್ದರೆ ಅದನ್ನೂ ಸಹ ಸಾಬಣ್ಣನಿಂದಲೆ ತರಿಸಿಕೊಳ್ಳುತ್ತಾರೆ. ಹಳ್ಳಿಯ ಹೆಣ್ಣುಮಕ್ಕಳಿಗೆ ಬೇಕಾದ ಹಣೆಬೊಟ್ಟು, ಕ್ಲಿಪ್, ರಿಬ್ಬನ್, ಸ್ನೋ, ಪೌಡರುಗಳನ್ನೂ ಸಹ ಕೆಲವು ಸಲ ಸಾಬಣ್ಣನೆ ತಂದುಕೊಡುತ್ತಾನೆ. ಅದರಲ್ಲೆಲ್ಲ ನಾಲ್ಕೈದು ರೂಪಾಯಿ ಕಮಿಶನ್ ಗಿಟ್ಟಿಸಿಕೊಳ್ಳುತ್ತಾನೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಹಳ್ಳಿಗರೊಂದಿಗೆ ಬೆರೆತು ಹೋಗಿದ್ದಾನೆ ಸಾಬಣ್ಣ. ಹಳ್ಳಿಗಳಲ್ಲಿ ನಡೆಯುವ ಸಣ್ಣಪುಟ್ಟ ಜಗಳಗಳನ್ನು ಪರಿಹರಿಸುವ ಮಧ್ಯವರ್ತಿಯೂ ಇವನೇ!

ಮೀನು ಸಾಬಣ್ಣನಿಗೆ ಇಬ್ಬರು ಹೆಣ್ಣುಮಕ್ಕಳು. ದೊಡ್ಡವಳು ಆಯಿಷಾ, ಚಿಕ್ಕವಳು ಶಕೀಲಾ. ಇಬ್ಬರೂ ಮದುವೆ ವಯಸ್ಸಿಗೆ ಬಂದಿದ್ದಾರೆ. ಅದೇ ಈಗ ಸಾಬಣ್ಣನಿಗೆ ದೊಡ್ಡ ಚಿಂತೆಗೆ ಕಾರಣವಾಗಿದೆ. ಮದುವೆಯೆಂದರೇನು ಸಾಮಾನ್ಯವೇ ? ವರದಕ್ಷಿಣೆ, ವರೋಪಚಾರ ಅಂತ ಹೆಚ್ಚು ಖರ್ಚೇನೂ ಇಲ್ಲದಿದ್ದರೂ ಒಂದೆರಡು ಕುರಿಯನ್ನಾದರೂ ಕಡಿದು ಊರಿನವರಿಗೆ ಭರ್ಜರಿ ಬಿರಿಯಾನಿ ಊಟ ಹಾಕಿಸಬೇಡವೇ ? ಹೊರಗಿನ ಗಂಡು ನೋಡಿದರೆ ಅವರು ಕೇಳಿದಷ್ಟು ವರದಕ್ಷಿಣೆ ಕೊಡಬೇಕು, ಚಿನ್ನ ಕೊಡಬೇಕು ಎಂದರಿತಿದ್ದ ಸಾಬಣ್ಣನ ಹೆಂಡತಿ ಫಾತಿಮಾ ತನ್ನ ತಮ್ಮ ಹಸನ್‌ನಿಗೆ ತನ್ನ ದೊಡ್ಡ ಮಗಳನ್ನು ಕೊಡಬೇಕೆಂದು ನಿರ್ಧರಿಸಿದ್ದಾಳೆ. ಈ ವಿಷಯವನ್ನು ತನ್ನ ಗಂಡನಿಗೂ ಹೇಳಿ ಒಪ್ಪಿಸಿದ್ದಾಳೆ. ತನ್ನ ತಮ್ಮನಿಗೂ ತನ್ನ ಮಗಳನ್ನು ಅವನೇ ಮದುವೆಯಾಗಬೇಕೆಂದು ಪುಸಲಾಯಿಸಿದ್ದಾಳೆ. ಅಕ್ಕನ ಮಾತಿಗೆ ಕಟ್ಟುಬಿದ್ದ ಹಸನ್ ಮದುವೆಯಾಗಲು ಒಪ್ಪಿದರೂ ತನಗೆ ಚೈನು ಬೇಕು, ವಾಚು, ಉಂಗುರ ಬೇಕು, ಡ್ರೆಸ್ ಬೇಕು ಎಂದು ಹೇಳಿಬಿಟ್ಟಿದ್ದಾನೆ. ಅವನು ಕೇಳುವುದರಲ್ಲಿ ತಪ್ಪೇನೂ ಇಲ್ಲ, ಒಂದು ವೇಳೆ ಅವನು ಬೇರೆ ಹುಡುಗಿಯನ್ನು ಮದುವೆಯಾಗಲು ಒಪ್ಪಿದ್ದರೆ ಅವನಿಗೆ ಇದಕ್ಕಿಂತ ಹೆಚ್ಚು ವರದಕ್ಷಿಣೆ ಸಿಗುತ್ತದೆ ಎಂಬುದು ಸಾಬಣ್ಣ ದಂಪತಿಗೆ ಗೊತ್ತು. ಅದರೇನು ಮಾಡುವುದು ? ಸಾಬಣ್ಣ ಮಾಡುವುದು ಮೀನು ವ್ಯಾಪಾರ. ಅದರಲ್ಲೇ ಅವನ ಸಂಸಾರ ಸಾಗಬೇಕು, ಬೇರೆ ಆದಾಯ ಇಲ್ಲ. ವ್ಯಾಪಾರದಿಂದ ಹೊಟ್ಟೆ ಹೊರೆದುಕೊಳ್ಳುವುದೇ ಏಳು-ಹನ್ನೊಂದು ಆಗಿರುವಾಗ ಇನ್ನು ಉಳಿಸುವುದಾದರೂ ಹೇಗೆ ? ಆದರೆ ಸಾಬಣ್ಣನ ಹೆಂಡತಿ ಫಾತಿಮಾ ಜಾಣೆ. ಗಂಡ ಕೊಟ್ಟಿದ್ದರಲ್ಲೇ ಅಷ್ಟೋ ಇಷ್ಟೋ ಉಳಿಸಿ ಮಗಳಿಗೆ ಅಲ್ಪಸ್ವಲ್ಪ ಬಂಗಾರ ಮಾಡಿಸಿಟ್ಟಿದ್ದಾಳೆ.

ಇವೆಲ್ಲದರ ಜೊತೆಗೆ ಮೀನು ಸಾಬಣ್ಣ ಒಂದು ಕನಸು ಕಾಣುತ್ತಿದ್ದಾನೆ. ಪ್ರತಿದಿನ ಮುಂಜಾನೆ ಕೋಳಿ ಕೂಗಿದ ಕೂಡಲೇ ಎದ್ದು ತನ್ನ ಲಟಾರಿ ಸೈಕಲ್ ತುಳಿದುಕೊಂಡು ಜಾಫರ್ ಸಾಬರ ಮೀನು ಮಂಡಿಗೆ ಬಂದು ಕಾಯುತ್ತಾನೆ. ಆಗ ಅವನ ವಾರಿಗೆಯ ಇತರ ಮೀನು ವ್ಯಾಪಾರಿಗಳು ಬುರ್ರ್... ಎಂದು ತಮ್ಮ ತಮ್ಮ ಬೈಕಿನಲ್ಲಿ ಬರುತ್ತಾರೆ. ಬಂದವರೇ ಚಕ ಚಕ ಎಂದು ಹಣ ಎಣಿಸಿ ಜಾಫರ್ ಸಾಬರಿಗೆ ಕೊಟ್ಟು ಎರಡೆರಡು ಬಾಕ್ಸ್‌ಗಳನ್ನು ಬೈಕಿನ ಕ್ಯಾರಿಯರ್‌ಗೆ ಏರಿಸಿಕೊಂಡು ಬುರ್ರ್... ಎಂದು ಹೋಗಿಬಿಡುತ್ತಾರೆ. ಆಗ ಸಾಬಣ್ಣನ ಹೊಟ್ಟೆಯಲ್ಲಿ ತಳಮಳ. ''ಅಯ್ಯೋ ಅಲ್ಲಾ! ನನ್ನ ಹತ್ತಿರವೂ ಒಂದು ಮೋಟರ್ ಬೈಕ್ ಇದ್ದಿದ್ದರೆ ನಾನೂ ವ್ಯಾಪಾರಕ್ಕೆ ಬೈಕಿನಲ್ಲೇ ಹೊರಡಬಹುದಿತ್ತು, ಏನು ಮಾಡುವುದು, ಆ ಭಾಗ್ಯ ನನಗೆಲ್ಲಿ'' ಎಂದು ಪರಿತಪಿಸುತ್ತಾನೆ. ಹೋಗಲಿ, ಒಂದು ಸೆಕೆಂಡ್ ಹ್ಯಾಂಡ್ ಬೈಕ್ ಕೊಳ್ಳಬೇಕೆಂದರೆ ಕಮ್ಮಿ ಎಂದರೂ ಏಳೆಂಟು ಸಾವಿರವಾದರೂ ಬೇಕು. ಅಷ್ಟೊಂದು ಹಣ ಎಲ್ಲಿಂದ ತರುವುದು ? ಹೋಗಲಿ ಜಾಫರ್ ಸಾಬರಿಗಾದರೂ ಕೇಳೋಣ ಎಂದರೆ ಆ ಸಿಡುಕುಮೋರೆಯ ಸಾಹುಕಾರರೆಲ್ಲಿ ಕೊಡುತ್ತಾರೆ ? ಮೀನಿನ ರೊಕ್ಕ ಕೊಡುವುದಕ್ಕೆ ಒಂದು ದಿನ ಹೆಚ್ಚು ಕಮ್ಮಿಯಾದರೂ ಸಿಡಿಮಿಡಿಗುಟ್ಟುವ ಅವರು ನನಗೆ ಬೈಕ್

## ಅಭಿನಂದನೆಗಳು



ಡಾ|| ಜೆ. ದೇವರಾಜ ರೆಡ್ಡಿ
ಕರ್ನಾಟಕ ಸರ್ಕಾರ ನೀಡುವ
ಪರಿಸರ ಪ್ರಶಸ್ತಿ ಪುರಸ್ಕೃತರು

ತೆಗೆದುಕೊಳ್ಳಲು ಸಾಲ ಕೊಡುವರೇ ? ಛೇ ! ಅದೆಲ್ಲ ಆಗದ ಹೋಗದ ಮಾತು ಎಂದು ತನ್ನ ಬೈಕ್ ತೆಗೆದುಕೊಳ್ಳುವ ಆಸೆಯನ್ನೇ ಹೊಸಕಿಹಾಕಿಬಿಡುತ್ತಾನೆ ಮೀನು ಸಾಬಣ್ಣ.

ಸಾಬಣ್ಣನ ಹತ್ತಿರ ಮೀನು ಖರೀದಿಸುವವರಲ್ಲಿ ಕಳವೆ ಗ್ರಾಮದ ಧರ್ಮಸ್ಥಳ ಗ್ರಾಮೀಣ ಮಹಿಳಾ ಸಂಘದ ಅಧ್ಯಕ್ಷೆ ಕಾವೇರಮ್ಮ ಕೂಡ ಒಬ್ಬಳು. ಪ್ರತಿದಿನ ಏದುಸಿರು ಬಿಡುತ್ತಾ ಸೈಕಲ್ ತುಳಿದುಕೊಂಡು ಬರುವುದನ್ನು ನೋಡುತ್ತಾಳೆ ಕಾವೇರಮ್ಮ. ಎಷ್ಟೋಸಲ ಸಾಬಣ್ಣನ ಪರಿಸ್ಥಿತಿಯನ್ನು ನೋಡಿ, ಆಕೆಗೆ ಅಯ್ಯೋ ಎನಿಸಿದ್ದೂ ಇದೆ. ಒಂದು ದಿನ ಮೀನು ತೆಗೆದುಕೊಳ್ಳುವಾಗ ಸಾಬಣ್ಣನನ್ನು ಕೇಳಿದಳು. "ಅಲ್ಲಾ ಸಾಬಣ್ಣ, ಈ ವಯಸ್ನಲ್ಲಿ ಈ ಲಟಾರಿ ಸೈಕಲನ್ನು ತುಳಿದು ಕೊಂಡು ಅಷ್ಟು ದೂರದಿಂದ ಬರ್ತಿಯಲ್ಲಾ... ಒಂದು ಹೊಸ ಸೈಕಲ್ಲನ್ನಾದರೂ ತೆಗೆದುಕೊಳ್ಳಬಾರದೇನೋ", ಎಂದಾಗ ಸಾಬಣ್ಣ, "ಏನ್ಮಾಡೋದವ್ವಾ, ಹೊಸಾ ಸೈಕಲ್ ತೆಗೆದುಕೊಳ್ಳುವಷ್ಟು ಶ್ರೀಮಂತರಲ್ಲ ನಾವು. ಇರುವ ಹಳೇ ಸೈಕಲ್ಲನ್ನೇ ರಿಪೇರಿ ಮಾಡಿಸಿಕೊಳ್ಳೋದಿಕ್ಕಾಗೋದಿಲ್ಲ. ದಿನಾ ಮೀನು ಮಾರಾಟ ಮಾಡಬೇಕು, ಸಂಸಾರ ನಡೀಬೇಕು. ಏನ್ಮಾಡೋದವ್ವಾ ? ಆ ಅಲ್ಲಾನಿಗೆ ನಮ್ಮಂಥವರ ಮೇಲೆ ಕರುಣೇನೇ ಬರೋದಿಲ್ಲಾ. ಇದ್ದವರಿಗೇ ಮತ್ತೆ ಮತ್ತೆ ಕೊಡ್ತಾನೆ ಇರ್ತಾನೆ. ಇಲ್ಲದವರಿಗೆ ಏನೂ ಇಲ್ಲ. ಎಲ್ಲಾ ನಮ್ಮ ಹಣೆಬರೆಹ ಅಷ್ಟೇ", ಎಂದು ನಿಟ್ಟುಸಿರು ಬಿಡುತ್ತಾನೆ. ಅವನ ಅಸಹಾಯಕತೆಯನ್ನು ಕೇಳಿದ ಕಾವೇರಮ್ಮ ತಾನು ಇವನಿಗೆ ಏನನ್ನಾದರೂ ಮಾಡುವಂತಿದ್ದರೆ... ಎಂದು ಕೊಳ್ಳುತ್ತಾಳೆ. ಅದಾಗಲೇ ಅವಳ ಮನಸ್ಸಿನಲ್ಲಿ ಅವನಿಗೆ ಸಹಾಯ ಮಾಡುವ ಒಂದು ಯೋಜನೆ ಸಿದ್ಧಗೊಳ್ಳುತ್ತದೆ.

ಒಂದು ರೀತಿಯಲ್ಲಿ ಕಾವೇರಮ್ಮ ಹೇಳುತ್ತಿರುವುದೂ ಸರಿ ಎನಿಸುತ್ತದೆ ಸಾಬಣ್ಣನಿಗೆ. ಒಂದು ಹೊಸ ಸೈಕಲ್ಲಾದರೂ ಇದ್ದಿದ್ದರೆ ಅವನ ಶ್ರಮ ಕಡಿಮೆಯಾಗುತ್ತಿತ್ತು. ಪದೇ ಪದೇ ಪಂಕ್ಚರ್ ತೆಗೆಯುವುದು ತಪ್ಪುತ್ತಿತ್ತು. ಆದರೆ ಹೊಸ ಸೈಕಲ್ ತೆಗೆದುಕೊಳ್ಳುವುದಕ್ಕೆ ಕಮ್ಮಿ ಎಂದರೂ ಎರಡು ಸಾವಿರ ವಾದರೂ ಬೇಕು. ಅಷ್ಟು ಹಣವನ್ನು ಹೊಂದಿಸುವು ದಾದರೂ ಹೇಗೆ ? ಯಾರು ಕೊಡ್ತಾರೆ ಅವನಿಗೆ ! ಅವನು ವ್ಯಾಪಾರಕ್ಕೆಂದು ಹೋಗುವ ಹಳ್ಳಿಯವರಲ್ಲಾದರೂ ಸಾಲ ಕೇಳೋಣವೆಂದರೆ ಅವರೂ ಸಹ ಮೀನು ಸಾಬಣ್ಣನಂತೆ ನಿರ್ಗತಿಕರೆ. ದಿನಬೆಳಗಾದರೆ ಬ್ರಾಹ್ಮಣರ ಮನೆಗಳಿಗೆ ಕೂಲಿ ಕೆಲಸಕ್ಕೆ ಹೋಗುವವರು. ಅವರು ದುಡಿದದ್ದು ಅವರ ಹೊಟ್ಟೆಬಟ್ಟೆ ಖರ್ಚಿಗೆ ಸಾಕಾಗುತ್ತದೆ. ಇನ್ನು ಉಳಿಸು ವುದಾದರೂ ಹೇಗೆ ? ಇನ್ನು ಕೆರಿಯಾ ನಾಯಕನಂಥ ಜಮೀನುದಾರರ ಹತ್ತಿರ ಕೇಳೋಣವೆಂದರೆ ಅವ ಮೊದಲೇ ಕಂಜೂಸಿ. ತನಗೆ ಬರುವುದು ಮಾತ್ರ ಕರೆಕ್ಟಾಗಿ ಬಂದುಬಿಡಬೇಕು; ತನ್ನಿಂದ ಒಂದು ಪೈಸೆಯೂ ಹೆಚ್ಚಿಗೆ ಹೋಗಬಾರದು ಎನ್ನುವ ನೀತಿಯವ. ನಾನು ಹಣದ ಸಹಾಯ ಕೇಳಿದರೆ, "ಛೇ ! ಅದೆಂಥದಾ ಸಾಬಣ್ಣ ಸಾಲ ಕೇಳುವುದು ? ನನ್ನ ಹತ್ರ ಎಲ್ಲಿರ್ತದೋ ದುಡ್ಡು ? ಅಷ್ಟು ದೊಡ್ಡ ಸಂಸಾರ ನಡೆಸುವುದೇ ಏಳು-ಹನ್ನೊಂದು. ದುಡ್ಡು ಗಿಡ್ಡು ಕೇಳಬೇಡ; ಬೇಕಾದರೆ ಒಂದಿಪ್ಪತ್ತೈದು ಕೆ.ಜಿ. ಅಕ್ಕಿ ಒಯ್ಯಿ" ಎನ್ನುವವ. ಹೀಗಿರುವಾಗ ಅವನು ಹೊಸ ಸೈಕಲ್ ಕೊಳ್ಳಲು ದುಡ್ಡು ಎಲ್ಲಿಂದ ತರುತ್ತಾನೆ ? ಹೊಸ ಸೈಕಲ್ಲೂ ಬೇಡ ಏನೂ ಬೇಡ. ಆ ಪರ್ವರ್‌ದಿಗಾರ್ ಹೇಗೆ ನಡೆಸ್ತಾನೋ ಹಾಗೆ ನಡೆದುಕೊಂಡ್ಹೋಗಲಿ ಎಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಾನೆ ಸಾಬಣ್ಣ.

ಆ ದಿನ ಸಾಬಣ್ಣನ ಮನಸ್ಸು ಸರಿ ಇರಲಿಲ್ಲ. ಐವತ್ತು ರೂಪಾಯಿ ಕಡಿಮೆ ಕೊಟ್ಟಿದ್ದಕ್ಕೆ ಮಂಡಿ ಸಾವುಕಾರ ಜಾಫರ್-ಸಾಬರು ಸಾಬಣ್ಣನಿಗೆ ಸಿಕ್ಕಾಪಟ್ಟೆ ಬೈದು ಅವಮಾನ ಮಾಡಿ ಮೀನು ಕೊಟ್ಟಿದ್ದರು. ಅದನ್ನೇ ಮನಸಿಗೆ ಹಚ್ಚಿಕೊಂಡ ಸಾಬಣ್ಣ ಅನ್ಯಮನಸ್ಕನಾಗಿ ಚಿಂತಿಸುತ್ತಾ ತನ್ನ ಪರಿಸ್ಥಿತಿಯನ್ನು ಹಳಿದುಕೊಳ್ಳುತ್ತಾ ಸೈಕಲ್ ತುಳಿಯುತ್ತಿದ್ದಾಗ ಎದುರಿಗೆ ಬರುತ್ತಿದ್ದ ಗೊಬ್ಬರ ತುಂಬಿದ ಲಾರಿಯನ್ನು ನೋಡದೆ ಅದಕ್ಕೆ ಗುದ್ದಿಬಿಟ್ಟ. ಗುದ್ದಿದ ಹೊಡೆತಕ್ಕೆ ಬಾಕ್ಸ್‌ನಲ್ಲಿ ತುಂಬಿದ್ದ ಮೀನುಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಹರಡಿಬಿದ್ದವು. ಸೈಕಲ್ ಲಾರಿಯ ಮುಂದಿನ ಚಕ್ರಕ್ಕೆ ಸಿಕ್ಕಿ ಅಪ್ಪಚ್ಚಿಯಾಯಿತು. ಸಾಬಣ್ಣ ಮಾತ್ರ ಸಿಡಿದು ಚರಂಡಿಗೆ ಬಿದ್ದುದರಿಂದ ಸಣ್ಣಪುಟ್ಟ ಗಾಯಗಳೊಂದಿಗೆ ಬದುಕಿಕೊಂಡ. ಈ ಆಕ್ಸಿಡೆಂಟಿನಲ್ಲಿ ಲಾರಿಯವನದೇನೂ ತಪ್ಪಿರಲಿಲ್ಲ. ಲಾರಿಯವನು ಮಾನವೀಯತೆಯಿಂದ ಸಾಬಣ್ಣನನ್ನು ತನ್ನ ಲಾರಿಯಲ್ಲೇ ಕರೆದುಕೊಂಡು ಬಂದು ಸರಕಾರಿ ಆಸ್ಪತ್ರೆಗೆ ಸೇರಿಸಿದ. ಸಾಬಣ್ಣನ ಸೈಕಲ್ ಗುಜರಿ ಅಂಗಡಿ ಸೇರಿತು.

ಇದಾಗಿ ಮೂರ್ನಾಲ್ಕು ದಿನಗಳು ಕಳೆಯಿತು. ಕಳವೆ ಗ್ರಾಮಕ್ಕೆ ಮೀನು ಸಾಬಣ್ಣ ಬರಲಿಲ್ಲ. ಹಳ್ಳಿಯವರಿಗೆ ಗಂಟಲಲ್ಲಿ ಕೂಳು ಇಳಿಯಲಿಲ್ಲ. ಹಳ್ಳಿಯವರಿಗೆ ಸಾಬಣ್ಣ ಯಾವಾಗ ನೆನಪಾಗದಿದ್ದರೂ ಊಟಕ್ಕೆ ಕುಳಿತಾಗ ಮಾತ್ರ ತಪ್ಪದೆ ನೆನಪಾಗುತ್ತಿದ್ದ. ಒಂದು ಹೊತ್ತು ಎರಡು ಹೊತ್ತಾದರೆ ಹೇಗೋ ಬೇಳೆಸಾರು, ಮಜ್ಜಿಗೆ ಹುಳಿಯಲ್ಲಿ ಊಟ ಮಾಡುವ ಹಳ್ಳಿ ಜನಕ್ಕೆ ಸತತವಾಗಿ ನಾಲ್ಕು ದಿನ ಮೀನು ಇಲ್ಲ ಎಂದರೆ ಊಟ ಹೇಗೆ ಮಾಡ್ತಾರೆ ? ಹೋಗಲಿ ಯಾರನ್ನಾದರೂ ಪೇಟೆಗೆ ಕಳಿಸಿ ಮೀನು ತರಿಸೋಣ ಎಂದರೆ ಒಂದಾಳು ವೇಸ್ಟಾಗುತ್ತಾನೆ. ಇದೀಗ ಹಳ್ಳಿಗರು ಚಿಂತೆಗೆ ಬಿದ್ದರು. ಅಲ್ಲಾ, ಮೀನು ಸಾಬಣ್ಣನಿಗೆ ಏನಾಯ್ತು ? ಒಂದು ದಿನವೂ ಹಳ್ಳಿಗೆ ಮೀನು ತರುವುದನ್ನು ತಪ್ಪಿಸಿದವನಲ್ಲ ! ಅರ್ಜೆಂಟ್ ಕೆಲಸದ ಮೇಲೆ ಎಲ್ಲಿಗಾದರೂ ಹೋಗುವುದಿದ್ದರೆ ತಾನು ನಾಳೆ ಬರುವುದಿಲ್ಲ ಎಂದು ಹೇಳಿಹೋಗುತ್ತಿದ್ದ. ಅವನಿಗೇನು ಆರಾಮ ಇಲ್ಲವೋ ಹೇಗೆ , ಏನು ಎತ್ತ ಅಂತ ಗೊತ್ತಾಗಲಿಲ್ಲ ಎಂದೆಲ್ಲಾ ಚಿಂತಿಸಹತ್ತಿದರು. ಕೆರಿಯಾ ನಾಯಕನ ಮನೆ ಯವರು ಪೇಟೆಗೆ ಹೋಗಿ ಮೀನು ತರಿಸಿಕೊಂಡರು. ಕೆಲವರು ಇದ್ದ ಒಣ ಮೀನಿನಲ್ಲೇ ಜೀವನ ಸಾಗಿಸಿದರು. ಹೀಗಿರುವಾಗ ನಾಲ್ಕನೇ ದಿನ ಪೇಟೆಗೆ ಹೋದ ಕೆರಿಯಾ ನಾಯಕನ ಮಗ ಸುದ್ದಿ ತಂದ. ಮೀನು ಸಾಬಣ್ಣನಿಗೆ ಆಕ್ಸಿಡೆಂಟ್ ಆಗಿದೆಯಂತೆ, ಅವನ ಸೈಕಲ್ ನುಜ್ಜು-ಗುಜ್ಜಾ ಗಿದೆಯಂತೆ, ಸಾಬಣ್ಣ ಸರಕಾರಿ ಆಸ್ಪತ್ರೆಯಲ್ಲಿದ್ದಾನಂತೆ, ಎಂದು. ಈ ಸುದ್ದಿ ಕೇಳಿ 'ಅಯ್ಯೋ ಪಾಪ !' ಎಂದರು ಹಳ್ಳಿಗರು. ಕೆಲವರು ಮಂಗಳವಾರ ಸಂತೆಗೆ ಹೋದವರು ಆಸ್ಪತ್ರೆಗೆ ಹೋಗಿ ಸಾಬಣ್ಣನನ್ನು ಮಾತನಾಡಿಸಿಕೊಂಡು ತಮ್ಮ ಬಳಿ ಇದ್ದ ಅಲ್ಪಸ್ವಲ್ಪ ಹಣ ಕೊಟ್ಟು ಬಂದರು.

ಇದಾಗಿ ಇಪ್ಪತ್ತು ದಿನಗಳು ಕಳೆದಿದ್ದವು. ಆ ದಿನ ಕಳವೆ ಗ್ರಾಮದಲ್ಲಿ ಹಬ್ಬದ ವಾತಾವರಣ. ರಸ್ತೆಯುದ್ದಕ್ಕೂ ತಳಿರು-ತೋರಣಗಳಿಂದ ಶೃಂಗರಿಸಲಾಗಿತ್ತು. ಕಳವೆ ಊರಿನ ಸರಕಾರಿ ಶಾಲೆಯಲ್ಲಿ ಧರ್ಮಸ್ಥಳ ಮಹಿಳಾ ಗ್ರಾಮಾಭಿವೃದ್ಧಿ ಸಂಘದ ವಾರ್ಷಿಕೋತ್ಸವದ ಬೃಹತ್ ಸಮಾರಂಭವೇರ್ಪಟ್ಟಿತ್ತು. ಸಮಾರಂಭಕ್ಕೆ ಧರ್ಮಾಧಿ ಕಾರಿಗಳೂ ಆ ಗ್ರಾಮದ ಜಿಲ್ಲಾ ಪಂಚಾಯತ್ ಸದಸ್ಯರೂ,




ಪಕ್ಕದ ಮನೆಯವ ಭ್ರಷ್ಟರಾಜಕಾರಣಿ.
ಅದ್ಕೆ ಭ್ರಷ್ಟಾಚಾರಕ್ಕೆ ತಡೆಗೋಡೆ
ಕಟ್ಟಿಸಿದ್ದೇನೆ !

ಗ್ರಾಮ ಪಂಚಾಯಿತಿ ಅಧ್ಯಕ್ಷರೂ ಬರುವವರಿದ್ದರು. ಆ ಸಮಾರಂಭದಲ್ಲಿ ಸಂಘದ ವತಿಯಿಂದ ಕಳೆದ ಒಂದು ವರ್ಷದ ಅವಧಿಯಲ್ಲಾದ ಅಭಿವೃದ್ಧಿಯ ವಿವರಣೆ ಮತ್ತು ಪ್ರಸಕ್ತ ಸಾಲಿನಲ್ಲಿ ಸ್ವಉದ್ಯೋಗ ಕೈಗೊಳ್ಳುವ ಮಹಿಳೆ ಯರಿಗೆ ಹೊಲಿಗೆ ಯಂತ್ರ ವಿತರಣೆ, ಪುರುಷರಿಗೆ ಹೊಸ ಸೈಕಲ್ ವಿತರಣೆಯ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಭಾಗವಹಿಸಲು ಮೀನು ಸಾಬಣ್ಣನಿಗೂ ಆಹ್ವಾನವಿತ್ತು. ಅವನು ಆ ಊರಿನವನಲ್ಲವಾದರೂ ಸಂಘದ ಅಧ್ಯಕ್ಷೆ ಕಾವೇರಮ್ಮನವರ ವಿಶೇಷ ಮುತುವರ್ಜಿಯಿಂದಾಗಿ ಅವನನ್ನು ತಮ್ಮ ಊರಿನ ನಾಗರಿಕನೆಂದೇ ಪರಿಗಣಿಸಿ ಅವನಿಗೂ ಸೈಕಲ್ ವಿತರಿಸುವ ಕಾರ್ಯಕ್ರಮವಿತ್ತು. ಅವನಿಗೆ ಸೈಕಲ್ ಕೊಡುವುದಕ್ಕೆ ಸಂಘದವರೆಲ್ಲ ಒಪ್ಪಿದ್ದರು.

ಆ ದಿನ ನಿಗದಿಯಾಗಿದ್ದಂತೆ ಕಾರ್ಯಕ್ರಮಗಳೆಲ್ಲ ಸಾಂಗವಾಗಿ ನೆರವೇರಿದವು. ಧರ್ಮಾಧಿಕಾರಿಗಳು ಮತ್ತು ಗ್ರಾಮ ಪಂಚಾಯಿತಿ ಅಧ್ಯಕ್ಷರು ಸಂಘದ ಸಾಧನೆಯನ್ನು ಶ್ಲಾಘಿಸಿ ಸಂಘದ ಅಧ್ಯಕ್ಷೆ ಕಾವೇರಮ್ಮನವರನ್ನು ಕೊಂಡಾಡಿದರು. ಸಂಘದ ಅಧ್ಯಕ್ಷೆ ಮುಂದಿನ ವರ್ಷ ಊರಿನಲ್ಲಿ ಇನ್ನೂ ಆಗಬೇಕಾಗಿರುವ ಅಭಿವೃದ್ಧಿ ಕಾರ್ಯಗಳ ಬಗ್ಗೆ ಗಮನ ಹರಿಸುವ ಆಶ್ವಾಸನೆ ನೀಡಿದರು. ನಂತರ ಹೊಲಿಗೆ ಯಂತ್ರ ಮತ್ತು ಸೈಕಲ್ಲನ್ನು ಫಲಾನುಭವಿಗಳಿಗೆ ವಿತರಿಸಲಾಯಿತು. ಧರ್ಮಾಧಿಕಾರಿಗಳಿಂದ ಹೊಸ ಸೈಕಲ್ಲನ್ನು ಪಡೆದ ಸಾಬಣ್ಣ ಅವರ ಕಾಲಿಗೆ ನಮಸ್ಕರಿಸಿದ. ಅಂತೆಯೇ ಕಾವೇರಮ್ಮನವರ ಕಾಲಿಗೆ ನಮಸ್ಕರಿಸಿದ್ದು ವಿಶೇಷ ವಾಗಿತ್ತು. ಅವರನ್ನು ಸಾಕ್ಷಾತ್ ದೇವರೆಂದೇ ಪರಿಗಣಿಸಿದ ಸಾಬಣ್ಣ, ಎಂದಿನಂತೆ ತನ್ನ ಸೇವೆಯನ್ನು ಮುಂದುವರಿಸಿ ಕೊಂಡು ಹೋಗುವ ಭರವಸೆ ನೀಡಿದ ಸಾಬಣ್ಣ. ಹೀಗೆ ಕಳವೆ ಗ್ರಾಮದವರಿಂದ ಹೊಸ ಸೈಕಲ್ಲನ್ನು ಉಡುಗೊರೆ ಯಾಗಿ ಪಡೆದ ಸಾಬಣ್ಣ ಹೊಸ ಹುರುಪಿನಿಂದ ಇದ್ದ. ಅವನ ಸಂತೋಷಕ್ಕೆ ಪಾರವೇ ಇರಲಿಲ್ಲ. ಐವತ್ತರ ಹರೆಯದ ಸಾಬಣ್ಣನಿಗೀಗ ಇಪ್ಪತ್ತೈದರ ಹರೆಯ ಬಂದಂತಾಗಿತ್ತು.

ಎಂ. ಬಿ. ನಾಯ್ಕ್
ಕೇರಾಫ್. ಶ್ರೀ ರಾಮ್ ಶೆಟ್ಟಿ, ೬ನೇ ಅಡ್ಡರಸ್ತೆ, ಶಾಂತಿನಗರ
ಕಾವೇರಿ ಪ್ರೌಢಶಾಲೆ ಹಿಂಭಾಗ, ಕಮಲಾಪುರ, ಹಾಸನ-೫೭೩೨೦೧

# ರೋಹಿಣಿಯ ಪ್ರತಿಸ್ಪರ್ಧಿ




**ಸಂ**ಜೆಯ ಆಕಾಶದಲ್ಲಿ ಕಾಣುವ ಗ್ರಹ ಶನಿ. ಕನ್ಯಾ ರಾಶಿಯ ಚಿತ್ರಾ ನಕ್ಷತ್ರದ ಪಕ್ಕದಲ್ಲಿ ಎಂದು ಹೇಳಬಹುದಾದರೂ ಸೂಕ್ಷ್ಮವಾಗಿ ಗಮನಿಸಿದರೆ ಶನಿಯ ಪಕ್ಕದಲ್ಲಿಯೇ ಇನ್ನೊಂದು ಚುಕ್ಕೆಯೂ ಕಾಣುತ್ತದೆ. ದುರ್ಬೀನಿನಿಂದ ಸ್ಪಷ್ಟವಾಗಿ ಕಾಣುವ ಈ ಕ್ಷೀಣ ನಕ್ಷತ್ರಕ್ಕೆ ಪೊರಿಮಾ ಎಂಬ ಪಾಶ್ಚಾತ್ಯ ಹೆಸರಿದೆ. ೮ರ ಸಂಜೆ ಚಂದ್ರ ಇದರ ಪಕ್ಕದಲ್ಲಿರುವ ಅವಕಾಶವನ್ನು ಉಪಯೋಗಿಸಿ ಕ್ಷೀಣ ನಕ್ಷತ್ರವನ್ನು ಹುಡುಕಬಹುದು.

ಗುರು ಮಧ್ಯರಾತ್ರಿಯ ಹೊತ್ತಿಗೆ ಉದಯಿಸುತ್ತದೆ. ೨೪ರಂದು ಬೆಳಗಿನ ಜಾವ ಮಾರ್ಗದರ್ಶಿ ಚಂದ್ರ ಗುರುಗ್ರಹದ ಪಕ್ಕವೇ ಕಾಣುತ್ತದೆ. ಪಕ್ಕದಲ್ಲಿಯೇ ಮೇಷ ರಾಶಿಯ ಮೂರು ನಕ್ಷತ್ರಗಳು ಕಾಣುತ್ತವೆ. ಆದ್ದರಿಂದ ಈ ಅವಕಾಶವನ್ನು ಮೇಷ ರಾಶಿಯ ಪರಿಚಯಕ್ಕೂ ಬಳಸಬಹುದು.

ಮುಂಜಾವಿನಲ್ಲಿ ಕಾಣುವ ಇನ್ನೊಂದು ಗ್ರಹ ಮಂಗಳ; ತಿಂಗಳ ಮೊದಲ ದಿನ ಇದು ವೃಷಭ ರಾಶಿಯಲ್ಲಿ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳ ನಡುವೆ ಕಾಣುತ್ತದೆ. ಕೆಂಪು ನಕ್ಷತ್ರ ರೋಹಿಣಿಗೆ ಪ್ರತಿಸ್ಪರ್ಧಿ ಹುಟ್ಟಿಕೊಂಡಂತೆ ಕಾಣುತ್ತದೆ. ದಿನೇ ದಿನೇ ಗ್ರಹ ಚಲಿಸುವುದನ್ನು ಗುರುತು ಮಾಡಿಕೊಳ್ಳಲು ಇದು ಒಳ್ಳೆಯ ಅವಕಾಶ. ರೋಹಿಣಿಯೂ ಕೆಂಪು; ಮಂಗಳನೂ ಕೆಂಪು, ಆದರೆ ಮಂಗಳ ಮಿನುಗುವುದಿಲ್ಲ. ಹೀಗೆ ಗ್ರಹ ಮತ್ತು ನಕ್ಷತ್ರಗಳ ವ್ಯತ್ಯಾಸ ಕಂಡುಕೊಳ್ಳಲು ಇದು ಒಳ್ಳೆಯ ಅವಕಾಶ. ಮುಂದೆ ಮಂಗಳ ಕ್ರಮೇಣ ದೂರ ಅಂದರೆ ಮಿಥುನದ ದಿಕ್ಕಿಗೆ ಸರಿಯುತ್ತದೆ. ೨೪ರಂದು ಅದೇ ಸ್ಥಳದಲ್ಲಿ ಅಂದರೆ ರೋಹಿಣಿ ಮತ್ತು ಕೃತ್ತಿಕಾ ನಡುವೆ ಚಂದ್ರ ಕಾಣುತ್ತದೆ. ಎರಡು ದಿನಗಳ ನಂತರ ಮಂಗಳ ಮತ್ತು ಚಂದ್ರ ಜೋಡಿಯಾಗುತ್ತವೆ. ವಾಸ್ತವದಲ್ಲಿ ಆಚ್ಛಾದನೆ ಅಂದರೆ ಚಂದ್ರನ ಹಿಂದೆ ಮಂಗಳ ಮರೆಯಾಗುವ ಘಟನೆ ನಡೆಯುತ್ತದೆ. ಆದರೆ ನಮಗೆ ಭಾರತದಲ್ಲಿ ಅದು ಕಾಣುವುದಿಲ್ಲ. ೨೮ರ ಬೆಳಗಿನ ಜಾವ ಮಂಗಳನನ್ನು ದಾಟಿ ಚಂದ್ರ ಮುನ್ನಡೆದಿರುವುದನ್ನು ಕಾಣಬಹುದು.






ಮೊದಲ ದಿನದ ಮುಂಜಾವು ಕೃತ್ತಿಕಾ ರೋಹಿಣಿ ನಡುವೆ ಮಂಗಳ



ಜುಲೈ ೨೬ರಂದು ಕೃತ್ತಿಕಾ ರೋಹಿಣಿ ನಡುವೆ ಚಂದ್ರ

ಈ ತಿಂಗಳಲ್ಲಿ 'ಬೆಳ್ಳಿ' ಸಂಜೆಗೂ ಇಲ್ಲ; ಮುಂಜಾವಿಗೂ ಇಲ್ಲ ಈ ಗ್ರಹ ಶುಕ್ರ. ಸೂರ್ಯನ ಇನ್ನೊಂದು ಬದಿಯಿಂದ ಹಾದು ಸಂಜೆಯ ಆಕಾಶಕ್ಕೆ ಬರುವ ಹವಣಿಕೆಯಲ್ಲಿದೆ. ಇದೇ ಕಾರ್ಯವನ್ನು ಕಳೆದ ತಿಂಗಳೇ ಮುಗಿಸಿದ ಬುಧ ಗ್ರಹ ಈ ತಿಂಗಳ ಮಧ್ಯದಲ್ಲಿ ಸಂಜೆಯ ಆಕಾಶದಲ್ಲಿ ದಿಗಂತದ ಅಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ೨೦ರಂದು ಗರಿಷ್ಠ ಕೋನೋನ್ನತಿ; ಅಂದರೆ ಗುರುತಿಸುವ ಪ್ರಯತ್ನ ಮಾಡಬಹುದು.

ಮೋಡಗಳ ನಡುವೆ ಸಂಜೆಯ ಆಕಾಶವೇನಾದರೂ ಶುಭ್ರವಾಗಿ ಕಂಡರೆ ಆಕಾಶಗಂಗೆಯ ಸೊಬಗನ್ನು ವೀಕ್ಷಿಸಬಹುದು. ವೃಶ್ಚಿಕ, ಧನು ಈ ರಾಶಿಗಳಲ್ಲಿ ಅಸಂಖ್ಯಾತ ನೆಬ್ಯುಲಾಗಳಿವೆ. ಉರಗಧರವನ್ನು ಗುರುತಿಸಲು ಇದು ಸದವಕಾಶ. ಪೂರ್ವದಲ್ಲಿ ಉದಯಿಸುತ್ತಿರುವ ವೀಣಾ, ಗರುಡ ಇವುಗಳ ಮೂಲಕ ಆಕಾಶಗಂಗೆಯ ಒಂದು ಶಾಖೆ ಹಾದುಹೋಗುತ್ತದೆ. ಇವುಗಳ ಮಧ್ಯೆ ಹರ್‌ಕ್ಯುಲಿಸ್ (ಭೀಮ) ಬಹಳ ಕ್ಷೀಣವಾಗಿ (ಹೆಸರಿಗೆ ಅಪವಾದವಾಗಿ) ಕಾಣುತ್ತದೆ.

ಜುಲೈ ೪ರಂದು ಭೂಮಿ - ಸೂರ್ಯರ ದೂರ ಗರಿಷ್ಠ. ಆದರೆ ಈಗ ನಮಗೆ ಬೇಸಿಗೆ. ಅಂದಮೇಲೆ ಸೂರ್ಯನ ದೂರದ ವ್ಯತ್ಯಾಸ ಋತುಮಾನಗಳಿಗೆ ಕಾರಣವಲ್ಲ ಎಂದಾಯಿತು.

ಈ ತಿಂಗಳಲ್ಲಿ ಉಲ್ಕಾವೃಷ್ಟಿಗಳಿವೆ. ಗಂಟೆಗೆ ೨೦ ಉಲ್ಕೆಗಳು ಬೀಳುವ ಡೆಲ್ಟಾ ಅಕ್ವಾರಿಡ್ಸ್ ಎಂಬ ವೃಷ್ಟಿ ತಿಂಗಳ ಕೊನೆಗೆ ಆರಂಭವಾಗುತ್ತದೆ. ಮುಂದಿನ ತಿಂಗಳುದ್ದಕ್ಕೂ ಕಾಣುತ್ತದೆ. ಮುಂದಿನ ತಿಂಗಳ ೧೨ಕ್ಕೆ ಗರಿಷ್ಠ ಮುಟ್ಟುವ ಪರ್ಸಿಯೈಡ್ಸ್ ವೃಷ್ಟಿಯ ಉಲ್ಕೆಗಳೂ ತಿಂಗಳ ಕೊನೆಗೆ ಕಾಣತೊಡಗುತ್ತವೆ. ಯಾವ ಉಲ್ಕೆ ಯಾವ ವೃಷ್ಟಿಯದು ಎಂದು ಪತ್ತೆ ಮಾಡುವುದೇ ಜಾಣತನ.

**ಖಗೋಳ ದಿನಚರಿ**

೧ ಅಮಾವಾಸ್ಯೆ ೧೪:೨೪ಕ್ಕೆ; ಪಾರ್ಶ್ವ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)
೨ ಬುಧ - ಚಂದ್ರ ಜೋಡಿ
೪ ಭೂಮಿ - ಸೂರ್ಯರ ನಡುವೆ ಗರಿಷ್ಠ ದೂರ
೬ ಮಂಗಳ - ರೋಹಿಣಿ ಜೋಡಿ*
೭ ಭೂಮಿ - ಚಂದ್ರ ನಡುವೆ ಕನಿಷ್ಠ ದೂರ
೮ ಶನಿ- ಚಂದ್ರ ಜೋಡಿ* ಚಾಂದ್ರಮಾಸದ ಮೊದಲ ಪಾದ
೧೫ ಹುಣ್ಣಿಮೆ ೧೨:೧೦ಕ್ಕೆ
೨೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೧ ಭೂಮಿ - ಚಂದ್ರ ನಡುವೆ ಗರಿಷ್ಠ ದೂರ
೨೩ ಚಾಂದ್ರಮಾಸದ ಕೊನೆಯ ಪಾದ
೨೪ ಗುರು - ಚಂದ್ರ ಜೋಡಿ
೨೭ ಚಂದ್ರ - ಮಂಗಳ ಜೋಡಿ* (ಆಚ್ಛಾದನೆ - ಭಾರತಕ್ಕೆ ಕಾಣುವುದಿಲ್ಲ)
೩೦ ಶುಕ್ರ - ಚಂದ್ರ ಜೋಡಿ. ಡೆಲ್ಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ*
೩೧ ಅಮಾವಾಸ್ಯೆ ೦೦:೧೦ಕ್ಕೆ
ಆಗಸ್ಟ್ ೧ ಬುಧ - ಚಂದ್ರ ಜೋಡಿ
(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

ಮಂಜುನಾಥ ಡಿ. ಡೊಳ್ಳಿನ





# ಮಾಧ್ಯಮ : ಬದಲಾಗುತ್ತಿರುವ ಬದ್ಧತೆ ಮತ್ತು ಆದ್ಯತೆ

ಮನುಷ್ಯ ಬುದ್ಧಿವಂತ ಪ್ರಾಣಿ; ಸಂಘಜೀವಿ. ಹಂತ ಹಂತವಾಗಿ ವಿಕಾಸ ಹೊಂದುತ್ತ ಬಂದ ಮಾನವನು ಸಂಜ್ಞೆ, ಸಂಕೇತ, ಚಿತ್ರಗಳ ಮೂಲಕ 'ಸಂವಹನ' ಆರಂಭಿಸಿದ. ಬರುಬರುತ್ತ ಶಬ್ದಗಳ ಉಚ್ಚಾರ, ಧ್ವನಿ ಬಳಕೆಯ ಮೂಲಕ ಭಾಷೆಯನ್ನು ಕಂಡುಕೊಂಡ. ಈ ಬೆಳವಣಿಗೆಯೇ ಸಂವಹನ ಮತ್ತು ಮಾಧ್ಯಮದ ಅಗತ್ಯತೆಯನ್ನು ಸೂಚಿಸುತ್ತದೆ. ಅಕ್ಷರದ ಉಗಮದೊಂದಿಗೆ ಉತ್ತಮಗೊಳ್ಳುತ್ತ ಬಂದ ಸಂವಹನ ಪ್ರಕ್ರಿಯೆ ಇಂದು ಮಾಹಿತಿ ಕ್ಷೇತ್ರದಲ್ಲಿ ಅಗಾಧವಾದ ಕ್ರಾಂತಿಯನ್ನೇ ಉಂಟುಮಾಡಿದೆ.



ಧ್ವನಿ, ಶಬ್ದ, ವರ್ಣಚಿತ್ರ ಮೊದಲಾದುವುಗಳು ಮಾಧ್ಯಮದ ಮೂಲ ಸಾಧನಗಳಾಗಿವೆ. ಪಾರಂಪರಿಕ ಮುದ್ರಣ, ಶ್ರವ್ಯ ಹಾಗೂ ದೃಶ್ಯ ಈ ಮೂರೂ ಮಾಧ್ಯಮಗಳೊಂದಿಗೆ ಆಧುನಿಕ ತಂತ್ರಜ್ಞಾನದ ಕೊಡುಗೆಗಳಾದ ಇಂಟರ್‌ನೆಟ್, ಬ್ಲಾಗ್, ವೆಬ್‌ಸೈಟ್, ಮೊಬೈಲ್, ಎಸ್.ಎಂ.ಎಸ್.ಗಳು ಅತ್ಯಂತ ವೇಗವಾಗಿ ಮಾಹಿತಿಯನ್ನು ರವಾನಿಸುವ ಮತ್ತು ಸ್ವೀಕರಿಸುವ ಕಾರ್ಯದಲ್ಲಿ ನಿರತವಾಗಿವೆ. ಇಂಟರ್‌ನೆಟ್ ಬ್ರೌಸರ್‌ಗಳ ನೆಚ್ಚಿನ 'ಗೂಗಲ್' ತಾಣವು ಬಯಸಿದ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಬೆರಳಂಚಿಗೆ ತಂದೊದಗಿಸುವ ಕ್ಷಿಪ್ರವೇಗದ ಮಾಧ್ಯಮವಾಗಿದೆ.

ಮೊಬೈಲ್, ಇಂಟರ್‌ನೆಟ್, ಬ್ಲಾಗ್, ಸಿನೆಮಾ, ನಾಟಕ – ಹೀಗೆ ಎಷ್ಟೇ ಪ್ರಕಾರದ ಮಾಧ್ಯಮಗಳಿದ್ದರೂ 'ಮಾಧ್ಯಮ' ಎಂಬ ಶಬ್ದ ಕಿವಿಗೆ ಬಿದ್ದಾಕ್ಷಣ ನಮ್ಮ ಕಣ್ಣ ಮುಂದೆ ಗೋಚರಿಸುವುದು ಸುದ್ದಿ ಮಾಧ್ಯಮಗಳೇ. ಮಾಹಿತಿ ತಂತ್ರಜ್ಞಾನದ ತೀವ್ರ ಬೆಳವಣಿಗೆಯ ಜೊತೆಯಲ್ಲಿಯೂ ನಿತ್ಯ ಓದುವ ದಿನಪತ್ರಿಕೆಗಳು, ವಾರ್ತೆಗಳನ್ನು ಬಿತ್ತರಿಸುವ ರೇಡಿಯೋ ಅಥವಾ ಟಿ.ವಿ. ವಾಹಿನಿಗಳಿಗೆ ಅವುಗಳದೇ ಆದ ಪ್ರಾಮುಖ್ಯತೆ ಇದೆ. ತಂತ್ರಜ್ಞಾನ ಕ್ಷೇತ್ರದಲ್ಲಿ ಆಗಿರುವ ಬೆಳವಣಿಗೆಗಳು ತ್ವರಿತ ಮಾಹಿತಿ ರವಾನೆಗೆ ವರವಾಗಿವೆ. ಆದರೆ ವರ್ತಮಾನವನ್ನು, ಸುದ್ದಿಯನ್ನು ಶ್ರೀಸಾಮಾನ್ಯನಿಗೆ ತಲುಪಿಸುವುದು ಸುದ್ದಿ ಮಾಧ್ಯಮಗಳೆನಿಸಿಕೊಳ್ಳುವ ಪತ್ರಿಕೆ, ರೇಡಿಯೋ ಹಾಗೂ ಟಿ.ವಿ. ವಾಹಿನಿಗಳೇ.




**ಮಾಧ್ಯಮ ಮತ್ತು ಸಾಮಾಜಿಕ ಬದ್ಧತೆ**

ಸಮೂಹ ಮಾಧ್ಯಮಗಳಲ್ಲಿಯೇ ಅಗ್ರಸ್ಥಾನದಲ್ಲಿರುವ ಸುದ್ದಿ ಮಾಧ್ಯಮಗಳು ಸಮಾಜದ ಆತ್ಮಸಾಕ್ಷಿಯಿದ್ದಂತೆ. ಅವು ಯಾವಾಗಲೂ ಜನಪರವಾಗಿ ಮಿಡಿಯುವ, ದುಡಿಯುವ ಮನೋಭಾವ ಹೊಂದಿರಬೇಕು. ಪತ್ರಕರ್ತನಾಗುವವನಿಗೆ ಈ ಸಾಮಾಜಿಕ ಬದ್ಧತೆ ಬೇಕೇಬೇಕು.

ಪ್ರತಿನಿತ್ಯ ದೊಡ್ಡ ದೊಡ್ಡ ರಾಜಕಾರಣಿಗಳು, ಅಧಿಕಾರಿಗಳು ಮತ್ತು ಶ್ರೀಮಂತರ ಒಡನಾಟ ತಂದುಕೊಡುವ ಪತ್ರಿಕಾ ವೃತ್ತಿ ಅಂತಹ ಒಡನಾಟಗಳೊಂದಿಗೂ 'ತನ್ನತನ'ವನ್ನು ಉಳಿಸಿಕೊಳ್ಳುವಲ್ಲಿ ಸವಾಲೊಡ್ಡುತ್ತದೆ. ಆ ಸಂಬಂಧಗಳನ್ನು ಒಂದು ನಿರ್ದಿಷ್ಟ ಅಂತರವನ್ನಿಟ್ಟುಕೊಂಡೇ ನಿಭಾಯಿಸಬೇಕು. ಅಧಿಕಾರಸ್ಥರು, ಉದ್ಯಮಿಗಳು, ಧಾರ್ಮಿಕ ಮುಖಂಡರು ಮಾಧ್ಯಮ ಪ್ರತಿನಿಧಿಗಳನ್ನು ಓಲೈಸಲು 'ಆಫ್ ದಿ ರಿಕಾರ್ಡ್' ಸಭೆ, ಹರಟೆಗಳಿಗೆ ಕರೆಯುವುದು, ಪಾರ್ಟಿಗಳನ್ನು ಮತ್ತು ಉಡುಗೊರೆಗಳನ್ನು ಕೊಡುವ ಮೂಲಕ ಪತ್ರಕರ್ತರನ್ನು ಆಮಿಷಗಳಿಗೆ ಒಳಗುಮಾಡುವ ತವಕದಲ್ಲಿ ಇರುತ್ತಾರೆ. ಆದ್ದರಿಂದ ಪತ್ರಕರ್ತನಾದವನು ಸದಾ ತನ್ನ ಅಂತರಂಗವನ್ನು ಜಾಗೃತವಾಗಿಟ್ಟುಕೊಂಡು ಇಂತಹ ಪಾರ್ಟಿ, ಉಡುಗೊರೆಗಳನ್ನು ನಿರಾಕರಿಸುವ ನಿಷ್ಠುರತೆ ಬೆಳೆಸಿಕೊಳ್ಳಬೇಕು. ಜನಪರವಾದ, ರೈತಪರವಾದ, ಬಡವರ ಪರವಾದ, ಶೋಷಿತರ







ಪರವಾದ ಬದ್ಧತೆಯನ್ನು ಮೈಗೂಡಿಸಿಕೊಳ್ಳಬೇಕು. ಆಗ ಮಾತ್ರ ಆತ ವಸ್ತುನಿಷ್ಠ ವರದಿಗಾರನಾಗಬಲ್ಲ, ತನ್ನ ವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸಿಕೊಂಡು ವೃತ್ತಿಗೆ ನ್ಯಾಯ ಒದಗಿಸಬಲ್ಲ.

ಅಪಾರ ಸ್ವಾತಂತ್ರ್ಯ ಬಯಸುವ ಮಾಧ್ಯಮ ಪ್ರತಿನಿಧಿಗಳು ತಮ್ಮನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ; ತಾವು ಬರೆದುದೇ ಅಂತಿಮ ಎಂಬಂತೆ ವರ್ತಿಸುವವರನ್ನು ಕಾಣಬಹುದು. ಆದರೆ ಪತ್ರಕರ್ತನಾದವ ಸಮಾಜಕ್ಕೆ, ಓದುಗನಿಗೆ ಉತ್ತರದಾಯಿಯಾಗಿರುತ್ತಾನೆ. ಸಮಸ್ತ ಓದುಗರ ಪ್ರತಿನಿಧಿಯಾಗಿ ಆತ ಚಿಂತಿಸುವದನ್ನು, ಬರೆಯುವದನ್ನು ರೂಢಿಸಿಕೊಳ್ಳಬೇಕು.

ಆದರೆ ಇಂದಿರುವ ಪರಿಸ್ಥಿತಿಯಲ್ಲಿ ಮಾಧ್ಯಮ ವಲಯದ ಬದ್ಧತೆ ಮತ್ತು ಆದ್ಯತೆಗಳು ಕೂಡ ಬದಲಾವಣೆಗೊಳ್ಳುತ್ತಿರುವದು ದುರದೃಷ್ಟಕರ ಸಂಗತಿಯಾಗಿದೆ.

**ಜಾಹೀರಾತು ಮತ್ತು ಜಾಹೀರಾತುದಾರರ ಪಾರಮ್ಯ**

ಜಾಗತೀಕರಣವು ಮಾಧ್ಯಮದ ಮೇಲೆ ತನ್ನ ಪರಿಣಾಮಗಳನ್ನು ಗಾಢವಾಗಿಯೇ ಬೀರಿದೆ. ಪತ್ರಿಕೆ, ಟಿ.ವಿ. ಹಾಗೂ ಇತ್ತೀಚೆಗೆ ಎಫ್.ಎಂ.ಗಳ ಮೂಲಕ ಮರುಹುಟ್ಟು ಪಡೆದಿರುವ ರೇಡಿಯೋಗಳಲ್ಲಿ ಸುದ್ದಿ ಸಂಪಾದಕರು, ಕಾರ್ಯಕ್ರಮ ನಿರ್ಮಾಪಕರಿಗಿಂತಲೂ ಮಿಗಿಲಾಗಿ ಮಾರ್ಕೆಟಿಂಗ್ ವಿಭಾಗದ ಮುಖ್ಯಸ್ಥರು ಮಹತ್ವ ಪಡೆದುಕೊಳ್ಳುತ್ತಿದ್ದಾರೆ. ಪ್ರಾಯೋಜಿತ ಕಾರ್ಯಕ್ರಮಗಳು ಹಾಗೂ ಜಾಹೀರಾತುಗಳಿಗೆ ಅಗತ್ಯಕ್ಕಿಂತ ಹೆಚ್ಚು ಪ್ರಾಮುಖ್ಯತೆ ಸಿಗತೊಡಗಿದೆ.

ಜಾಹೀರಾತುಗಳಿಲ್ಲದೆ ಪತ್ರಿಕೆಗಳನ್ನು ನಡೆಸುವುದು ಸಾಧ್ಯವಿಲ್ಲವಾದರೂ ಜಾಹೀರಾತುಗಳು ಹಾಗೂ ಜಾಹೀರಾತುದಾರರು ಮಾಧ್ಯಮದ ಆಶಯ ಹಾಗೂ ಅಡಕಗಳನ್ನು ನಿರ್ಧರಿಸುವಂತಾಗಬಾರದು. ಅಕಸ್ಮಾತ್ ಒಂದು ಸುದ್ದಿ ತನ್ನ ಪ್ರಮುಖ ಜಾಹೀರಾತುದಾರ ಅಥವಾ ಜಾಹೀರಾತು ಒಪ್ಪಂದ ಮಾಡಿಕೊಂಡಿರುವ ವ್ಯಕ್ತಿ/ಕಂಪನಿಯ ಹಿತಾಸಕ್ತಿಗೆ ಮಾರಕವಾಗುವಂತಿದ್ದರೆ ಅಥವಾ ಅಂತಹ ಜಾಹೀರಾತುದಾರ ಕಂಪನಿ/ವ್ಯಕ್ತಿಯ ವಿರುದ್ಧವಾಗಿದ್ದರೆ ಆ ಸುದ್ದಿಯನ್ನೇ ಕೈಬಿಡುವ ಪರಿಪಾಠ ಬೆಳೆಯುತ್ತಿರುವುದು ಪ್ರತಿನಿತ್ಯ ಮಾಧ್ಯಮಗಳನ್ನು ಸೂಕ್ಷ್ಮವಾಗಿ, ಗಂಭೀರವಾಗಿ ಗಮನಿಸುವ, ತುಲನಾತ್ಮಕವಾಗಿ ಅಧ್ಯಯನ ಮಾಡುವ ಪ್ರಜ್ಞಾವಂತ ಓದುಗ ಅಥವಾ ನೋಡುಗನ ಗಮನಕ್ಕೆ ಬಾರದೇ ಇರದು.

ಯಾವುದೇ ಪತ್ರಿಕೆ, ರೇಡಿಯೋ ಅಥವಾ ಟಿ.ವಿ.ಗಳಿರಲಿ, ಅಲ್ಲಿ ಜಾಹೀರಾತಿನ ಪ್ರಮಾಣ ಶೇಕಡ ೪೦ನ್ನೂ ಮೀರಿರಬಾರದು; ೬೦:೪೦ರ ಅನುಪಾತವನ್ನು ಮೀರದಂತೆ ಕ್ರಮವಾಗಿ ಸುದ್ದಿ ಮತ್ತು ಜಾಹೀರಾತುಗಳಿರಬೇಕು ಎಂಬ ರಾಷ್ಟ್ರೀಯ ನಿಯಮವಿದೆ. ಆದರೆ ನಮ್ಮ ಮಾಧ್ಯಮಗಳು ಆ ನಿಯಮವನ್ನು ನಿರಂತರವಾಗಿ ಉಲ್ಲಂಘಿಸುತ್ತಲೇ ಬಂದಿವೆ.

**ಜಾಹೀರಾತುದಾರರ ಪ್ರಭಾವ, ನಿಯಂತ್ರಣ**

ಜಾಹೀರಾತುಗಳಿಲ್ಲದೆ ಪತ್ರಿಕೆಗಳನ್ನು ನಡೆಸಬೇಕೆನ್ನುವುದು ಕೇವಲ ಆದರ್ಶದ ಮಾತಾಗಬಹುದಷ್ಟೆ. ವಾಸ್ತವವಾಗಿ ಅದು ಕಾರ್ಯಸಾಧುವಲ್ಲವೆಂಬುದು ನಿಜ. ಆದರೆ ಜಾಹೀರಾತುದಾರರೇ ಪತ್ರಿಕೆಯೊಂದರ ಸುದ್ದಿ, ಲೇಖನಗಳ ಪ್ರಕಟಣೆಯ ನಿರ್ಧಾರ ಕೈಗೊಳ್ಳುವಂತಾಗುತ್ತಿದ್ದು, ಓದುಗ, ಆತನ ಅನಿಸಿಕೆ, ಅಭಿಪ್ರಾಯಗಳು ನಗಣ್ಯವಾಗುತ್ತಿವೆ.

ವಿಶೇಷವಾಗಿ, ಬಳ್ಳಾರಿ ಮತ್ತು ಹೊಸಪೇಟೆ ಭಾಗಗಳನ್ನು ಅನುಲಕ್ಷಿಸಿ ನೋಡಿದಾಗ ಈ ಅಂಶ ಹೆಚ್ಚು ಸ್ಪಷ್ಟವಾಗುತ್ತದೆ. ಅಕ್ರಮ ಗಣಿಗಾರಿಕೆಯಿಂದ ಅಪಾರ ಸಂಪತ್ತು ಗಳಿಸಿರುವ ಅನೇಕ ಉದ್ಯಮಿಗಳು, ರಾಜಕಾರಣಿಗಳು ಆ ಜಿಲ್ಲೆಯ ಪತ್ರಿಕೆಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದ್ದಾರೆ.

ಅಕ್ರಮ ಗಣಿಗಾರಿಕೆಯಿಂದ ನೈಸರ್ಗಿಕ ಸಂಪತ್ತನ್ನು ಕೊಳ್ಳೆ ಹೊಡೆಯುತ್ತಿರುವ ಕೆಲ ರಾಜಕಾರಣಿಗಳು ಮುಖಪುಟದಲ್ಲಿ ಪತ್ರಿಕೆಯ ಶಿರೋನಾಮೆಯೊಂದನ್ನು ಹೊರತುಪಡಿಸಿ ಉಳಿದೆಲ್ಲ ಕಡೆಯೂ ತಮ್ಮ ಜಾಹೀರಾತುಗಳನ್ನೇ ಪ್ರಕಟಿಸುವಂತೆ ಒತ್ತಡ ಹೇರುತ್ತಿರುವ ಅನೇಕ ಪ್ರಸಂಗಗಳನ್ನು ಆ ಭಾಗದ ಪತ್ರಿಕಾ ಮಿತ್ರರೇ ಹೇಳುತ್ತಾರೆ.

ಜವಾಬ್ದಾರಿಯುತ ಮಾಧ್ಯಮಗಳನ್ನು ಜಾಹೀರಾತುದಾರರೇ ನಿಯಂತ್ರಿಸುವಂತಾಗುತ್ತಿರುವ ಈ ಬೆಳವಣಿಗೆ ಬಹಳ ಅಪಾಯಕಾರಿಯಾದುದು.

**ಕಾಸಿಗಾಗಿ ಸುದ್ದಿ (ಪೇಯ್ಡ್ ನ್ಯೂಸ್)**

ದುಡ್ಡು ಕೊಟ್ಟು ಸುದ್ದಿ ಪ್ರಕಟಿಸಿಕೊಳ್ಳುವ ಕೆಟ್ಟ ಸಂಪ್ರದಾಯವನ್ನೇ ಕಾನೂನುಬದ್ಧಗೊಳಿಸಹೊರಟಿರುವ ಒಂದು ನಿರ್ಲಜ್ಜ ಹೆಜ್ಜೆಯೇ ಕಾಸಿಗಾಗಿ ಸುದ್ದಿ (ಪೇಯ್ಡ್ ನ್ಯೂಸ್). ಈ ಕಲ್ಪನೆ ಪತ್ರಿಕೆಗಳ ಜೀವಾಳವನ್ನೇ ಅಲುಗಾಡಿಸುವ, ಓದುಗನ ಹಿತಾಸಕ್ತಿ, ಸಾರ್ವಜನಿಕ ಸುದ್ದಿ, ಹಾಗೂ ಸಾಮಾಜಿಕ ಬದ್ಧತೆಯನ್ನೇ ಇಲ್ಲವಾಗಿಸುವ ಪೆಡಂಭೂತವಾಗಿದೆ.

ಕೆಲವು ಪತ್ರಕರ್ತರು ಹಣ ಪಡೆದು ಸುದ್ದಿ ಪ್ರಕಟಿಸುವ ಕೆಟ್ಟ ಹಾಗೂ ಭ್ರಷ್ಟ ಚಾಳಿ ಹೊಂದಿದ್ದಾರೆ. ಅದೇ ಕೆಲಸವನ್ನು ಈಗ ನೇರವಾಗಿ ಪತ್ರಿಕಾಲಯಗಳೇ ಮಾಡ ಹೊರಟಿರುವ ಕ್ರಮದ ಹೊಸ ರೂಪವೇ 'ಪೇಯ್ಡ್ ನ್ಯೂಸ್' ಆಗಿದೆ.

ಇದು ಮಾಧ್ಯಮ ರಂಗಕ್ಕೆ ಕಾಲಿರಿಸಿರುವ ಕಾರ್ಪೊರೇಟ್ ಸಂಸ್ಕೃತಿಯನ್ನು ಬಿಂಬಿಸುತ್ತದೆ. 'ಪೇಯ್ಡ್ ನ್ಯೂಸ್' ಈಗ ಕಾನೂನಾಗಿ ರೂಪ ಪಡೆಯುವ ಹಂತದಲ್ಲಿದೆ. ಒಂದು ವೇಳೆ ಆ ಕಾನೂನು ಜಾರಿಗೊಂಡಿದ್ದೇ ಆದರೆ ನಮ್ಮ ಪತ್ರಿಕೆಗಳಲ್ಲಿ ಸಾಮಾಜಿಕ ಬದ್ಧತೆ ದುರ್ಬೀನು ಹಾಕಿಕೊಂಡು ಹುಡುಕಿದರೂ ಸಿಗದಂತಾಗಬಹುದು. 'ಪೇಯ್ಡ್ ನ್ಯೂಸ್' ಕಾನೂನಿನಿಂದ ಪತ್ರಿಕೆಗಳು ಉಳ್ಳವರ ಧ್ವನಿಗಳಾಗಿ, ಇಲ್ಲದವರಿಗೆ ಇಲ್ಲವಾಗಿಬಿಡುವ ದಿನಗಳು ದೂರವಿಲ್ಲ.

ಆರ್ಥಿಕ ಸ್ವಾತಂತ್ರ್ಯವಿಲ್ಲದಿದ್ದರೆ ಎಲ್ಲ ಸ್ವಾತಂತ್ರ್ಯಗಳೂ ನಿರರ್ಥಕ ಎಂಬ ಮಾತೊಂದಿದೆ. ಹಾಗೆಯೇ ಆ ಮಾತಿಗೆ ಪೂರಕವಾಗಿ ದುಡ್ಡು ಕೊಟ್ಟವನ ಆಸಕ್ತಿಯೇ ಸುದ್ದಿಯ ಆದ್ಯತೆಯಾದರೆ ವಸ್ತುನಿಷ್ಠತೆ, ಬದ್ಧತೆ ಎಂಬುದು ಕೇವಲ ಮರೀಚಿಕೆಗಳಾಗಿಬಿಡುತ್ತವೆ.

**ಮಾಧ್ಯಮಗಳು ಮತ್ತು ಮೌಢ್ಯ**

ತಮ್ಮ ಓದುಗ, ನೋಡುಗರಲ್ಲಿ ವೈಚಾರಿಕ ಪ್ರಜ್ಞೆ, ವೈಜ್ಞಾನಿಕ ಮನೋಭಾವ ಬೆಳೆಸಿ ಮೌಢ್ಯ ಕಂದಾಚಾರಗಳನ್ನು ಸಮಾಜದಿಂದ ಹೊಡೆದೋಡಿಸಬೇಕಾದ ಗುರುತರ ಹೊಣೆಗಾರಿಕೆ ಮಾಧ್ಯಮಗಳ ಮೇಲಿದೆ. ವಿಪರ್ಯಾಸವೆಂದರೆ ಮಾಧ್ಯಮಗಳು ಇಂದು ಅಕ್ಷರಶಃ ಅದಕ್ಕೆ ವಿರುದ್ಧವಾಗಿ ವರ್ತಿಸುತ್ತಿವೆ ಎಂದರೆ ಅದು ಕೇವಲ ಆರೋಪವಾಗಲಿಕ್ಕಿಲ್ಲ.

ಟಿ.ವಿ.ಗಳಿಗೆ ಅವುಗಳ ಟಿ.ಆರ್.ಪಿ. (ಯಾವುದನ್ನು ಎಷ್ಟು ಮಂದಿ ನೋಡುತ್ತಾರೆ ಎಂಬುದರ ಲೆಕ್ಕಾಚಾರ) ಆಧರಿಸಿ ಜಾಹೀರಾತುಗಳು ಬರುವುದರಿಂದ ಅವು ತಮ್ಮ ಟಿ.ಆರ್.ಪಿ. ಹೆಚ್ಚಿಸಿಕೊಳ್ಳಲು ಮೌಢ್ಯ, ಕಂದಾಚಾರದ ಭಾವನೆಗಳನ್ನು ಪ್ರೋತ್ಸಾಹಿಸಿ, ನೀರೆರೆಯುವಂತಹ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಿವೆ.

ವಿವಿಧ ಖಾಸಗಿ ವಾಹಿನಿಗಳಲ್ಲಿ ಪ್ರಸಾರವಾಗುತ್ತಿರುವ 'ಹೀಗೂ ಉಂಟೆ?', 'ಜನ್ಮಾಂತರ', 'ಭವಿಷ್ಯವಾಣಿ'ಯಂತಹ ಅವೈಜ್ಞಾನಿಕ ಕಾರ್ಯಕ್ರಮಗಳು ಜನಸಾಮಾನ್ಯನ ಮುಗ್ಧತೆಯನ್ನೇ ಬಂಡವಾಳ ಮಾಡಿಕೊಂಡಿವೆ.

ಕೌಟುಂಬಿಕ ಸಮಸ್ಯೆ, ನಾಲ್ಕು ಗೋಡೆಗಳ ಮಧ್ಯೆ ಪರಿಹರಿಸಬಹುದಾದ ಜಗಳಗಳನ್ನೇ ವಸ್ತುವಾಗಿಟ್ಟುಕೊಂಡು ರೂಪುಗೊಂಡು, 'ಕಥೆ ಅಲ್ಲ ಜೀವನ', 'ಬದುಕು ಜಟಕಾಬಂಡಿ' ಯಂಥ ಕಾರ್ಯಕ್ರಮಗಳು ಹಾಗೂ ಹಿಂದಿ ಚಾನೆಲ್‌ವೊಂದರಲ್ಲಿ ಪ್ರಸಾರವಾಗುತ್ತಿದ್ದ 'ಸಚ್ ಕಾ ಸಾಮ್‌ನಾ', ರಾಖಿ ಸಾವಂತ್ ನಡೆಸಿಕೊಡುತ್ತಿದ್ದ 'ರಾಖಿ ಕಾ ಇನ್ಸಾಫ್'ನಂತಹ ಕಾರ್ಯಕ್ರಮಗಳು ಹಲವರ ಪ್ರಾಣವನ್ನೇ ಬಲಿ ತೆಗೆದುಕೊಂಡದ್ದು ದೊಡ್ಡ ದುರಂತವೇ ಸರಿ.

ಇಂತಹ ಕಾರ್ಯಕ್ರಮಗಳಿಂದ ಕೌಟುಂಬಿಕ ಕಲಹಗಳು ಪರಿಹಾರಗೊಂಡಿರುವುದಕ್ಕಿಂತ ಅಲ್ಲಿರುವ ಕಂದಕಗಳು ಮತ್ತಷ್ಟು ಹೆಚ್ಚಾಗಿರುವ ಉದಾಹರಣೆಗಳೇ ಸಾಕಷ್ಟಿವೆ.

ಮೌಢ್ಯ, ಕಂದಾಚಾರಗಳನ್ನು ನಿವಾರಿಸಬೇಕಾದ ಮಾಧ್ಯಮಗಳೇ ಅವುಗಳನ್ನು ಪೋಷಿಸಹೊರಟರೆ ದೂರುವುದು ಯಾರನ್ನು?

**ಆಕಾಶವಾಣಿಯ ಮೇಲ್ಮೆ**

ಇಂಥ ಪರಿಸ್ಥಿತಿಯಲ್ಲೂ ಮೌಢ್ಯ ಕಂದಾಚಾರಗಳನ್ನು ಪೋಷಿಸುತ್ತಿರುವ ಖಾಸಗಿ ಮಾಧ್ಯಮಗಳ ಎದುರು ಸಾರ್ವಜನಿಕ ವಲಯದ ಆಕಾಶವಾಣಿ ಇಂದಿಗೂ ಅಂತಹ ಅಲ್ಪತನಕ್ಕೆ ಕೈ ಹಾಕದೆ ತನ್ನ ಮೇಲ್ಮೆಯನ್ನು ಕಾಯ್ದುಕೊಂಡು ಬಂದಿದೆ.

ಇದುವರೆಗೂ ಆಕಾಶವಾಣಿ ಭಾರತದ ಬಹು ಸಂಸ್ಕೃತಿಯನ್ನು ಕಾಪಾಡಲು ಶ್ರಮಿಸುತ್ತಿರುವ ಮಾಧ್ಯಮವಾಗಿದೆ. ಟಿ.ವಿ.ಯ ಪ್ರಬಲ ಪೈಪೋಟಿಯ ಎದುರು ಆಕಾಶವಾಣಿಯ ಗ್ಲಾಮರ್ ಕಡಿಮೆಯಾಗಿರಬಹುದಾದರೂ ಆರ್ಥಿಕ ಕಾರಣಗಳಿಗಾಗಿ ಅದು ತನ್ನ ಬದ್ಧತೆಯನ್ನು ಬಿಟ್ಟುಕೊಟ್ಟಿಲ್ಲ. ಸಮಾಜದ ಎಲ್ಲ ವರ್ಗಗಳಿಗೆ ದೇಶದ ಎಲ್ಲ ಭಾಷೆ, ಉಪಭಾಷೆಗಳಿಗೆ ಸಮಾನವಾದ ಆದ್ಯತೆಯನ್ನು ಆಕಾಶವಾಣಿ ನೀಡುತ್ತ ಬಂದಿದೆ.

ಆಕಾಶವಾಣಿಯಲ್ಲಿ ಭವಿಷ್ಯ ಹೇಳುವಂತಹ, ಮೌಢ್ಯವನ್ನು ಪ್ರಚೋದಿಸುವಂತಹ, ಕೇಳುಗರನ್ನು ಪ್ರಲೋಭನೆಗೆ ಒಳಪಡಿಸುವಂತಹ, ಒಂದೇ ಒಂದು ಕಾರ್ಯಕ್ರಮವನ್ನೂ ಸಹ ಬಿತ್ತರಿಸುತ್ತಿಲ್ಲ. ಈ ಮೂಲಕ ಆಕಾಶವಾಣಿ ಇತರ ಮಾಧ್ಯಮಗಳಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದೆ.

ಹೀಗೆ ಅನೇಕ ಕಾರಣಗಳಿಂದಾಗಿ ಮಾಧ್ಯಮ ಇಂದು ತನ್ನ ಬದ್ಧತೆ ಮತ್ತು ಆದ್ಯತೆಗಳನ್ನು ಬದಲಾಯಿಸಿಕೊಳ್ಳುತ್ತಿದೆ. ಎಷ್ಟೇ ತೀವ್ರ ಅಗತ್ಯವಿದ್ದರೂ ಪತ್ರಿಕೆಗಳು, ಟಿ.ವಿ.ಗಳು ಹಾಗೂ ಇತರ ಮಾಧ್ಯಮಗಳು ತಮ್ಮ ಸಾಮಾಜಿಕ ಬದ್ಧತೆಯನ್ನು ಬಲಿಕೊಟ್ಟು ಜಾಹೀರಾತುದಾರರ, ಬಂಡವಾಳಶಾಹಿಗಳ ತುತ್ತೂರಿಯಾಗಬಾರದು. ಒಂದು ವೇಳೆ ಹಾಗಾದರೆ ಪ್ರಜಾಪ್ರಭುತ್ವದ ನಾಲ್ಕನೇ ಅಂಗ ಎಂಬ ಹಿರಿಮೆ ಹೊಂದಿರುವ ಮಾಧ್ಯಮ ತನ್ನ ಸ್ಥಾನವನ್ನು ತಾನೇ ಕಳೆದುಕೊಳ್ಳುತ್ತದೆ. ಅಲ್ಲದೆ ಜನಸಾಮಾನ್ಯನ ಭಾವನೆಗೆ ಧ್ವನಿಯಾಗದೇ ನೋಡುಗರನ್ನು, ಓದುಗರನ್ನು ಮೂಕರನ್ನಾಗಿಸಿಬಿಡುವ ಅಪಾಯವಿದೆ.

**ಮಂಜುನಾಥ ಡಿ. ಡೊಳ್ಳಿನ**
ಪ್ರಸಾರ ನಿರ್ವಾಹಕ, ಆಕಾಶವಾಣಿ, ಜೆ.ಪಿ.ಎಸ್. ಕಾಲನಿ, ಭದ್ರಾವತಿ - ೫೭೭ ೩೦೧

# ರುಕ್ಮಿಣಿಯ ಕೊರಳ ಮುತ್ತಿನ ಸರ




**ಅದೊಂದು ದಿನ ಎರಡನೆಯ ಬೆಂಚಿನಲ್ಲಿ ಕುಳಿತಿದ್ದ ರುಕ್ಮಿಣಿಯ ಕೊರಳ ಸರ ನನಗೆ ಆಪ್ಯಾಯಮಾನವಾಗಿ ಕಂಡಿತು. ಚೆಡ್ಡಿ ಹಾಕಿಕೊಂಡು ಹೋಗುತ್ತಿದ್ದ ವಯಸ್ಸಿಗೆ ಅದೇಕೆ ಮುತ್ತಿನ ಸರದ ಮೇಲೆ ದೃಷ್ಟಿ ಬಿತ್ತೊ! ನಾನು ಅವಳು ಕುಳಿತಿದ್ದ ಬೆಂಚಿನ ಹಿಂದೆಯೇ ಕುಳಿತಿದ್ದೆ. ಅಂದು ಅರಣ್ಯಪರ್ವದ ನಳ ಚರಿತ್ರೆ ಪಾಠ ಮಾಡಲು ಹೆಡ್ಮಾಸ್ಟರ್ ವೆಂಕಟಾಚಾರ್ಯರು ಬಂದಿಲ್ಲದಿದ್ದುದರಿಂದ ಹರಟೆ ಹೊಡೆಯುತ್ತ ಕುಳಿತಿದ್ದೆವು. ಮಾತಿಗೆ ಮಾತು ಬಂದು ಹಿಂದೆ ತಿರುಗಿದ ರುಕ್ಮಿಣಿ ಎರಡು ಕೈಯಲ್ಲೂ ಮುತ್ತಿನ ಸರವನ್ನು ಮುಂದೆ ಎಳೆದು ಆಟವಾಡತೊಡಗಿದ್ದು ನೋಡಿ, ''ಏನ್ ರುಕ್ಮಿಣಿ ಸರ ಹೊಸದಾ ?'' – ಎಂದೆ.**

**ವೈ. ಎನ್. ಗುಂಡೂರಾವ್**

ಶ್ರೀಕೃಷ್ಣನು ರುಕ್ಮಿಣಿಗೆ ತಂದಿತ್ತ ಮುತ್ತಿನ ಸರದ ಕಥೆ ನಿಮಗೆ ಗೊತ್ತಿರಬಹುದು. ನವರತ್ನಗಳನ್ನು ಪೋಣಿಸಿ ಮಾಡಿದ ಮುತ್ತಿನ ಸರವು ಲೋಕದಲ್ಲಿದ್ದ ಪ್ರತಿ ಹೂವಿನ ಸುವಾಸನೆಯನ್ನೂ ಹೊಂದಿದ್ದು ಅದೊಂದು ವಿಶಿಷ್ಟ ರೀತಿಯ ಸುವಾಸನೆಯನ್ನು ಗಾವುದ ದೂರಕ್ಕೆ ಬೀರುವ ಮುತ್ತಿನ ಸರವಾಗಿತ್ತು. ಕೃಷ್ಣನಿಗೆ ಈ ಸರ ದೊರೆತಾಗ ತನ್ನ ಅಷ್ಟಮಹಿಷಿಯರಲ್ಲಿ ಯಾರಿಗೆ ಕೊಡುವುದೆಂದು ಯೋಚಿಸುತ್ತಿದ್ದಾಗ ಅಲ್ಲೇ ಇದ್ದ ರುಕ್ಮಿಣಿಯು ಬಂದು, ತನಗೆ ಬೇಕೆಂದು ತೆಗೆದುಕೊಂಡು ಕುತ್ತಿಗೆಗೆ ಹಾಕಿಕೊಂಡೇ ಬಿಟ್ಟಳು. ಇದನ್ನು ನೋಡಿದ ಇತರ ಸಪ್ತಮಹಿಷಿಯರಿಗೆ ಕೋಪ ಬಾರದಿರುತ್ತದೆಯೇ! ಬೇರೆಯವರು ಹಾಗಿರಲಿ, ಸತ್ಯಭಾಮೆಗೆ ಎಲ್ಲಿಲ್ಲದ ಕೋಪ ಬಂತು. ಕೃಷ್ಣನಿಗೆ ಭೂತ ಬಿಡಿಸತೊಡಗಿದಳು. ''ನೀವು ಯಾವಾಗಲೂ ಹೀಗೆ, ಹಿಂದೆ ರುಕ್ಮಿಣಿಯು ಉಪವಾಸ ವ್ರತ ಕೈಗೊಂಡು ದಾನ ಧರ್ಮಗಳನ್ನು ಮಾಡಿದಾಗ, ನಾರದರು ತಂದೊಪ್ಪಿಸಿದ ಪಾರಿಜಾತ ಪುಷ್ಪವನ್ನು ಅವಳ ಮುಡಿಗೇ ಮುಡಿಸಿದಿರಿ, ಈಗಲೂ ಹಾಗೇ ಮಾಡಿದಿರಿ. ನಿಮಗೆ ಬೇರೆ ರಾಣಿಯರೇ ಕಣ್ಣಿಗೆ ಕಾಣುವುದಿಲ್ಲವೇ ? ಈ ಸೌಭಾಗ್ಯಕ್ಕೆ ಅಷ್ಟಮಹಿಷಿಯರು ಬೇರೆ ಕೇಡು'', ಎಂದು ಯದ್ವಾತದ್ವಾ ಛೇಡಿಸತೊಡಗಿದಳು.

ಅದಕ್ಕೆ ಕೃಷ್ಣನು ಅಷ್ಟೇ ಶಾಂತ ಮುಖಮುದ್ರೆಯ ನಸುನಗೆಯಿಂದ, ''ಬಿಡು ಸತ್ಯಭಾಮ, ಅವಳಿಗೆ ಸಿಕ್ಕಿದ್ದು ಒಂದು ಪಾರಿಜಾತ ಪುಷ್ಪವಷ್ಟೆ. ಆದರೆ ನಿನಗೆ ಪಾರಿಜಾತ ಪುಷ್ಪದ ಮರವನ್ನೇ ಸ್ವರ್ಗದಿಂದ ತಂದುಕೊಡಲಿಲ್ಲವೇ ? ಈಗಲೂ ಅಷ್ಟೆ. ನಿನಗೆ ಇದಕ್ಕಿಂತ ಉತ್ಕೃಷ್ಟವಾದ ಮುತ್ತಿನ ಸರವನ್ನು ತಂದುಕೊಡುತ್ತೇನೆ'', ಎಂದು ಆಶ್ವಾಸನೆ ನೀಡಿದಾಗಲೇ ಸತ್ಯಭಾಮೆಯು ಸುಮ್ಮನಾದುದು. ಹೀಗೆ ಹೇಳಿ ಹೆಂಡತಿಯರನ್ನು ಸಂತೈಸುವುದೇನು ಕೃಷ್ಣನಿಗೆ ಹೊಸದೇ ? ಹಾಗಿಲ್ಲದಿದ್ದರೆ ಕೃಷ್ಣ ಅಷ್ಟಮಹಿಷಿಯರ ಜೊತೆ ಹದಿನಾರು ಸಾವಿರ ಹೃದಯ ತೆತ್ತವರನ್ನು ಸಂಭಾಳಿಸಲಾಗುತ್ತಿತ್ತೆ ?

ಹೇಗೆ ಸಂಭಾಳಿಸುತ್ತಿದ್ದ ಎನ್ನುವುದಕ್ಕೆ ಪ್ರಭುಶಂಕರರು ಕೊಡುತ್ತಿದ್ದ ಕೀಟಲೆ ವಿವರಣೆ ಕೊಟ್ಟರೆ ಇಲ್ಲಿ ಅಪ್ರಸ್ತುತವೆನ್ನಿಸದು.

ವಿ. ಸೀ.ಯವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಸಂದರ್ಭ. ಪ್ರಭುಶಂಕರರು ಅವರ ವಿದ್ಯಾರ್ಥಿ. ವಿ. ಸೀ.ಯವರು 'ಭರತೇಶ ವೈಭವ' ಪಾಠ ಮಾಡುತ್ತಾ, ಭರತೇಶ ಚಕ್ರವರ್ತಿಯು ತೊಂಬತ್ತಾರು ಸಾವಿರ ಸ್ತ್ರೀಯರನ್ನು ಮದುವೆಯಾಗಿದ್ದ ಎಂದು ಹೇಳುವಾಗ ಉದ್ವೇಗಕ್ಕೆ ಒಳಗಾಗಿ ಬಹಳ ಕೋಪಗೊಂಡು, ಕೋಪಕ್ಕೊಳಗಾದ ದೇಹ ನಡುಗಲು ಪ್ರಾರಂಭಿಸುತ್ತಿತ್ತಂತೆ. ವಿದ್ಯಾರ್ಥಿಗಳಿಗೆ ನಗು. ತೊಂಬತ್ತಾರು ಸಾವಿರ ಹೆಂಡಿರ ಗಂಡನೇ ನಡುಗಲಿಲ್ಲವೆಂದರೆ ನಮ್ಮ ಮೇಷ್ಟರೇಕೆ ಹೀಗೆ ನಡುಗುತ್ತಾರೆ, ಎಂದು.

ನಂತರ ವಿ. ಸೀ.ಯವರ ಕೋಪ ಕೃಷ್ಣನ ಕಡೆ ತಿರುಗುತ್ತಿತ್ತಂತೆ. ಈ ಕೃಷ್ಣ ಹದಿನಾರು ಸಾವಿರ ಹೆಂಡಿರನ್ನು ಕಟ್ಟಿಕೊಳ್ಳದಿದ್ರೆ ಆ ಭರತೇಶ ಏಕೆ ತೊಂಬತ್ತಾರು ಸಾವಿರ ಹೆಂಡಿರನ್ನು ಕಟ್ಕೊಳ್ತಿದ್ದ. ಕೃಷ್ಣನಿಗೇ ಹದಿನಾರು ಸಾವಿರ ಇರಬೇಕಾದ್ರೆ ನಮ್ಮದೇನು ಕಡಿಮೆ ಎಂದು ಆರು ಪಟ್ಟು ಹೆಚ್ಚು ಮಾಡಿದ್ದಾರೆ ಈ ಜೈನರು. ''ಭರತೇಶನ ಈ ಸ್ಥಿತಿಗೆ ಕೃಷ್ಣನೇ ಕಾರಣ ಅಲ್ಲವೇನ್ರೀ, ಈ ಕೃಷ್ಣನಿಗೆ ಚಾವಟಿ ತಗೊಂಡು ಹೊಡೀಬೇಕು ಅಲ್ವೇನ್ರೀ ?'' – ಎಂದು ಕೋಪದಿಂದ ಹಲ್ಲು ಕಡಿದು, ಕೈ ಮೇಲೆತ್ತಿ, ಮೇಜು ಗುದ್ದಿ, ಥರಥರ ನಡುಗುತ್ತಿದ್ದ ವಿ. ಸೀ.ಯವರನ್ನು ಕಂಡ ಪ್ರಭುಶಂಕರರು, ''ಹದಿನಾರು ಸಾವಿರ ಸ್ತ್ರೀಯರನ್ನು ಕಟ್ಕೊಂಡು ಏಗುತ್ತಿದ್ದ ಕೃಷ್ಣನೇ ಹೆದರದಿದ್ದಾಗ, ನಮ್ಮ ಮೇಷ್ಟರ ಚಾವಟಿ ಏಟಿಗೆ ಹೆದರಿಬಿಡುತ್ತಿದ್ದನಾ'', ಎಂದು ಕಿಸಕ್ಕನೆ ಹೇಳಿದಾಗ, ಇಡೀ ತರಗತಿಯೇ ಗೊಳ್ಳೆಂದು ನಗುತ್ತಿತ್ತಂತೆ.

ಬಿಡಿ, ವಿಷಯಾಂತರವಾಗಿಹೋಯಿತು. ಕೃಷ್ಣ ಮುತ್ತಿನ ಸರವನ್ನು ಯಾರಿಗಾದರೂ ಕೊಟ್ಕೊಳ್ಳಲಿ, ಅಷ್ಟಮಹಿಷಿಯರ ಜೊತೆ ಹದಿನಾರು ಸಾವಿರ ಹೆಂಡರಿಗೆ ಏನಾದರೂ

ಜವಾಬು ಕೊಟ್ಕೊಳ್ಳಲಿ, ಅದರಿಂದ ನಮಗೇನಾಗ ಬೇಕಿದೆ. ಆದರೆ – ನಾನೇಕೆ ರುಕ್ಮಿಣಿಯ ಕೊರಳ ಸರಕ್ಕೆ ಕೈಹಾಕಿದೆನೋ, ಕೈಹಾಕಬೇಕೆಂಬ ಆಸೆಯಾದರೂ ಅದು ಹೇಗೆ ಉದ್ಭವಿಸಿತೋ? ಇದೇನು ಕೃಷ್ಣಪರಮಾತ್ಮ ಸೃಜಿಸಿದ ನವರತ್ನ ಖಚಿತ, ಎಲ್ಲ ಹೂವಿನ ವಾಸನೆಯನ್ನೂ ತುಂಬಿಕೊಂಡ ಮುತ್ತಿನ ಸರವೇನಾಗಿರಲಿಲ್ಲ, ಛೇ! ಎಂಥ ಫಜೀತಿ ಕೆಲ್ಸ ಮಾಡಿ ಸಿಕ್ಕಿ ಹಾಕಿಕೊಂಡುಬಿಟ್ಟೆ ಎನಿಸಿತು.

ನಾನಾಗ ಪ್ರೈಮರಿ ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದ ಕಾಲ. ನಮ್ಮ ತರಗತಿಯಲ್ಲಿ ಒಂಬತ್ತು ಹುಡುಗರು, ಆರು ಜನ ಹುಡುಗಿಯರಿದ್ದರು. ಆಗೆಲ್ಲ ಹೋಬಳಿಯ ಕೇಂದ್ರದಲ್ಲಿ ಮಾತ್ರ ಶಾಲೆಗಳಿರುತ್ತಿದ್ದುದರಿಂದ ನಮ್ಮೂರಿನ, ಅಂದರೆ ಯರಗಂಬಳ್ಳಿಯ ಸುತ್ತಮುತ್ತಲ ಐದು ಹಳ್ಳಿಗಳಿಂದ ಹುಡುಗರು ಶಾಲೆ ಕಲಿಯಲು ಬರುತ್ತಿದ್ದರು. ಹೀಗೆ ನಮ್ಮ ತರಗತಿಗೆ ಬರುತ್ತಿದ್ದವರಲ್ಲಿ ನಾನು, ಮಾರಶೆಟ್ಟಿ ಎಂಬ ಕುಂಬಾರ ಹೈದ ಮತ್ತು ಕಪ್ಪಣ್ಣನನ್ನು ಬಿಟ್ಟರೆ ಉಳಿದವರೆಲ್ಲರೂ ಪರಸ್ಥಳದಿಂದ ಬರುತ್ತಿದ್ದವರೇ.

ಹೀಗೆ ಬರುತ್ತಿದ್ದವರಲ್ಲಿ ಆರು ಮಂದಿ ಹೆಣ್ಮಕ್ಕಳೂ ಪರಸ್ಥಳದಿಂದಲೇ ಬರುತ್ತಿದ್ದುದರಿಂದ ಆರೋಗ್ಯಶಾಸ್ತ್ರ ಪಾಠ ಮಾಡುತ್ತಿದ್ದ ಇರಸವಾಡಿ ನಂಜಯ್ಯನವರ ಬಾಯಲ್ಲಿ ''ನಿಮ್ಗೋಕ್ತಿಗಿಷ್ಟು, ಇಷ್ಟು ದೊಡ್ಡ ಊರಲ್ಲಿ ಸ್ಕೂಲಿಟ್ಕೊಂಡು ಒಂದು ಹೆಣ್ಣಿಗಿಗೂ ಶಾಲೆ ಕಲಿಯುವ ಆಸೆ ಇಲ್ವಾ'', ಎಂದು ಛೇಡಿಸುತ್ತಿದ್ದುದನ್ನು ನಾವ್ಯಾರೂ ಸೀರಿಯಸ್ಸಾಗಿ ತೆಗೆದುಕೊಳ್ಳದಿದ್ದರೂ, ಒಂದೊಂದು ಸಾರಿ ಹೌದಲ್ಲ, ನಮ್ಮೂರಿನಲ್ಲಿ ಅದರಲ್ಲೂ 'ರತ್ನಮ್ಮ, ಶ್ವೇತಮ್ಮ, ನಾಗಮಣಿ, ರಾಜಿ, ಸುಜಾತ ಇವರೆಲ್ಲರೂ ಕೆಳತರಗತಿಯಲ್ಲಿ ಓದುತ್ತಿದ್ದವರು ನಮ್ಮೂರ ಹುಡುಗಿಯರೇ ಅಲ್ವಾ ಸಾ' ಎಂದು ಕೇಳಬೇಕೆನಿಸಿದರೂ ಅದೇಕೋ ಯಾವಾಗಲೂ ಕೆಂಪು ಸೂರ್ಯನಂತೆ ಗರಗರ ತಿರುಗುತ್ತಿದ್ದ ಅವರ ಕಣ್ಣುಗುಡ್ಡೆಗಳನ್ನು ನೋಡಿದರೆ ಭಯವಾಗಿಬಿಡುತ್ತಿತ್ತು.

ನಮ್ಮೂರ ಶಾಲೆ ಇದ್ದುದು ಒಂದು ರೀತಿಯ ಸೆಂಟ್ರಲ್ ಪ್ಲೇಸ್ ಎಂದೇ ಹೇಳಬಹುದು. ಒಂದು ಕಡೆಯಿಂದ ಲಿಂಗಾಯತರ ಬೀದಿಯಿಂದ ಒಂದು ರಸ್ತೆ ಬಂದು ಕೂಡಿದರೆ ಮತ್ತೊಂದು ಕಡೆ ಹಾರುವರ ಬೀದಿಯಿಂದ ರಸ್ತೆ ಬಂದು ಕೂಡುತ್ತಿತ್ತು. ಮತ್ತೊಂದು ರಸ್ತೆ ನಾಯಕರ ಬೀದಿಯಿಂದ ಬಂದು ಕೂಡಿದರೆ ಇನ್ನೊಂದು ದಾರಿ ಊರ ಹೊರಕ್ಕೆ ಸಾಗಿ ಹೋಗುವ ಪ್ರಮುಖ ರಸ್ತೆಯಾಗಿದ್ದು ಚೌಕದ ಒಂದು ಮೂಲೆಯಲ್ಲಿ ಶಾಲೆಯ ಕಟ್ಟಡವಿತ್ತು. ರಸ್ತೆ ಮಧ್ಯೆ ಬೃಹದಾಕಾರದ ಅರಳಿ ಮರ. ಮರದ ಸೈಜಿಗೆ ತಕ್ಕಂತೆ ಅದರ ಸುತ್ತಲೂ ಕಟ್ಟಿದ ದೊಡ್ಡ ಕಟ್ಟೆ. ಮರದ ಬೊಡ್ಡೆಯ ಅಗಲವೇ ಸುಮಾರು ಹದಿನೈದು-ಇಪ್ಪತ್ತು ಅಡಿಗೂ ಮೀರಿದ ವ್ಯಾಸ. ಸುತ್ತ ಐದು ಅಡಿಯಷ್ಟು ಜಾಗದಲ್ಲಿ ಮಣ್ಣು ತುಂಬಿ ಅದರ ಸುತ್ತ ಚಚ್ಚೌಕಾಕಾರದ ಮೂರಡಿ ಅಗಲದ ಕಲ್ಲು ಹಾಸಿನ ಸುಮಾರು ನಾಲ್ಕಡಿ ಎತ್ತರದ ಕಟ್ಟೆ. ಶಾಲೆಯಿದ್ದ ದಿನ ಕಟ್ಟೆಯ ಮೇಲೆ ಬಂದು ಕುಳಿತು ಗಲಾಟೆಮಾಡಿ ಯಾರೂ ಶಾಲೆಯ ಹುಡುಗರ ಓದಿಗೆ ತೊಂದರೆ ಕೊಡಬಾರದು ಎಂದು ಪಟೇಲ ಮಹಂತ ದೇವರ ತಾಕೀತು. ರಜಾ ದಿನಗಳಲ್ಲಂತು ಬಿದಿರಬುಟ್ಟಿಯ ಮುಚ್ಚಳದಲ್ಲಿಟ್ಟು ಮಾರುವ ಕಡಲೇಕಾಯಿ ನಂಜಮ್ಮ, ಪೇಪರಿನಷ್ಟು ತೆಳ್ಳಗೆ ತ್ರಿಭುಜಾಕೃತಿಯಲ್ಲಿ ಹಲಸಿನ ಹಣ್ಣನ್ನು ಕತ್ತರಿಸಿ ಮಾರುವ ರಂಗಮ್ಮ, ಇವರಿಬ್ಬರನ್ನು ಬಿಟ್ಟರೆ ಮತ್ತಾರಿಗೂ ಆ ಕಟ್ಟೆಯ ಮೇಲೆ ವ್ಯಾಪಾರಕ್ಕೆ ಅವಕಾಶವಿರುತ್ತಿರಲಿಲ್ಲ. ಹೀಗೆಂದಾಕ್ಷಣ ಅಲ್ಲಿ ಮಾರುವವರ ಪೈಪೋಟಿಯಿತ್ತೆಂದಲ್ಲ. ಬೇರಾರೂ ಈ ವೃತ್ತಿಗೆ ಬರಲಾರದಷ್ಟು ಬಿಜ್ಜಿಯಾಗಿರುತ್ತಿದ್ದರು. ರಜಾ ದಿನ ಕಟ್ಟೆಯ ಮೇಲೆ ಇವರಿಬ್ಬರೂ ಬಂದು ಕುಳಿತಿದ್ದೇ ತಡ ಹುಡುಗರ ದಂಡು ಅದೆಲ್ಲಿಂದಲೋ ಬಂದು ಹಲಸಿನ ಹಣ್ಣು, ಕಡ್ಲೆಕಾಯಿ ಕೊಂಡು ಹುಲಿಗಟ್ಟ, ದಚ್ಚಿ-ಬಾರ, ಗೂಳಿ-ಟಗರಿನ ಆಟದ ಚೌಕವನ್ನು ಸೀಮೆಸುಣ್ಣ ಅಥವಾ ಇದ್ದಲ ತುಂಡಿನಿಂದ ಬರೆದು ಆಟ ಪ್ರಾರಂಭಿಸಿಬಿಡುತ್ತಿದ್ದರು.

ಹಾರುವರ ಬೀದಿಯನ್ನು ಹಾಯ್ದು ಹೊರಟರೆ ಅದು ಸೀದಾ ಊರ ಹೊರಗಿನ ಆಂಜನೇಯನ ಗುಡಿ, ರಂಗಪ್ಪನ ಕಟ್ಟೆಗೆ ತಲುಪುತ್ತಿತ್ತು. ಆ ದಾರಿಯಲ್ಲಿ ಬಿಳಿಗಿರಿ ರಂಗಪ್ಪನವರ 'ಬಿಳಿಗಿರಿ ಸ್ಟೋರ್ಸ್' ಎಂದು ರಟ್ಟಿನ ಮೇಲೆ ಬರೆದು ತಗಲು ಹಾಕಿದ್ದ ಬೋರ್ಡ್ ಇದ್ದ ಚಿಕ್ಕ ಅಂಗಡಿ. ಅಂಗಡಿ ಚಿಕ್ಕದಾಗಿದ್ದರೂ ಪದಾರ್ಥಗಳು ಯಾವುದಿದೆ, ಯಾವುದಿಲ್ಲ ಎನ್ನುವಂತಿಲ್ಲ, ಒಂದು ರೀತಿಯ ಅಕ್ಷಯ ಪಾತ್ರೆಯ ರೀತಿ. ಪದಾರ್ಥಗಳನ್ನು ವ್ಯವಸ್ಥಿತವಾಗಿ ಜೋಡಿಸಿರಲಿಲ್ಲದಿದ್ದರೂ ಕೇಳಿದ ತಕ್ಷಣ ಕ್ಷಣಾರ್ಧದಲ್ಲಿ ತೆಗೆದುಕೊಡುವ ಚಾಕಚಕ್ಯತೆ ಬಿಳಿಗಿರಿ ರಂಗಪ್ಪನವರಲ್ಲಿ ಇತ್ತು. ಆದುದರಿಂದಲೇ ಊರಿನವರು ಯಾವ ಪದಾರ್ಥ ಬೇಕಿದ್ದರೂ ಮರುಳಸಿದ್ದಪ್ಪನ ಅಂಗಡಿ, ಶೆಟ್ಟರ ಬಸಣ್ಣ ಅಂಗಡಿ, ಹನುಮಂತು ಅಂಗಡಿ ಬಿಟ್ಟು ಎಲ್ಲರೂ ರಂಗಪ್ಪನ ಅಂಗಡಿಗೇ ಬಂದು ಮುಕುರುತ್ತಿದ್ದರು. ಈ ಅಂಗಡಿಗೇ ಜನ ಬರಲು ಮತ್ತೊಂದು ಕಾರಣವೆಂದರೆ ಅದು ಊರಿನ ಮಧ್ಯದಲ್ಲಿತ್ತು, ಒಂದು ಸಾರಿ ಹಾದು ಹೋದರೆ ಏನಾದರೊಂದು ರೋಚಕ ಸುದ್ದಿ ಸಿಗುತ್ತದೆಂದೇ ಹಲವಾರು ಮಂದಿ ಈ ರಸ್ತೆಯಲ್ಲೊಮ್ಮೆ ಠಳಾಯಿಸುತ್ತಿದ್ದರು. ಹಾರುವರ ಬೀದಿಯ ಮೂಲಕ ಬೇರೆ ಊರಿಗೆ ಹಾದು ಹೋಗಬೇಕಿದ್ದುದರಿಂದ ಇದೊಂದು ರೀತಿಯ ಸಮಾಚಾರ ವಿನಿಮಯ ಕೇಂದ್ರಬಿಂದುವೂ ಆಗಿತ್ತು. ಊರಿಗೆ ಬಂದವರು ರಂಗಪ್ಪನ ಅಂಗಡಿಯ ಮುಂದೆ ನಿಂತು ಕರೀದಾರ ಬೀಡಿ ಹಚ್ಚಿಸಿ ಒಂದು ದಂ ಎಳೆದು, ''ರುದ್ರಾಪುರದ ಪುಟ್ಟಂಜಪ್ಪನ ಮಗನ್ನ ಪೊಲೀಸ್ರು ಎಳ್ಕೊಂಡೋಯ್ತಿದ್ರಲ್ಲ ಒಡೆಯಾ'' ಎಂದೋ, ''ಚಾವಡಿಪುರದ ಹನುಮನಾಯ್ಕರ ಮಗ ಈರೇಶ, ಮೊಳಗೆರೆ ಸಿಂಗಣ್ಣನ ಮಗಳು ಸುಜಾತ ಅನ್ನೋ ಹುಡ್ಗಿ ಜೊತೆ ಹೋಯ್ತಿದ್ನಲ್ಲ ಸ್ವಾಮೇರಾ'', ಎಂದೋ ಹೊಸ ಸುದ್ದಿಯನ್ನು ಯರಗಂಬಳ್ಳಿಯ ಅರಳಿಕಟ್ಟೆಯ ಚೌಕದಲ್ಲಿ ಬಿಟ್ಟು ಹೋದದ್ದೇ ತಡ, ಐದು ನಿಮಿಷದಲ್ಲಿ ಇಡೀ ಹಳ್ಳಿಗೆ ಸುದ್ದಿ ಹರಡಿಕೊಂಡುಬಿಡುತ್ತಿತ್ತು.

ಇಂಥ ಊರ ಮಧ್ಯದಲ್ಲಿದ್ದ ಸ್ಕೂಲಿನಲ್ಲಿ ಓದುತ್ತಿದ್ದ ನಮ್ಮಗಳ ಕಿವಿಗೆ ದಿನವೂ ಇಂತಹ ರೋಚಕ ಸುದ್ದಿಗಳು ಬಿದ್ದಾಗ ಅವನ್ನು ಸಂಜೆ ಮನೆಗೆ ತಂದು ಸುದ್ದಿ ಮುಟ್ಟಿಸಿ ಚುರುಕಾಗಿ ಘನಕಾರ್ಯ ಮಾಡಿದವರಂತೆ ಬೀಗುತ್ತ ಶಹಬಾಶ್‌ಗಿರಿ ಕೊಡುತ್ತಾರೆಂದು ಕಾದಿದ್ದವರಿಗೆ, 'ನಿಮಗ್ಯಾಕ್ರೋ ಊರಸುದ್ದಿ, ಒದ್ಕೊಳ್ಳಿ ಹೋಗ್ರೋ, ಬಂದ್‌ಬಿಟ್ರು ಏನೋ ಹೇಳೋಕ್ಕೆ' ಎಂದು ಗದರಿಸಿ ಕಳುಹಿಸುತ್ತಿದ್ದರು. ನಾವು ಹೇಳಿದ ಸುದ್ದಿಗೆ ನಮ್ಮ ಮುಂದೆ ಯಾವುದೇ ಬೆಲೆ ಇಲ್ಲದಿದ್ದರೂ, ನಾವು ಅತ್ತ ಆಟಕ್ಕೆ ಹೊರಟಾಗ 'ಹೌದಂತೆ, ಹಾಗಂತ್ಲಾ... ಅವಳ್ಗೇನ್ಬಂತು...' ಎಂದು ಗಂಟೆಗಟ್ಟಲೆ ಅದೇ ಸುದ್ದಿಯನ್ನು ದೀರ್ಘವಾಗಿ ಹಿತ್ತಿಲ ಬೇಲಿಯ ಬಳಿ ನಿಂತು ಚರ್ಚಿಸುತ್ತಿದ್ದರು.

ಹೀಗೆ ತರಗತಿಯಲ್ಲಿ ಕುಳಿತಿದ್ದರೂ ರಸ್ತೆಯಲ್ಲಿ ನಡೆಯುವ ಹಲವಾರು ವಿಷಯಗಳು ಕಿವಿಗೆ, ಕಣ್ಣಿಗೆ ಗೋಚರಿಸುತ್ತಿದ್ದವು.

ನಮ್ಮ ತರಗತಿಯಲ್ಲಿದ್ದುದು ನಾಲ್ಕೇ ಬೆಂಚುಗಳು. ಮುಂದಿನ ಎರಡು ಬೆಂಚುಗಳಲ್ಲಿ ಆರು ಹುಡುಗಿಯರು ಕುಳಿತರೆ ಇನ್ನುಳಿದ ಎರಡು ಬೆಂಚುಗಳಲ್ಲಿ ಎಷ್ಟೇ ಹುಡುಗರು ಬಂದರೂ ಅದೇ ಎರಡು ಬೆಂಚುಗಳಲ್ಲಿ ಹೊಂದಿಕೊಂಡು ಕುಳಿತುಕೊಳ್ಳಬೇಕಿತ್ತು. ಐದು ಜನ ಹುಡುಗರು ಒಂದು ಬೆಂಚಿನಲ್ಲಿ ಕುಳಿತರೆ ಇಕ್ಕಟ್ಟಾಗುತ್ತಿದ್ದುದರಿಂದ ಒಂದೊಂದು ದಿನ ಒಂದೊಂದು ಬೆಂಚಿನಲ್ಲಿ ಐದು ಜನ ಕೂಡುವ ವ್ಯವಸ್ಥೆಯನ್ನು ಗಣಿತದ ಮೇಷ್ಟ್ರು ಸುಬ್ಬರಾಯರು ಜಾರಿಗೆ ತಂದಿದ್ದರು.

ಅದೊಂದು ದಿನ ಎರಡನೆಯ ಬೆಂಚಿನಲ್ಲಿ ಕುಳಿತಿದ್ದ ರುಕ್ಮಿಣಿಯ ಕೊರಳ ಸರ ನನಗೆ ಆಪ್ಯಾಯಮಾನವಾಗಿ ಕಂಡಿತು. ಚೆಡ್ಡಿ ಹಾಕಿಕೊಂಡು ಹೋಗುತ್ತಿದ್ದ ವಯಸ್ಸಿಗೆ ಅದೇಕೆ ಮುತ್ತಿನ ಸರದ ಮೇಲೆ ದೃಷ್ಟಿ ಬಿತ್ತೋ! ನಾನು ಅವಳು ಕುಳಿತಿದ್ದ ಬೆಂಚಿನ ಹಿಂದೆಯೇ ಕುಳಿತಿದ್ದೆ. ಅಂದು ಅರಣ್ಯಪರ್ವದ ನಳ ಚರಿತ್ರೆ ಪಾಠ ಮಾಡಲು ಹೆಡ್ಮಾಸ್ಟರ್ ವೆಂಕಟಾಚಾರ್ಯರು ಬಂದಿಲ್ಲದಿದ್ದುದರಿಂದ ಹರಟೆ ಹೊಡೆಯುತ್ತ ಕುಳಿತಿದ್ದೆವು. ಮಾತಿಗೆ ಮಾತು ಬಂದು ಹಿಂದೆ ತಿರುಗಿದ ರುಕ್ಮಿಣಿ ಎರಡು ಕೈಯಲ್ಲೂ ಮುತ್ತಿನ ಸರವನ್ನು ಮುಂದೆ ಎಳೆದು ಆಟವಾಡತೊಡಗಿದ್ದು ನೋಡಿ, ''ಏನ್ ರುಕ್ಮಿಣಿ ಸರ ಹೊಸದಾ ?'' – ಎಂದೆ.

''ಹೌದು ಕಣೋ'' ಎಂದವಳೆ ''ನೋಡು'' ಎಂದಳು.

ನೋಡು ಎಂದದ್ದೇ ತಡ ಅವಳ ಸರವನ್ನು ಕೈಲಿ ಹಿಡಿದು ದುಂಡಗಿನ ಬಿಳಿಯ ಮುತ್ತುಗಳ, ಅದರ ಹೊಳಪು, ವಿನ್ಯಾಸವನ್ನು ಕಂಡು, ''ಎಷ್ಟು ಚೆನ್ನಾಗಿದೆ! ಎಲ್ಲಿಂದ ತರಿಸಿದ್ಯೇ, ಮೈಸೂರಿಂದ್ಲೊ, ಬೆಂಗ್ಳೂರಿಂದ್ಲೊ...'', ಎಂದೆ. ಅಷ್ಟಕ್ಕೆ ಅದೇಕೆ ಸಿಟ್ಟು ಮಾಡಿಕೊಂಡಳೋ ತಿಳಿಯದು. ''ಏನ್ ಸರಕ್ಕೆ ಕೈ ಹಾಕ್ತೀಯಾ, ಲೆಕ್ಕದ ಮೇಷ್ಟ್ರು ಬರಲಿ ಹೇಳ್ತೀನಿ'' ಎಂದು ಎದ್ದುನಿಂತು ಚಂಡಿಯ ಅವತಾರ ತಾಳಿದ್ದು ಕಂಡು ನಡುಗಿಹೋದೆ. ಸುಬ್ಬರಾಯರೆಂದರೆ ಕೇಳಬೇಕೆ, ಉಗ್ರನರಸಿಂಹನ ಅಪರಾವತಾರ! ಲೆಕ್ಕದ ಮೇಷ್ಟ್ರು ಸುಬ್ಬರಾಯರು ಅಂಗೈ ಹಿಂದಿನ ಗಿಣ್ಣಿನ ಮೇಲೆ ತುಂಡು ಕೋಲಿನಿಂದ ಬಡಿಯುತ್ತಿದ್ದುದನ್ನು ನೆನೆದೇ ಕೈ ಬೆರಳುಗಳು ಮರಗಟ್ಟಿಹೋದವು. ಅಷ್ಟರಲ್ಲಿ ಪುಟ್ಟತಾಯಮ್ಮ, ವಿಶಾಲು, ಎಲ್ಲರೂ ರುಕ್ಮಿಣಿಯನ್ನು, ''ಬೇಡ ಬಿಡೆ'', ಎಂದು ಸಮಾಧಾನ ಪಡಿಸತೊಡಗಿದರೂ, ''ನೀವೇಕ್ರೆ ಅವನ ಕಡೆ ವಹಿಸ್ಕೋತೀರಾ, ಸರ ಎಳೆದಿದ್ದು ನೀವು ನೋಡಿದ್ರಿ ಅಲ್ವಾ'', ಎಂದೇ ಆರೋಪಿಸತೊಡಗಿದಳು.

''ನೀನೇ ನೋಡು ಅಂದೆಯಲ್ಲ'', ಎಂದೆ ತೊದಲುತ್ತ.

''ನೋಡು ಅಂದೆ. ಆದ್ರೆ ಕೈ ಹಾಕು ಅಂತ ನಿಂಗ್ಯಾರೋ ಹೇಳಿದ್ದು'', ಎಂದಾಗ ಎದೆಬಡಿತ ಇನ್ನೂ ಢವಢವ

ಎಂದು ಜೋರಾಗಿ ಹೊಡೆದುಕೊಳ್ಳತೊಡಗಿತು. ನನ್ನ ಮೈನಡುಕದಲ್ಲಿ ಮೊದಲ ಪೀರಿಯಡ್ ಕಳೆದದ್ದು ಗೊತ್ತಾಗಲೇ ಇಲ್ಲ.

ಎರಡನೆಯ ಪಿರಿಯಡ್ ಪಾಠ ಮಾಡಲು ಸುಬ್ಬರಾಯರು ಬಂದರು. ಬರುತ್ತಿದ್ದಂತೆ, ''ಸಾರ್'' ಎಂದು ಕಣ್ಣೀರು ಹರಿಸುತ್ತಾ ''ಗುಂಡಣ್ಣ ನನ್ನ ಮುತ್ತಿನ ಸರ ಎಳ್ದಾ ಸಾರ್'', ಎಂದಳು ರುಕ್ಮಿಣಿ ರಾಗವಾಗಿ.

ಹುಡುಗರು ಹುಡುಗಿಯ ಕತ್ತಿನ ಸರಕ್ಕೆ ಕೈ ಹಾಕುವುದೆಂದರೇನು ? ಹುಡುಗಿಯರೊಡನೆ ಕೊಂಚ ಸದರವಾಗಿ ನಡೆದುಕೊಳ್ಳುವುದೇ ಅಪರಾಧವೆನ್ನುವರು, ಅಂಥಾದ್ದರಲ್ಲಿ..

ಕೆಂಗಣ್ಣು ಬಿಟ್ಟ ಸುಬ್ಬರಾಯರು, ''ಏಳೋ ಮೇಲೆ'' ಎಂದರು. ಎದ್ದೆ. 'ಹತ್ತು ಬೆಂಚ ಮೇಲೆ' ಎಂದರು. ಬೆಂಚ್ ಮೇಲೂ ನಿಂತಿದ್ದಾಯ್ತು. ''ಯಾಕೆ ಅವಳ ಸರ ಎಳ್ದೆ ?''

''ಇಲ್ಲ ಸಾರ್, ನಾನ್ ಎಳೀಲಿಲ್ಲ, ಅವಳೇ ನೋಡು ಬೇಕಾದ್ರೆ ಅಂದ್ಲು'', ಎಂದೆ.

''ನೋಡು ಅಂತಾ ನಾನು ಹೇಳಲೇ ಇಲ್ಲ ಸಾರ್. ಅವನೇ ಚೆನ್ನಾಗಿದೆ ಸರ, ತೋರ್ಸು ನೋಡೋಣ ಎಂದು ಕೈಹಾಕಿ ಎಳೆದೇಬಿಟ್ಟ'', ಎಂದಳು.

ಇತರ ಹುಡುಗಿಯರು ರುಕ್ಮಿಣಿಯ ಸುಳ್ಳಿನ ಕಂತೆಗೆ ಬರೇ ಆಶ್ಚರ್ಯಸೂಚಕರಾದರು. ರುಕ್ಮಿಣಿ, ಹೆಡ್ಮಾಸ್ಟರ್ ವೆಂಕಟಾಚಾರ್ಯರ ಮಗಳಾದುದರಿಂದ ಅವಳನ್ನೆದುರಿಸುವ ಧೈರ್ಯ ಇತರ ಹುಡುಗಿಯರಿಗಿಲ್ಲದೆ ಮುಖ ಮುಖ ನೋಡತೊಡಗಿದರು.

ಅವಳೇ ತೋರಿಸಿದ ಮುತ್ತಿನ ಸರವನ್ನು ಮುಟ್ಟಿದ್ದಕ್ಕೆ ಈಗ ಶಿಕ್ಷೆ ಕಾದಿತ್ತು. ''ಬಾರೋ ಇಲ್ಲಿ'' ಎಂದರು ಟೀಚರ್.

ಬೆಂಚಿನ ಮೇಲೆ ನಿಂತಿದ್ದವನು ಇಳಿದು ಹೋದೆ.

''ರುಕ್ಮಿಣಿ, ಬಾಮ್ಮ ಇಲ್ಲಿ'', ಎಂದು ಮರ್ಯಾದೆಯಿಂದ ಕರೆದರು. ಎಷ್ಟೆಂದರೂ ಹೆಡ್ಮಾಸ್ಟರ ಮಗಳಲ್ಲವೇ !

ಸುಳ್ಳು ಬೊಗಳಿದವಳಿಗೆ ಮರ್ಯಾದೆ ಬೇರೆ ಕೇಡು ಎಂದುಕೊಂಡೆ ಮನಸ್ಸಿನಲ್ಲಿ. ನನ್ನೆದುರು ಬಂದು ನಿಂತ ರುಕ್ಮಿಣಿಗೆ, ''ಹೊಡಿ ಅವನ ಕೆನ್ನೆಗೊಂದು'' ಎಂದು ಶಿಕ್ಷೆಯ ತೀರ್ಪನ್ನು ಪ್ರಕಟಿಸಿಯೇಬಿಟ್ಟರು.

ಈಗ ರುಕ್ಮಿಣಿಗಿದ್ದುದು ನನ್ನ ಕೆನ್ನೆಗೆ ಹೊಡೆಯುವುದಷ್ಟೆ. ಮುಖ ಮುಖ ನೋಡತೊಡಗಿದಳು. ಹೊಡಿ ಎಂದು ರುಕ್ಮಿಣಿಗೆ ಕೆಲ ಹುಡುಗರು ಹುರಿದುಂಬಿಸತೊಡಗಿದರು. ಆದರೆ ರುಕ್ಮಿಣಿ ಮುಖ ಮುಖ ನೋಡುತ್ತಿದ್ದವಳು ಸರಸರನೆ ತನ್ನ ಬೆಂಚಿಗೆ ಹೋಗಿ ಕುಳಿತುಬಿಟ್ಟಳು.

ಕೆಲವರಿಗೆ ಇದರಿಂದ ಭಾರಿ ಹೊಟ್ಟೆಯುರಿಯಾಯಿತು. ಏಕೆಂದರೆ ತರಗತಿಯಲ್ಲಿ ನಾನು ಯಾವಾಗಲೂ ಮುಂದಿದ್ದವನು. ಕೆಲವು ಹುಡುಗರ ಮೂಗು ಹಿಡಿದು ಕೆನ್ನೆಗೆ ಹೊಡೆದಿದ್ದರಿಂದ, ಇಂದು ನಾನು ಕೆನ್ನೆಗೆ ಹೊಡೆಸಿಕೊಳ್ಳುವ ದೃಶ್ಯವನ್ನು ನೋಡಲು ಕೌತುಕದಿಂದ ಕಾದಿದ್ದವರಿಗೆ ಭಾರಿ ನಿರಾಸೆಯಾಗಿತ್ತು. ಏಕೆ ಹೊಡೆಯಲಿಲ್ಲವೆಂದು ಎಲ್ಲ ಹುಡುಗರೂ ಯೋಚಿಸತೊಡಗಿದರು.

ರುಕ್ಮಿಣಿ ಏಕೆ ತನ್ನ ಜಾಗಕ್ಕೆ ಹೋಗಿ ಕುಳಿತು ಬಿಟ್ಟಳೆಂದರೆ, ಕಿಟಕಿಯಿಂದ ಆಕೆಯ ಕಣ್ಣಿಗೆ ಅವರ ತಂದೆ – ಹೆಡ್ಮಾಸ್ಟರ್ ವೆಂಕಟಾಚಾರ್ಯರು ಬರುತ್ತಿದ್ದುದು ಕಾಣಿಸಿತು. ಅಷ್ಟರಲ್ಲಿ ಹೆಡ್ಮಾಸ್ತರು ಬಂದೇಬಿಟ್ಟರು. ನಾನು ಹೆಡ್ಮಾಸ್ಟರ ಪ್ರಿಯ ಶಿಷ್ಯನೆಂಬುದು ಅವಳಿಗೂ ತಿಳಿದಿತ್ತು.

''ಏನ್ ನಡೀತಾ ಇದೆ ಇಲ್ಲಿ...'' ಎಂದೆನ್ನುತ್ತಲೇ ಒಳಗೆ ಕಾಲಿಟ್ಟರು. ಹೆಡ್ಮಾಸ್ಟರನ್ನು ನೋಡಿದ ಸುಬ್ಬರಾಯರು ''ಏನಿಲ್ಲ, ಏನಿಲ್ಲ ಸಾರ್, ಲೆಕ್ಕ ಮಾಡಿಸ್ತಾ ಇದ್ದೆ'' ಎಂದರು ತೊದಲುತ್ತ.

''ಸರಿ ಸರಿ'' ಎಂದು ಪಕ್ಕದ ಕೊಠಡಿಗೆ ತೆರಳಿದರು.

ತರಗತಿಗೇ ಮೊದಲನೆಯವನಾಗಿದ್ದರೂ ಕ್ಷುಲ್ಲಕ ಕಾರಣಕ್ಕಾಗಿ, ಹುಡುಗಿಯಿಂದ ಕೆನ್ನೆಗೆ ಹೊಡೆಸಿಕೊಳ್ಳುವುದನ್ನು ತಪ್ಪಿಸಿಕೊಂಡಿದ್ದೆ, ತಪ್ಪು ಮಾಡಿಲ್ಲದಿದ್ದುದರಿಂದ ಬಚಾವ್ ಆಗಿದ್ದೆ. ಇದು ನಡೆದದ್ದು ಪ್ರೈಮರಿ ನಾಲ್ಕನೆಯ ತರಗತಿಯಲ್ಲಿ. ಮುಂದೆ ಮೂರು ವರುಷ ಜೊತೆ ಜೊತೆಯಲ್ಲಿಯೇ ಓದಿದೆವು. ಮಿಡ್ಲ್ ಸ್ಕೂಲ್ ಮುಗಿಸಿ ಹೈಸ್ಕೂಲಿಗೆ ಸೇರಿದವರಲ್ಲಿ ನಾನು, ಶೆಟ್ಟಿ ಹಾಗೂ ಚಲುವೆಗೌಡ ಮೂವರು ಮಾತ್ರ. ಮಿಕ್ಕವರು ಯಾವ್ಯಾವ ಊರಿಗೆ ಹೋಗಿ ಹೈಸ್ಕೂಲು ಸೇರಿದರೋ, ಅಂತೂ ಚದುರಿಹೋದೆವು.

ನಂತರ ಕಾಲೇಜಿಗೆ ಸೇರಿದಾಗಲೂ ಈ ಘಟನೆ ಆಗಾಗ್ಗೆ ನೆನಪಿಗೆ ಬಂದಾಗ ಒಂದು ರೀತಿಯ ವಿಚಿತ್ರ ಭಾವನೆ ಮನಸ್ಸನ್ನು ಆಕ್ರಮಿಸುತ್ತಿತ್ತು. ನಾನು ಬೇರೆ ಹುಡುಗರ ಕೆನ್ನೆಗೆ ಹೊಡೆದಿರಬಹುದು. ಆದರೆ ಹುಡುಗಿಯ ಕೈಯಿಂದ ಹೊಡೆಸಿಕೊಳ್ಳುವುದೆಂದರೆ ! ಒಂದು ವೇಳೆ ರುಕ್ಮಿಣಿ ಅಂದು ಕೆನ್ನೆಗೆ ಹೊಡೆದಿದ್ದರೆ ಅದು ನನ್ನ ಜೀವಿತಾವಧಿಯಲ್ಲಿ ದೊಡ್ಡ ಗುನ್ನೆಯಾಗಿ ಉಳಿದು ಬಿಡುತ್ತಿತ್ತೇನೋ !

ಇದೆಲ್ಲ ಈಗ ಏಕೆ ಜ್ಞಾಪಕಕ್ಕೆ ಬರುತ್ತಿದೆ ಎಂದರೆ, ಟಿ.ವಿ.ಯ ಕನ್ನಡದ ಯಾವುದೇ ಚಾನಲ್ ತಿರುಗಿಸಿದರೂ ಮನೆ ಮುರುಕ ಧಾರಾವಾಹಿಗಳೇ ! ಯಾವುದನ್ನು ನೋಡಿದರೂ ಮನೆಯೊಳಗಿದ್ದುಕೊಂಡೆ ವಿಜೃಂಭಿಸುವ ಖಳನಾಯಕ, ನಾಯಿಕೆಯರು, ಕೌಟುಂಬಿಕ ಕಲಹ, ಇಲ್ಲವೇ ಲೇಡಿ ಬಾಸ್‌ಗಳ ಹಗೆತನದ ಹೂಂಕಾರ ! ಕಾರ್ಪೊರೇಟ್ ಜಗಳ, ಓ ಅಂದ್ರೆ ಠೋ ಅನ್ನೋಕೆ ಬಾರದವರು 'ಸಿ.ಇ.ಒ.'; 'ಛೇರ್ಮನ್' ಗಾದಿಯ ಮೇಲೆ ಕುಳಿತು ಊದುವ ರಣ ದುಂದುಭಿ ! ಇಲ್ಲವೇ ಆಸ್ತಿಗಾಗಿ ಕಾದಾಟ-ಕೊಲೆ. ಯಾವುದನ್ನೇ ತೆಗೆದುಕೊಂಡರೂ ಹೆಂಗಸರು ಹೆಂಗಸರ ಕೆನ್ನೆಗೆ ಹೊಡೆಯುವುದು ಹಾಗಿರಲಿ, ಗಂಡಸಿನ ಕೆನ್ನೆಗೆ ಬಾರಿಸುವ, ಗಂಡಸು ಹೆಣ್ಣಿನ ಕೆನ್ನೆಗೆ ಬಾರಿಸುವ ದೃಶ್ಯಗಳು ಸರ್ವೇಸಾಮಾನ್ಯವಾಗಿ ಬಿಟ್ಟಿವೆ. ಈ ದೃಶ್ಯಗಳನ್ನು ನೋಡುತ್ತಿದ್ದಾಗ ನಾನು ಓದಿದ ಮಿಡ್ಲ್ ಸ್ಕೂಲ್ ದಿನದ ಕೆಲ ಘಟನೆಗಳು ಮನಸ್ಸಿನ ಮೇಲೆ ಹಾಗೇ ಹಾದುಹೋಗುತ್ತವೆ.

ವೈ. ಎಸ್. ಗುಂಡೂರಾವ್
'ಸೌರಭ', ನಂ. ೧೨೫೧, ೧೫ನೇ ಕ್ರಾಸ್, ೨ನೇ ಹಂತ, ಗಿರಿನಗರ
ಬೆಂಗಳೂರು - ೫೬೦ ೦೮೫

## ಬಯಲ ಭಾವ

ಬಿರು ಬಿಸಿಲು ಬೆಂಗಾಡು
ಬರಿ ಮರಳು
ಜೀವ ಸೆಲೆ ಬತ್ತಿ
ಹುಲ್ಲು ಗರಿಗಟ್ಟಿ
ಬಾಯಾರಿ ಬೆಂಡಾಗಿ
ಮೈಮನಗಳ ತಾಪಕೆ
ತಂಪರಸಿ ನಡೆದೆ ಬಿಡದೆ

ಜಂಗುಳಿಯ ಗೋಜಿಲ್ಲ
ಅರಿವೆಯಾ ಹಂಗಿಲ್ಲ
ಬಯಲ ಆಲಯದಿ
ಮರೆತು ಲೋಕಾಂತ
ಓತು ಏಕಾಂತ

ಬಂಧ ನಿರ್ಬಂಧ
ಸ್ವಚ್ಛಂದ ಛಂದ
ಕಟ್ಟು ಕಟ್ಟಳೆಯ
ಕಟಕಟೆ ಇಲ್ಲಿಲ್ಲ
ಬಿಟ್ಟೆನೆಂದರೂ
ಬಿಡದು ಲಜ್ಜೆ

ನನ್ನದೆ ಭಾವ
ನನ್ನದೆ ಭಂಗಿ
ಸುಳಿದು ಸುಳಿಗಾಳಿ
ಸೆಳೆದಂಬರ
ಕಲಾವಿದರ ಕಣ್ಣ ಶೃಂಗಾರ
(ಕಲೆಗಾರ)

ಮರಳು ಹೆಜ್ಜೆ
ಮಸಗುವ ಛಾಯೆ
ಸಾರಿವೆ ಜೀವನ
ನಶ್ವರ ನಶ್ವರ

ಭಾವ ಬೆತ್ತಲೆ
(ಸತ್ಯ ದರ್ಶನ) ಸಾಕ್ಷಾತ್ಕಾರ
ಜೀವನ ಸಾರ

ಹಸಿರ ಹಾರೈಸಿ ಕಾದಿರುವೆ
ವರುಣನೇ ಬಾರೆಯಾ
ಆಸರಕೆ ಆಸರಾಗಿ
ಪ್ರೀತಿಧಾರೆ ಹನಿಸೆಯಾ

ಡಾ|| ಬಿದರಿ ಚಂದ್ರಕಲಾ
ಗಂಗೋತ್ರಿ, ವಿದ್ಯಾನಗರ, ಸೇಡಮ್
ಗುಲಬರ್ಗಾ ಜಿಲ್ಲೆ - ೫೮೫ ೨೨೨



# ಮೂರ್ಛೆರೋಗವನ್ನು

## ಸಂಪೂರ್ಣವಾಗಿ ಗುಣಪಡಿಸಬಹುದು !




ವೈದ್ಯಕೀಯ ಭಾಷೆಯಲ್ಲಿ ಎಪಿಲೆಪ್ಸಿ ಎಂದು ಗುರುತಿಸಲ್ಪಡುವ ರೋಗಕ್ಕೆ ಅಪಸ್ಮಾರ ಅಥವಾ ಮೂರ್ಛೆರೋಗ ಅನ್ನುತ್ತಾರೆ. ಇದು ವಿಶೇಷವಾಗಿ ವೈದ್ಯರಿಂದಲೇ ಚಿಕಿತ್ಸೆ ಪಡೆಯಬೇಕಾದ ಮತ್ತು ಗುಣಪಡಿಸಬಹುದಾದ ಒಂದು ರೋಗ. ಭಾರತದಲ್ಲಿ ಬಹಳಷ್ಟು ಜನ ಮೂರ್ಛೆರೋಗದಿಂದ ಬಳಲುತ್ತಿದ್ದಾರೆ. ಇಂಥವರನ್ನು ಸಮಾಜ ನೋಡುವ ದೃಷ್ಟಿ ಕೂಡಾ ಸರಿಯಾಗಿಲ್ಲ ಅನ್ನೋದು ದುರದೃಷ್ಟಕರ. ಮೂರ್ಛೆ ರೋಗಕ್ಕೆ ತುತ್ತಾಗಿರುವ ಮಕ್ಕಳು ಸಾಮಾನ್ಯ ಶಾಲೆಗಳಲ್ಲಿ ವ್ಯಾಸಂಗ ಮಾಡುವುದು ಕಷ್ಟದ ಮಾತೇ ಸರಿ. ಹಾಗೊಂದು ವೇಳೆ ಇದ್ದರೂ, ನಗರ ಪ್ರದೇಶಗಳಲ್ಲಿ ಅವರ ಚಟುವಟಿಕೆಗಳಿಗೆ ಸಾಕಷ್ಟು ನಿರ್ಬಂಧ ಇದ್ದೇ ಇರುತ್ತದೆ. ಇನ್ನು ಗ್ರಾಮೀಣ ಪ್ರದೇಶಕ್ಕೆ ಹೋದರೆ, ಇಂತಹ ಮಕ್ಕಳನ್ನು ಶಾಲೆಗೆ ಕಳುಹಿಸುವುದೇ ಇಲ್ಲ !

ಮಹಿಳೆಯರ ವಿಚಾರಕ್ಕೆ ಬಂದರೆ, ಮೂರ್ಛೆರೋಗ ಬಾಧಿಸಿದವರು, ಎದುರಿಸುವ ಸಮಸ್ಯೆಗಳೇ ಘೋರವಾದುದು. ಯುವತಿಗೆ ಮೂರ್ಛೆರೋಗ ಇದೆ ಎಂದು ಗೊತ್ತಾದರೆ, ಆಕೆಯ ಬಾಳಿನಲ್ಲಿ ವೈವಾಹಿಕ ಬದುಕು, ಕನಸು ಅಷ್ಟೇ. ಹೀಗಾಗಿ ಇಂತಹ ಯುವತಿಯರು ಗೌಪ್ಯವಾಗಿ ಔಷಧ ಸೇವನೆ ಮಾಡುತ್ತಿರುತ್ತಾರೆ. ಬಹಿರಂಗವಾಗಿ ಈ ರೋಗದ ಬಗ್ಗೆ ಯಾರು ಕೂಡಾ ಮಾತನಾಡುವುದಿಲ್ಲ. ವಿವಾಹದ ಬಳಿಕ ಇಂತಹ ವಿಚಾರಗಳು ಬಹಿರಂಗಗೊಂಡರೆ, ಅಂತಹ ಮಹಿಳೆ ವೈವಾಹಿಕ ವಿಚ್ಛೇದನಕ್ಕೆ ಗುರಿಯಾಗುತ್ತಾಳೆ ಅಥವಾ ನಿರ್ಲಕ್ಷ್ಯಕ್ಕೆ ಒಳಗಾಗಿ ಬದುಕು ಸಾಗಿಸಬೇಕಾಗುತ್ತದೆ. ಉದ್ಯೋಗ ಕ್ಷೇತ್ರದಲ್ಲಿ ಗಮನಿಸಿದರೆ, ಮೂರ್ಛೆರೋಗ ಇದೆ ಎಂದು ಗೊತ್ತಾದರೆ ಕೆಲಸ ಕಳೆದುಕೊಳ್ಳುವ ಭೀತಿ ಸದಾ ಇದ್ದೇ ಇದೆ. ಮಾನಸಿಕ ಶೋಷಣೆ, ಒತ್ತಡಗಳೇ ಅನೇಕ ಸಂದರ್ಭಗಳಲ್ಲಿ ಕೆಲವೊಂದು ರೀತಿಯ ಮೂರ್ಛೆರೋಗಕ್ಕೆ ಅಥವಾ ಹುಟ್ಟಿನ ವೇಳೆ ಮೆದುಳಿಗೆ ಉಂಟಾದ ಹೊಡೆತಗಳು ಅಪಸ್ಮಾರಕ್ಕೆ ಕಾರಣವಾಗಿರುತ್ತದೆ. ಗ್ರಹಿಸುವ ಶಕ್ತಿಗೆ ಹೊಡೆತ ಬಿದ್ದರೆ ಶೈಕ್ಷಣಿಕವಾಗಿ ಹಿಂದುಳಿಯುವುದು ಖಚಿತ. ಆದರೆ, ಮೂರ್ಛೆರೋಗ ಬಾಧಿತ ವ್ಯಕ್ತಿಗಳಿಗೆ ಮತ್ತು ಅವರ ಕುಟುಂಬದವರಿಗೆ ಒಂದು ಶುಭ ಸಮಾಚಾರ ಇದೆ..!

ಜಾಂಟಿ ರೋಡ್ಸ್. ಹೆಸರು ಕೇಳಿದರೆ ಸಾಕು ಕ್ರಿಕೆಟ್ ಪ್ರೇಮಿಗಳ ಕಿವಿ ನೆಟ್ಟಗಾಗತ್ತೆ. ದಕ್ಷಿಣ ಆಫ್ರಿಕಾದ ಗ್ರೇಟ್ ಕ್ರಿಕೆಟಿಗ. ಜಾಂಟಿ ರೋಡ್ಸ್ ಕೂಡಾ ಅಪಸ್ಮಾರದಿಂದ ಬಳಲುತ್ತಿದ್ದರು. ಆದರೆ, ಅದರ ಹಿಡಿತದಿಂದ ಹೊರಬಂದು ಅಂತಾರಾಷ್ಟ್ರೀಯ ಕ್ರಿಕೆಟ್‌ನಲ್ಲಿ ಅದ್ಭುತ ಸಾಧನೆ ಮಾಡಿದ್ದಾರೆ. ಉತ್ತಮ ಚಿಕಿತ್ಸೆ, ಕುಟುಂಬದ ಆರೈಕೆ, ಸಮಾಜದ ಬೆಂಬಲ ಇವೆಲ್ಲದರ ಜೊತೆಗೆ ಸ್ವತಃ ಜಾಂಟಿ ರೋಡ್ಸ್‌ಗೆ ಇದ್ದ ಅದ್ಭುತ ಇಚ್ಛಾಶಕ್ತಿ ಸಾಧನೆಯ ಉತ್ತುಂಗಕ್ಕೆ ಏರುವಂತೆ ಮಾಡಿತ್ತು. ಓದುಗರನ್ನು ಉತ್ತೇಜಿಸುವ ಸಲುವಾಗಿ ಈ ಪ್ರಕರಣವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಮೂರ್ಛೆರೋಗ ಇದೆ ಅಂದ ಕೂಡಲೇ ಬದುಕಿನ ಬಗ್ಗೆ ವೈರಾಗ್ಯ ಬೇಡ ಎಂದು ಹೇಳುವುದಕ್ಕೂ ಈ ಪ್ರಕರಣ ಉದಾಹರಣೆ. ವೈದ್ಯಕೀಯ ರಂಗದ ಅತ್ಯಂತ ಮಹತ್ವದ ಬೆಳವಣಿಗೆ ಎಂದರೆ, ವಿವಿಧ ರೀತಿಯ ಮೂರ್ಛೆ ರೋಗವನ್ನೂ ಶಸ್ತ್ರಚಿಕಿತ್ಸೆ ಮೂಲಕ ಕೂಡ ನಿವಾರಿಸ ಬಹುದು ಎಂದು ಸಂಶೋಧಿಸಿದ್ದು. ಇದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಮೂಡಬಹುದು. ಉತ್ತರ ಕಂಡುಕೊಳ್ಳಬೇಕಾದರೆ, ಅಪಸ್ಮಾರ ಎಂದರೆ ಏನು ಎಂಬುದನ್ನು ಸ್ವಲ್ಪವಾದರೂ ಮೊದಲು ತಿಳಿದುಕೊಳ್ಳೋಣ...

ಮೂರ್ಛೆರೋಗ ಎಂದರೇನು? ಮೆದುಳಿನಲ್ಲಿರುವ ಕೆಲವು ಜೀವಕೋಶಗಳು ಗುಂಪಾಗಿ ಉಂಟುಮಾಡುವಂತಹ ಕ್ರಿಯೆಯೇ ಅಪಸ್ಮಾರ ಅಥವಾ ಮೂರ್ಛೆರೋಗ. ಈ ಗುಂಪು ಜೀವಕೋಶಗಳು ಉಂಟುಮಾಡುವ ವಿದ್ಯುತ್ ಸಂಚಲನ ಮೆದುಳಿನಾದ್ಯಂತ ವ್ಯಾಪಿಸಿ ಶರೀರದ ನಿಯಂತ್ರಣ ತಪ್ಪಿಸುತ್ತವೆ. ಪ್ರಜ್ಞೆ ಕಳೆದುಕೊಳ್ಳುವಂತೆ ಮಾಡುತ್ತವೆ. ತಮಗೆ ಅರಿವಿಲ್ಲದಂತೆ ಅಂಗಾಂಗಗಳನ್ನು ಬಡಿದುಕೊಳ್ಳುವಂತೆ ಮಾಡುತ್ತವೆ. ಈ ಪ್ರಕ್ರಿಯೆಯನ್ನು ಸಾಮಾನ್ಯವಾಗಿ ಅಪಸ್ಮಾರ, ಫಿಟ್ಸ್ ಅಥವಾ ಮೂರ್ಛೆ ರೋಗ ಎಂದು ಗುರುತಿಸುತ್ತಾರೆ.

ಮೂರ್ಛೆರೋಗ ಬಂದಾಗ ವ್ಯಕ್ತಿ ಕೆಳಕ್ಕೆ ಬಿದ್ದು ಗಾಯಗೊಳ್ಳುವ ಪ್ರಮೇಯ ಹೆಚ್ಚು. ಸ್ಪರ್ಶ ಜ್ಞಾನವಿಲ್ಲದೇ ಬಿದ್ದುಕೊಂಡು ನೇರವಾಗಿ ದಿಟ್ಟಿಸುತ್ತಿರುತ್ತಾರೆ. ಹಲ್ಲು ಕಡಿಯುವುದು ಮಾಡುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿ ತುಟಿಗಳಿಗೆ ಮತ್ತು ದವಡೆ ಗಾಯಗೊಳ್ಳುವ ಸಾಧ್ಯತೆ ಹೆಚ್ಚು. ಕೈ ಚಲನೆ ಕೂಡಾ ಅನಿಯಂತ್ರಿತವಾಗಿರುತ್ತದೆ. ಈ ಮೂರ್ಛೆರೋಗವನ್ನು ಪಾರ್ಷಿಯಲ್ ಕಾಂಪ್ಲೆಕ್ಸ್ ಸೀಷಿಯರ್ಸ್ ಎನ್ನುತ್ತಾರೆ. ಮೂರ್ಛೆರೋಗದಲ್ಲಿ ಇದೇ ರೀತಿ ಅನೇಕ ಪ್ರಭೇಧಗಳಿವೆ. ಇಂತಹ ಸಂದರ್ಭಗಳಲ್ಲಿ ರೋಗ ಗುರುತಿಸುವಿಕೆ ಪ್ರಮಾಣ ಕಡಿಮೆ ಇದೆ. ಹೀಗಾಗಿ, ಮೂರ್ಛೆರೋಗಕ್ಕೆ ಕಾರಣವಾದ ಜೀವಕೋಶಗಳ ಗುಂಪನ್ನು ರೋಗಿಯ ಮೆದುಳಿನಲ್ಲಿ ಗುರುತಿಸುವುದು, ಅವುಗಳ ಚಟುವಟಿಕೆ ಬಗ್ಗೆ ನಿಗಾವಹಿಸುವುದು ಒಬ್ಬ ನರರೋಗ ತಜ್ಞನ ಕೆಲಸ. ಹೀಗೆ ಜೀವಕೋಶಗಳ ಗುಂಪನ್ನು ಗುರುತಿಸಿದ ಬಳಿಕ ಅದನ್ನು ಅಲ್ಲಿಂದ ಬೇರ್ಪಡಿಸುವ ಮೂಲಕ ರೋಗ ಗುಣಪಡಿಸುವ ಕೆಲಸ ಮಾಡಲಾಗುತ್ತದೆ. ಹಾಗಾದ್ರೆ, ಮೂರ್ಛೆರೋಗ ಉಂಟುಮಾಡುವ ಜೀವಕೋಶಗಳನ್ನು ಗುರುತಿಸುವುದು ಹೇಗೆ? ಅವುಗಳನ್ನು ಮೆದುಳಿನಿಂದ ಬೇರ್ಪಡಿಸುವುದು ಹೇಗೆ?

**ನಿವಾರಣೆ ಹೇಗೆ?**

1. ಮೂರ್ಛೆರೋಗ ಪೀಡಿತನೊಬ್ಬ ಚಿಕಿತ್ಸೆಗಾಗಿ ದಾಖಲಾದಾಗ, ರೋಗದ ಕ್ಲಿನಿಕಲ್ – ತಪಾಸಣೆ ನಡೆಸಲಾಗುತ್ತದೆ. ಇದನ್ನು ಪರಿಣಿತ ನರರೋಗ ತಜ್ಞ ಅಥವಾ ಮೂರ್ಛೆರೋಗ ತಜ್ಞ ನಡೆಸುತ್ತಾರೆ. ಔಷಧ ಸೇವನೆ ಮೂಲಕ ರೋಗ ನಿಯಂತ್ರಣ ಅಸಾಧ್ಯ ಎಂಬ ಅಂಶ ಕಂಡುಬಂದಲ್ಲಿ ತಜ್ಞರು ರೋಗಿಯನ್ನು ಎಂಆರ್ಐ ಸ್ಕ್ಯಾನ್‌ಗೆ ಒಳಪಡಿಸಲಾಗುತ್ತದೆ.
2. ಎರಡನೇ ಹಂತದಲ್ಲಿ, ಸ್ಕ್ಯಾನ್ ಎಂಬ ಪ್ರಕ್ರಿಯೆ ನಡೆಯುತ್ತದೆ. ಇಲ್ಲಿ ರೋಗಿಯ ಮೆದುಳಿನಲ್ಲಿ ಮೂರ್ಛೆರೋಗ ಉಂಟುಮಾಡುತ್ತಿರುವ ಜೀವಕೋಶಗಳ ಗುಂಪಿನ ಹುಡುಕಾಟ ನಡೆಯತ್ತದೆ. ಎಂಆರ್ಐ ಸ್ಕ್ಯಾನಿಂಗ್‌ನ ವಿಶೇಷ ತಂತ್ರಜ್ಞಾನದ ಮೂಲಕ ಜೀವಕೋಶಗಳ ಅಸಹಜತೆ ಬಹುಬೇಗ ಬಹಿರಂಗಗೊಳ್ಳುತ್ತದೆ. ಇಂತಹ ಕೆಲವು ಅಸಹಜತೆಗಳನ್ನು ಹೆಸರಿಸಬಹುದು. ಮೇಸಿಯಲ್ ಟೆಂಪೋರಲ್ ಸ್ಕ್ಲೀರೋಸಿಸ್, ಫೋಕಲ್ ಕೋರ್ಟಿಕಲ್ ಡೈಸ್‌ಪ್ಲಾಸಿ, ಫೋಕಲ್, ಪೋರೆನ್‌ಸೆಫಾಲಿಕ್ ಸಿಸ್ಟ್, ಡಿಎನ್ಇಟಿ, ಗಾಂಗ್ಲಿಯೋಗ್ಲಿಯೋಮ, ಫೋಕಲ್ ಟ್ಯೂಮರ್ಸ್ ಆಫ್ ದ ಬ್ರೈನ್, ಹೆಮಿಮೆಗ್ಲಾನ್ಸ್‌ಫಾಲಿ (ಮೆದುಳಿನ ಒಂದು ಭಾಗ ಅಸಹಜವಾಗಿ ಬೆಳೆಯುವುದು), ಸ್ಮಾಲ್ ಸ್ಕೇರ್ಸ್ ಇನ್ ದ ಬ್ರೈನ್, ಪಾರಸಿಟಿಕ್ ಸಿಸ್ಟ್ ಮೊದಲಾದವುಗಳು.. ರೋಗಿಯಲ್ಲಿ ಇಂತಹ ಪರಿಸ್ಥಿತಿ ಕಂಡು ಬಂದಲ್ಲಿ, ಅಪಸ್ಮಾರವನ್ನು ಶಸ್ತ್ರಚಿಕಿತ್ಸೆ ಮೂಲಕ ನಿವಾರಿಸಬಹುದು!
3. ಎಲೆಕ್ಟ್ರಿಕಲ್ – ನರರೋಗ ತಜ್ಞರು, ಸ್ಕ್ಯಾನ್ ನಂತರ ತೆಗೆದುಕೊಳ್ಳುವ ಹೆಜ್ಜೆ ಇದಾಗಿದೆ. ವಿಡಿಯೋ ಎಲೆಕ್ಟ್ರೋಎನ್‌ಸೆಫಲೋಗ್ರಾಂ ಅಥವಾ ವಿಡಿಯೋ ಎಲೆಕ್ಟ್ರೋ ಎನ್‌ಸೆಫಲೋಗ್ರಾಫ್ (ವಿಇಇಜಿ) ಪರೀಕ್ಷೆ ಇದಕ್ಕೆ ಸಹಕಾರಿ. ಇದರಲ್ಲಿ, ಮೂರ್ಛೆರೋಗಿಯನ್ನು ಇಇಜಿಗೆ ಒಳಪಡಿಸಲಾಗುತ್ತದೆ. ಇದು

ರೋಗಿಯ ಮೆದುಳಿನ ವಿದ್ಯುತ್ ಸಂಚಲನವನ್ನು ದಾಖಲಿಸಿ, ಯಂತ್ರಕ್ಕೆ ಜೋಡಿಸಿರುವ ವಿಡಿಯೋ ರೋಗಿಗೆ ಆಘಾತ ಯಾವಾಗ ಉಂಟಾಗಿತ್ತು ಎಂಬ ವಿವರ ನೀಡುತ್ತದೆ. ಈ ಪರೀಕ್ಷೆಗೆ 3–4 ದಿನಗಳ ಕಾಲಾವಕಾಶ ಬೇಕು. ಅದು ಕೂಡಾ, ರೋಗಿ ಅಪಸ್ಮಾರಕ್ಕೆ ತುತ್ತಾಗಿರುವ ಸಂದರ್ಭದಲ್ಲೇ ಈ ಗ್ಲೈಯೋಸಿಸ್ ಒಳಪಡಬೇಕು. ಈ ಪರೀಕ್ಷೆ ಯಾಕೆ ಅಗತ್ಯ? ಈ ಪರೀಕ್ಷೆ ಮೂಲಕ, ಎಂಆರ್ಐ ಸ್ಕ್ಯಾನಿಂಗ್‌ನಲ್ಲಿ ಶಂಕಾಸ್ಪದ ಎನಿಸಿದ್ದನ್ನೂ, ನರರೋಗ ತಜ್ಞ ಖಚಿತವಾಗಿ ಗುರುತಿಸಬಹುದಾಗಿದೆ.

ಕ್ಲಿನಿಕಲ್ – ಸ್ಕ್ಯಾನ್ – ಇಲೆಕ್ಟ್ರಿಕಲ್ ಕನ್‌ಕೋರ್ಡೆನ್ಸ್ ಈ ಮೂರು ಹಂತಗಳು ಪ್ರಮುಖವಾಗಿವೆ. ಸರಳವಾಗಿ ಹೇಳಬೇಕು ಅಂದರೆ, ಆಘಾತಗಳನ್ನು ಉಂಟು ಮಾಡುವ ಮೆದುಳಿನ ಸಣ್ಣ ಭಾಗವನ್ನು ಗುರುತಿಸುವುದು ಮತ್ತು ಶಸ್ತ್ರಚಿಕಿತ್ಸೆ ಮೂಲಕ ಅದನ್ನು ಬೇರ್ಪಡಿಸಿ ರೋಗಿಯನ್ನು ಗುಣಮುಖನನ್ನಾಗಿಸುವುದು !



**ಈ ಮೂರು ಹಂತಗಳ ನಡುವೆ ಏನಾದ್ರೂ ಲೋಪ ದೋಷ ಕಂಡು ಬಂದಲ್ಲಿ, ಇನ್ನು ಕೆಲವು ಪರೀಕ್ಷೆ ನಡೆಸಬೇಕಾಗುತ್ತದೆ. ಇಡೀ ಪ್ರಕ್ರಿಯೆಯನ್ನು ಅರ್ಥ ಮಾಡಿಕೊಳ್ಳಲು ಕೆಲವೊಂದು ಪರೀಕ್ಷೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ.**

ಅ) ಇಕ್ಟಲ್ ಎಸ್‌ಪಿಇಸಿಟಿ (ಇಕ್ಟಲ್ ಸಿಂಗಲ್ ಫೋಟೋನ್ ಎಮಿಷನ್ ಕಂಪ್ಯೂಟೆಡ್ ಟೋಮೋಗ್ರಫಿ), ಇಂಟರಿಕ್ಟಲ್ ಪಿಇಟಿ ಸ್ಕ್ಯಾನ್ ಆಫ್ ದ ಬ್ರೈನ್: ವಿಇಇಜಿ ಕೊಠಡಿಯಲ್ಲಿರುವ ರೋಗಿ ಆಘಾತಕ್ಕೆ ಒಳಗಾದಾಗ, ಇಕ್ಟಲ್ ಎಸ್‌ಪಿಇಸಿಟಿ ಔಷಧವನ್ನು ಇಂಜೆಕ್ಷನ್ ಮೂಲಕ ನೀಡಲಾಗುತ್ತದೆ. ಈ ಔಷಧ ಅಸಹಜ ಸ್ಥಿತಿಯಲ್ಲಿರುವ ಮೆದುಳಿನ ಭಾಗವನ್ನು ಸೇರುತ್ತದೆ. ಮಾತ್ರವಲ್ಲದೇ ಸ್ಕ್ಯಾನಿಂಗ್‌ನಲ್ಲಿ ಆ ಭಾಗ ವೈಟ್ ಹಾಟ್ ಪ್ರದೇಶದಂತೆ ಭಾಸವಾಗುತ್ತದೆ! ಔಷಧ ಎಲ್ಲ ಭಾಗಕ್ಕೆ ಪಸರಿಸಿದರೂ, ಅಸಹಜತೆ ಕೂಡಿದ ಭಾಗದ ಹೊರತಾದ ಭಾಗ ಸ್ಕ್ಯಾನಿಂಗ್‌ನಲ್ಲಿ ಕಪ್ಪು ಪ್ರದೇಶವಾಗಿ ಕಾಣಿಸಿಕೊಳ್ಳುತ್ತದೆ! ಬಹುತೇಕ ರೋಗಿಗಳಲ್ಲಿ ಈ ಎರಡು ಚಿಕಿತ್ಸೆಗಳೇ ಶಸ್ತ್ರಚಿಕಿತ್ಸೆ ಬೇಕೇ ಬೇಡವೇ ಎಂಬುದನ್ನು ದೃಢೀಕರಿಸುತ್ತದೆ.

ಆ) ಕನ್‌ಕೋರ್‌ಡೆನ್ಸ್ ಸ್ಥಾಪಿಸುವುದಕ್ಕಾಗಿ ಮೆದುಳಿನ ಮೇಲೆ ಸಣ್ಣ ರೆಕಾರ್ಡಿಂಗ್ ಎಲೆಕ್ಟ್ರಾಡ್‌ಗಳನ್ನು ನೇರವಾಗಿ ಸ್ಥಾಪಿಸಬೇಕು. ಈ ಎಲ್ಲ ಪ್ರಕ್ರಿಯೆಗಳನ್ನು ಹಂತಹಂತವಾಗಿ ಪೂರೈಸಿದ ಬಳಿಕ, ನರರೋಗ ತಜ್ಞ ಕೊನೆಗೆ ಅಪಸ್ಮಾರದ ಮೂಲ ಮತ್ತು ಅದನ್ನು ಶಸ್ತ್ರಚಿಕಿತ್ಸೆ ಮೂಲಕ ಪರಿಹರಿಸಬಹುದೇ ಎಂಬುದನ್ನು ನಿರ್ಧರಿಸಿ ಹೇಳುತ್ತಾರೆ. ಇವೆಲ್ಲವೂ ನರರೋಗ ತಜ್ಞನ ವೃತ್ತಿ ನೈಪುಣ್ಯದ ಮಾತುಗಳಾಗಿದ್ದು, ರೋಗಿ ಮತ್ತು ಅವರ ಕುಟುಂಬದವರಿಗೆ ಕಬ್ಬಿಣದ ಕಡಲೆಯಂತೆ ಕಾಣಬಹುದು ! ಕಾರಣ ಇಲ್ಲದಿಲ್ಲ.. ತಲೆಬುರುಡೆ ಮೆದುಳು ಎಂಬ ಸೂಪರ್ ಕಂಪ್ಯೂಟರ್‌ಅನ್ನು ಅಷ್ಟೇ ಜಾಣ್ಮೆಯಿಂದ ಸಂರಕ್ಷಿಸುತ್ತದೆ. ಅದರ ಕಾರ್ಯಗಳು ಕೂಡಾ ಅತ್ಯಂತ ಕ್ಲಿಷ್ಟಕರವಾಗಿದ್ದು, ವಿವರಣೆ ಕೊಂಚ ಕಷ್ಟವೆನಿಸಬಹುದು. ಈಗಾಗಲೇ ಹೇಳಿರುವಂತಹ ಪರೀಕ್ಷೆಗಳು, ಶಸ್ತ್ರಚಿಕಿತ್ಸೆ ಮೂಲಕ ಮೂರ್ಛೆರೋಗ ನಿವಾರಣೆ ಎಲ್ಲವೂ ಒಂದು ರೀತಿಯ ಮ್ಯಾಜಿಕ್‌ನಂತೆ ಭಾಸವಾಗಬಹುದು ! ಈ ಎಲ್ಲ ಕ್ಲಿಷ್ಟಕರ ಹಂತಗಳು ಮುಗಿದ ಬಳಿಕ ರೋಗ ನಿವಾರಣೆ ಪ್ರಯತ್ನಗಳು ಕೆಲವೊಮ್ಮ ಸರಳವಾಗಿರಬಹುದು. ಕೆಲವೊಮ್ಮೆ ಕ್ಲಿಷ್ಟಕರವಾಗಿ ಪರಿಣಮಿಸಬಹುದು. ಈ ಪ್ರಕ್ರಿಯೆಗಳನ್ನು ಗುಣಪಡಿಸಬಹುದಾದ (ಕ್ಯುರೇಟಿವ್) ಮತ್ತು ಉಪಶಮನಗೊಳಿಸುವುದು (ಪಲ್ಲಿಯೇಟಿವ್) ಎಂದು ಹೇಳಬಹುದು.

ಗುಣಪಡಿಸಬಹುದಾದ (ಕ್ಯುರೇಟಿವ್): ವ್ಯಕ್ತಿ ಫಿಟ್ಸ್ ಅಥವಾ ಮೂರ್ಛೆ ರೋಗದಿಂದ ಸಂಪೂರ್ಣ ಗುಣಮುಖನಾಗಿದ್ದು ಮತ್ತೆ ಸಹಜ ಸ್ಥಿತಿಗೆ ಮರಳುವುದು. ಶಸ್ತ್ರಚಿಕಿತ್ಸೆ ಮತ್ತು ಅದನ್ನು ನಡೆಸಬೇಕಾಗಿ ಬಂದ ಪರಿಸ್ಥಿತಿಯನ್ನು ಗುರುತಿಸುವುದು. ಟೆಂಪೋರಲ್ ಲೋಬೆಕ್ಟಮಿ ಮತ್ತು ಅಮಿಗ್ಡಲೋ–ಹಿಪ್ಪೋಕ್ಯಾಮ್ಪೆಕ್ಟಮಿ ಫಾರ್ ಮೇಸಿಯಲ್ ಟೆಂಪೋರಲ್ ಸ್ಕ್ಲೀರೋಸಿಸ್, ರಿಸೆಕ್ಷನ್ ಆಫ್ ಫೋಕಲ್ ಕಾರ್ಟಿಕಲ್ ಡೈಸ್ಪ್ಲಾಸಿಯ, ಹೆಮಿಸ್ಫಿರೋಕ್ಟಮಿ ಫಾರ್ ಪೋರೆನ್ಸಿಫಾಲಿಕ್ ಸಿಸ್ಟ್ ಮತ್ತು ರಾಸ್ಮುಸ್ಸೆನ್ಸ್ ಸಿಂಡ್ರೋಮ್ ಮೊದಲಾದ ವೈದ್ಯಕೀಯ ಪದಗಳ ಬಳಕೆ ಮಾಡುತ್ತಿರುವುದು ಗುಣಪಡಿಸಬಹುದಾದ ರೋಗ ಎಂಬುದನ್ನು ಓದುಗರಿಗೆ ಅರ್ಥೈಸುವ ಪ್ರಯತ್ನ.

ಉಪಶಮನಗೊಳಿಸಬಹುದಾದ (ಪಲ್ಲಿಯೇಟಿವ್) – ಮೆದುಳಿನ ಬಹುಭಾಗದ ಜೀವಕೋಶಗಳು ಅಸಹಜವಾಗಿದ್ದರೆ, ಫಿಟ್ಸ್ ಅಥವಾ ಎಪಿಲೆಪ್ಸಿಯನ್ನು ಗುಣಪಡಿಸುವ ಬದಲು ಉಪಶಮನಗೊಳಿಸಲಾಗುತ್ತದೆ. ಕಾರ್ಪಸ್ ಕಾಲೊಸ್ಟಮಿ ಮತ್ತು ವೇಗಲ್ ನರ್ವ್ ಸ್ಟಿಮುಲೇಷನ್ ಈ ಪ್ರಕ್ರಿಯೆಗಳಿಗೆ ಉದಾಹರಣೆ. ಅತ್ಯಂತ ಸುರಕ್ಷಿತ ನ್ಯೂರೋ ಅನಸ್ತೇಷಿಯ ಮತ್ತು ಹೈಮಾಗ್ನಿಫಿಕೇಶನ್ ಹೊಂದಿರುವ ಮೈಕ್ರೋಸ್ಕೋಪ್ ಮೂಲಕ ನಡೆಸುವ ನ್ಯೂರೋ ಸರ್ಜರಿ ಈ ಪ್ರಕ್ರಿಯೆಗಳನ್ನು ಸರಳಗೊಳಿಸಿದೆ. ಕಡಿಮೆ ಅಡ್ಡಪರಿಣಾಮಗಳು ಅನ್ನೋ ಹೆಗ್ಗಳಿಕೆ ಕೂಡಾ ಪಡೆದುಕೊಂಡಿದೆ. ಇಷ್ಟೆಲ್ಲಾ ಚಿಕಿತ್ಸೆಗೆ ಎಷ್ಟು ವೆಚ್ಚವಾಗಬಹುದು ಎಂಬ ಜನಸಾಮಾನ್ಯರ ಕುತೂಹಲಕ್ಕೆ ಉತ್ತರ ಕೂಡಾ ಸುಲಭ. ಈ ಶಸ್ತ್ರಚಿಕಿತ್ಸೆಗೆ ತಗಲುವ ವೆಚ್ಚ, ಜೀವನಪೂರ್ತಿ ಔಷಧಕ್ಕೆ ವ್ಯಯಿಸುವ ಖರ್ಚಿಗಿಂತ ತುಂಬ ಕಡಿಮೆ. ಸಮಾಜದಲ್ಲಿ ಎಲ್ಲರಂತೆ, ಬದುಕು ಎದುರಿಸುವ ಧೈರ್ಯ, ಛಲ ತುಂಬುವ ಕಾಲ ಇದು. ಈ ಮಾತಿಗೆ ಪುಷ್ಟಿಕೊಡುವುದಕ್ಕಾಗಿ ಎರಡು ನೈಜ ಘಟನೆಗಳನ್ನೇ ಮುಂದಿಡುತ್ತಿದ್ದೇನೆ.

1. ಶ್ರೀ ಧಾರಾ(ಹೆಸರು ಬದಲಿಸಲಾಗಿದೆ), 27 ವರ್ಷ, ತನ್ನ ಹತ್ತನೇ ವಯಸ್ಸಿನಿಂದ ಮೂರ್ಛೆರೋಗದಿಂದ ಬಳಲುತ್ತಿದ್ದರು. ಪ್ರತಿದಿನ ಹತ್ತಕ್ಕೂ ಹೆಚ್ಚು ಆಘಾತಗಳಿಂದ ಅವರು ತತ್ತರಿಸಿ ಹೋಗಿದ್ದರು. ಆಘಾತಕ್ಕೆ ಒಳಗಾದಾಗ ಕೆಳಕ್ಕೆ ಬಿದ್ದು ಗಾಯಗೊಳ್ಳುವುದೂ ಸಹಜವಾಗಿತ್ತು. ಒಮ್ಮೆ ಹೀಗೆ ಆಘಾತವಾದಾಗ ಕೃಷಿ ನೀರಿನ ಕಾಲುವೆಗೆ ಬಿದ್ದು ಬಿಟ್ಟಿದ್ದರು. ಅದೃಷ್ಟವಶಾತ್ ಅವರು ಆಗ ರಕ್ಷಿಸಲ್ಪಟ್ಟಿದ್ದರು. ಈ ಘಟನೆ ಬಳಿಕ ಜೀವನ ದುರ್ಬರವಾಗಿತ್ತು. ಮೂರ್ಛೆರೋಗಕ್ಕೆ ಒಳಗಾದಾಗ ಆಕೆಯ ಆರೈಕೆಗೆ ಜೊತೆಗೆ ಒಬ್ಬ ಸಂಬಂಧಿ ಇರುವುದು ಅನಿವಾರ್ಯವಾಗಿತ್ತು. ಇದು ಕುಟುಂಬದ ಆರ್ಥಿಕ ಸ್ಥಿತಿ ಮೇಲೂ ಕೆಟ್ಟ ಪರಿಣಾಮ ಬೀರಿತ್ತು. ಎಷ್ಟೇ ಔಷಧ ತೆಗೆದುಕೊಂಡರೂ ರೋಗದಿಂದ ಮುಕ್ತಿ ಸಿಗಲಿಲ್ಲ. ಎಂಆರ್‌ಐ ಸ್ಕ್ಯಾನ್ ಮಾಡಿದಾಗ ಯಾವುದೇ ಖಚಿತ ಫಲಿತಾಂಶ ಸಿಗಲಿಲ್ಲ. ವಿಡಿಯೋ ಇಇಜಿ ಮಾಡಿಸಿದಾಗ, ಸಾಮಾನ್ಯ ಮೂರ್ಛೆರೋಗ ಅಂಶಗಳು ಕಂಡುಬಂತು. ಅದರಲ್ಲೂ ಪ್ರೈಮರಿ ಐಡಿಯೋಪಾಥಿಕ್ ಜನರಲೈಸ್ಡ್ ಎಪಿಲೆಪ್ಸಿ ಎಂಬುದು ಖಚಿತವಾಗಿತ್ತು. ಬಳಿಕ ಕಾರ್ಪಸ್ ಕಾಲೊಸ್ಟಮಿ ಎಂಬ ಪಲ್ಲಿಯೇಟಿವ್ ಸರ್ಜರಿಗೆ ಒಳಗಾದ ಬಳಿಕ, ಆರೋಗ್ಯ ಪರಿಸ್ಥಿತಿ ಸುಧಾರಿಸಿತ್ತು. ಈಗ ಸ್ವತಂತ್ರವಾಗಿ ತನ್ನ ಕಾರ್ಯನಿರ್ವಹಿಸುವ ಸಾಮರ್ಥ್ಯವನ್ನೂ ಧಾರಾ ಬೆಳೆಸಿಕೊಂಡಿದ್ದಾರೆ. ಇದು ಧಾರಾ ಅವರ ಕುಟುಂಬದಲ್ಲಿ ಮತ್ತೆ ಸಂತಸ, ನೆಮ್ಮದಿ ನೆಲೆಸುವಂತೆ ಮಾಡಿದೆ.

2. ಶ್ರೀಮತಿ ಅನಿನಾ (ಹೆಸರು ಬದಲಿಸಲಾಗಿದೆ), 37 ವರ್ಷ, ಗೃಹಿಣಿ. 19ನೇ ವಯಸ್ಸಿನಲ್ಲಿ ಪಾರ್ಷಿಯಲ್ ಕಾಂಪ್ಲೆಕ್ಸ್ ಸೀಷಿಯರ್ಸ್‌ಗೆ ಒಳಗಾಗಿದ್ದರು. ಎಂಆರ್‌ಐ ಸ್ಕ್ಯಾನ್ ವರದಿ ಪ್ರಕಾರ, ಬಲಭಾಗದಲ್ಲಿ ಮೇಸಿಯಲ್ ಟೆಂಪೋರಲ್ ಸ್ಕ್ಲೀರೋಸಿಸ್ (ನೆನಪಿನ ಶಕ್ತಿ ಕುಂದುವುದು), ಇನ್ನೊಂದು ಅಸಹಜತೆ ಇದರ ಹಿಂದೆಯೇ ಕಾಣಿಸಿಕೊಂಡಿತ್ತು. ವಿಡಿಯೋ ಇಇಜಿ ವರದಿ ಇದನ್ನು ಇನ್ನಷ್ಟು ವಿಸ್ತೃತವಾಗಿ ತೋರಿಸಿತ್ತು. ಇಷ್ಟಾದ್ರೂ, ಇಕ್ಟಲ್ ಎಸ್‌ಪಿಇಸಿಟಿ ಪರೀಕ್ಷೆ ಕೂಡಾ ನಡೆಸಲಾಯ್ತು. ಎಲೆಕ್ಟ್ರಾಡ್‌ಗಳನ್ನು ಮೆದುಳಿನ ಮೇಲೆ ಇರಿಸಿದಾಗ, ಅಸಹಜ ಜೀವಕೋಶಗಳ ಗುಂಪು ಇರುವುದು ದೃಢಪಟ್ಟಿದೆ. ಈ ಗೃಹಿಣಿಯ ಪತಿಯನ್ನು ಕರೆಸಿ ಕೌನ್ಸೆಲಿಂಗ್ ಮಾಡಲಾಯಿತು. ಇಬ್ಬರ ಒಪ್ಪಿಗೆ ಪಡೆದು ಶಸ್ತ್ರಚಿಕಿತ್ಸೆ ಕೂಡಾ ನಡೆಸಲಾಯಿತು. ಆಕೆ ಕೂಡಾ ಇದೀಗ ತನ್ನ ದೈನಂದಿನ ಚಟುವಟಿಕೆಯನ್ನು ಸ್ವತಂತ್ರವಾಗಿ ನಿಭಾಯಿಸುತ್ತಿದ್ದು, ರೋಗ ಮುಕ್ತಳಾಗಿರುವುದು ಸಂತಸದ ವಿಚಾರ.

ಈ ಎರಡು ನೈಜ ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸಿದ್ದು ಸಾಂದರ್ಭಿಕವಾಗಿ ಆದರೂ, ಇದು ಮೂರ್ಛೆರೋಗಕ್ಕೆ ವೈದ್ಯಕೀಯದಲ್ಲಿ ಪರಿಹಾರವಿದೆ. ಅಸಹಜ ಬದುಕಿನಿಂದ ಸಹಜ ಬದುಕಿನ ಕಡೆಗೆ ಹೆಜ್ಜೆ ಹಾಕಬಹುದು ಎಂಬುದನ್ನು ಹೇಳೋದಕ್ಕೆ. ಮೂರ್ಛೆರೋಗ ಎಲ್ಲರಲ್ಲೂ ಒಂದೇ ರೀತಿ ಇರಲ್ಲ. ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತದೆ. ಪ್ರತಿಯೊಬ್ಬರಲ್ಲೂ ನನ್ನದು ಒಂದೇ ಮನವಿ. ಮೂರ್ಛೆರೋಗವನ್ನು ನಿರ್ಲಕ್ಷಿಸಬೇಡಿ. ರೋಗಿಗಳಲ್ಲಿ ವಿಶ್ವಾಸ ತುಂಬಿ ಹೊಸ ಬದುಕು ಕಟ್ಟಲು ಸಾಮಾಜಿಕವಾಗಿಯೂ ಬೆಂಬಲ ಸಿಕ್ಕುವಂತಾಗಲಿ.

**ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ – ದೂರವಾಣಿ : 99000 14820**

# ಭ್ರಷ್ಟಾಚಾರದ ವಿರುದ್ಧ ಕುಬ್ಜವಾಗುತ್ತಿರುವ ಹೋರಾಟ

ಭ್ರಷ್ಟತೆ ಭಾರತವನ್ನು ಬಾಚಿ ತಬ್ಬುತ್ತಿದೆ, ಉಸಿರಿನಷ್ಟು ಸಹಜವಾಗಿ ರೋಮ ರೋಮಗಳಲ್ಲಿ ರಿಂಗಣಿಸುತ್ತಿದೆ. ಒಂದು ವೇಳೆ ನಮ್ಮ ಈ ಸ್ವತಂತ್ರ ಭಾರತ ಭ್ರಷ್ಟತೆಯಿಂದ ಮುಕ್ತವಾಗಿದ್ದರೆ ಈ ಹೊತ್ತಿಗಾಗಲೆ ವಿಶ್ವದ ಪ್ರಬಲ ರಾಷ್ಟ್ರವಾಗಿ ಇತಿಹಾಸ ನಿರ್ಮಿಸುತ್ತಿತ್ತು. ಅದಕ್ಕೆ ಈಗಲೂ ಕಾಲ ಮಿಂಚಿಲ್ಲ, ಭ್ರಷ್ಟಾಚಾರವನ್ನು ನಿರ್ಮೂಲನ ಮಾಡುವ ಪ್ರಯತ್ನಗಳಿಗೆ ಈಗ ಚಾಲನೆ ದೊರೆಯುತ್ತಿರುವುದು ಆಶಾದಾಯಕವಾಗಿದೆ.

ಯಾವುದೇ ಅಸಾಂವಿಧಾನಿಕ, ಅನೀತಿಯುತ ಚಟುವಟಿಕೆಗಳನ್ನು ಚಿವುಟಿಹಾಕಲು ಸರ್ಕಾರ ವಿಫಲವಾದಾಗ ಅಸಹಕಾರ, ಅಹಿಂಸಾಮಾರ್ಗದ ಚಳವಳಿಗಳು, ಉಪವಾಸದಂಥ ಸತ್ಯಾಗ್ರಹಗಳು ಅನೀತಿಯುತ ಕ್ರಿಯೆಗಳನ್ನು ಬಗ್ಗುಬಡಿಯುವ ಪ್ರಬಲ ನಾಗರಿಕ ಅಸ್ತ್ರಗಳಾಗಿವೆ. ಇದಕ್ಕೆ ಅಮೆರಿಕದ ಹೆನ್ರಿ ಡೇವಿಡ್ ಥೋರೋ 'ನಾಗರಿಕ ಅಸಹಕಾರ'ದ ಮೂಲಕ ಮಾರ್ಗ ತೋರಿದರೆ ಅದರಿಂದ ಪ್ರಭಾವಿತರಾದ ಗಾಂಧೀಜಿ ಅದನ್ನು ವಿಶ್ವಮಟ್ಟದಲ್ಲಿ ಸಾಕಾರಗೊಳಿಸಿ ಹೊಸ ಹೋರಾಟಕ್ಕೆ ನಾಂದಿ ಹಾಡಿದರು. ಉಪವಾಸ, ಸತ್ಯಾಗ್ರಹ ಮುಂತಾದ ನಾಗರಿಕ ಅಸ್ತ್ರಗಳ ಅಂತರಂಗದಲ್ಲಿ ಅಡಗಿರುವ ನಿಸರ್ಗದತ್ತವಾದ ಅದ್ಭುತ ಶಕ್ತಿ ಅದು.

ಅಣ್ಣಾ ಹಜಾರೆ ಭ್ರಷ್ಟಾಚಾರದ ವಿರುದ್ಧ ದನಿ ಎತ್ತಿದಾಗ ರಾಷ್ಟ್ರಾದ್ಯಂತ ಒಂದು ವಿದ್ಯುತ್ ಸಂಚಲನ ಉಂಟಾಯಿತು. ದೇಶದಾದ್ಯಂತ ಅವರ ಹೋರಾಟಕ್ಕೆ ಬೆಂಬಲ ದೊರೆಯಿತು. ಈ ಸಂಚಲನದ ನಾಡಿಮಿಡಿತವನ್ನು ಅರಿತ ರಾಜಕೀಯ ಪಕ್ಷವೊಂದು ಒಳನುಸಿಯಲು ಹುನ್ನಾರ ಹೂಡಿದಾಗ ಅದರ ನಾಡಿಮಿಡಿತವನ್ನು ಅರಿತಿದ್ದ ಅಣ್ಣಾ ಹಜಾರೆಯವರು ಅದಕ್ಕೆ ಅವಕಾಶವೀಯದೆ ಗೌರವಯುತವಾಗಿ ದೂರ ಇಟ್ಟರು. ರಂಗೋಲಿ ಕೆಳಗೆ ನುಸುಳುವ ಚಾಣಾಕ್ಷತೆಯುಳ್ಳ ಆ ಪಕ್ಷ ಹಾಗೂ ಪರಿವಾರಗಳು ಅನ್ಯಮಾರ್ಗಕ್ಕೆ ಮುಂದಾದುವು. ಆಗ ಅವರ ಕೈಗೆ ಗೊಂಬೆಯಾಗಿ ಸಿಕ್ಕಿದ್ದೆ ಯೋಗ ಗುರುವೆಂದು ಬಿಂಬಿಸಿಕೊಂಡಿರುವ ಬಾಬಾ ರಾಂದೇವ್. ಹಜಾರೆಯವರಿಂದ ಭ್ರಷ್ಟಾಚಾರ ವಿರೋಧಿ ಚಳವಳಿಯನ್ನು ತನ್ನದಾಗಿಸಿಕೊಳ್ಳಲು ಹೂಡಿದ ಷಡ್ಯಂತ್ರ ಇದಾಗಿದ್ದು, ಆರ್.ಎಸ್.ಎಸ್. ರಾಂದೇವ್ ಅವರನ್ನು ಬೆಂಬಲಿಸುವ ಬಹಿರಂಗ ಹೇಳಿಕೆಯನ್ನೂ ನೀಡಿತು. ರಾಮನ ಹಾಗೂ ರಾಮಜನ್ಮಭೂಮಿಯ ರಾಜಕೀಯ ಕುಟಿಲಗಳು ಫಲಕೊಡದ ಕಾರಣ ಬಿಜೆಪಿ, ಸಂಘಪರಿವಾರದವರು ಭ್ರಷ್ಟಾಚಾರ ಮತ್ತು ವಿದೇಶಗಳಲ್ಲಿಟ್ಟಿರುವ ಕಪ್ಪುಹಣದ ಹೆಸರಿನಲ್ಲಿ ರಾಜಕೀಯ ಬೇಳೆ ಬೇಯಿಸಿಕೊಳ್ಳಲು ಈಗ ನಿದ್ದೆಗೆಟ್ಟು ಹವಣಿಸುತ್ತಿವೆ. ಭ್ರಷ್ಟಾಚಾರದ ವಿರೋಧದ ಸುತ್ತ ಇಂಥ ಹುತ್ತಗಳು ಬೆಳೆಯುತ್ತಿರುವುದು ವಿಷಾದನೀಯ. ಯಾವ ಹುತ್ತದಲ್ಲಿ ಯಾವ ಹಾವು ಇದೆಯೋ ಬಲ್ಲವರಾರು ?

ಒಮ್ಮೆ ಶಾಂತವಾಗಿ ಯೋಚಿಸಿ! ಬಿಜೆಪಿ ಸರ್ಕಾರ ಕೇಂದ್ರದಲ್ಲಿ ಅಧಿಕಾರದಲ್ಲಿದ್ದಾಗ ವಿದೇಶಗಳಲ್ಲಿರುವ ಕಪ್ಪು ಹಣವನ್ನು ತರಲು ಅದಕ್ಕೆ ಯಾವ ಅಡ್ಡಿ ಇತ್ತು? ಏಕೆ ತರಲಿಲ್ಲ? ಭ್ರಷ್ಟಾಚಾರದ ವಿರುದ್ಧ ಏಕೆ ಕ್ರಮ ಕೈಗೊಳ್ಳಲಿಲ್ಲ? ಏಕೆಂದರೆ ಅದೂ ಕೂಡ ಇತರ ಪಕ್ಷಗಳಲ್ಲಿರುವಂತೆ ತನ್ನ ಅಂತರಂಗದಲ್ಲಿಯೂ ಕಾವು ಕೊಡುತ್ತಿದ್ದುದು ಅನಿಷ್ಟ ಭ್ರಷ್ಟಾಚಾರಕ್ಕೇ ಅಲ್ಲವೆ ?

ಈ ಭ್ರಷ್ಟಾಚಾರವೆಂಬುದು ಯಾವುದೇ ಒಂದು ಪಕ್ಷಕ್ಕಾಗಲಿ ಅಥವಾ ಬಟ್ಟೆ ಬಣ್ಣಗಳಿಗಾಗಲಿ ಸೀಮಿತವಾದುದಲ್ಲ. ಅದು ಸಾರ್ವತ್ರಿಕವಾದ ಅಂಟುರೋಗ. ಅದು ಭ್ರಷ್ಟಾಚಾರದಿಂದ ದೂರವಿರುವವರನ್ನೂ ಬಲಿಗೊಳ್ಳಲು ಯತ್ನಿಸುತ್ತದೆ. ಅದಕ್ಕೆ ಅಸಂಖ್ಯಾತ ಅಮಾಯಕರೂ ಬಲಿಯಾಗಿದ್ದಾರೆ. ಅದು ಸಾವಿರಾರು ವರ್ಷಗಳಷ್ಟು ದೀರ್ಘವಾದ ಒಂದು ಗುಲಾಮೀಯ ವ್ಯವಸ್ಥೆಯಲ್ಲಿನ ಪ್ರಜೆಗಳ ಮೈಮನಗಳಲ್ಲಿ ಮನೆ ಮಾಡಿರುವ ಒಂದು ರೋಗ.

ಸ್ವಾತಂತ್ರ್ಯಪೂರ್ವದಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡುತ್ತಿದ್ದ ಕಾಂಗ್ರೆಸ್ ಹೊರಬೇಕಾಗಿದ್ದ ಜವಾಬ್ದಾರಿಯನ್ನು ಕುರಿತು ವಿವೇಕಾನಂದರು ''ಘೋರ ಕ್ಷಾಮ, ಪ್ರವಾಹ, ಖಾಯಿಲೆ, ಸಾಂಕ್ರಾಮಿಕ ಜಾಡ್ಯಗಳು ಇರುವ ಸಮಯದಲ್ಲಿ ಕಾಂಗ್ರೆಸ್ಸಿನವರು ಎಲ್ಲಿರುವರು ಹೇಳು ! ದೇಶದ ರಾಜ್ಯಾಡಳಿತವನ್ನು ನಮಗೆ ಕೊಟ್ಟುಬಿಡಿ ಎಂದು ಹೇಳಿಬಿಟ್ಟರೆ ಸಾಕೆ ?'' (೭-೩೨೦) – ಎಂದು ಪ್ರಶ್ನಿಸಿದ್ದಾರೆ. ಈ ಪ್ರಶ್ನೆ ಇಂದಿಗೂ ಎಲ್ಲ ರಾಜಕೀಯ ಪಕ್ಷದವರಿಗೂ ಪ್ರಸ್ತುತವಾಗಿದೆ.

ದಶಕಗಳ ಯೋಗ ಸಾಧನೆ ಮಾಡಿದ ಬಾಬಾ ರಾಂದೇವ್ ಅವರಲ್ಲಿ ಸಲ್ಲಕ್ಷಣಗಳು ಮೈವೆತ್ತಿವೆಯೆ ? ಶಾಂತಿ, ಸಮಾಧಾನ, ಆತ್ಮಶಕ್ತಿ, ಆತ್ಮನಂಬುಗೆ, ಮಾನಸಿಕ ದೃಢತೆ, ನಿರ್ದಿಷ್ಟ ಗುರಿಗಳು ಅವರ ಮೈಮನಗಳಲ್ಲಿ ಕಾಣುತ್ತಿವೆಯೆ ? ಕುಟಿಲತೆ ಎದ್ದುಕಾಣುತ್ತಿಲ್ಲವೆ ? ಒಂದು ಗುರುತರ ಉದ್ದೇಶಕ್ಕಾಗಿ ಕೈಗೊಂಡ ಉಪವಾಸವನ್ನು ಕೈಬಿಡುವಾಗ ಬೆಂಬಲಿಗರನ್ನೂ ಮರೆಮಾಚಿ ಕೇಂದ್ರ ಸರ್ಕಾರಕ್ಕೆ ಗುಟ್ಟಾಗಿ ನೀಡಿದ್ದ ಪತ್ರ ಅವರ ವಿಶ್ವಾಸಾರ್ಹತೆಗೆ ಪೂರಕವಾದದ್ದೆ? ಬೆಂಬಲಿಗರನ್ನು ಪೊಲೀಸ್ ದೌರ್ಜನ್ಯಕ್ಕೆ ಬಿಟ್ಟು 'ನಾನು ಸಾಯಲೂ ಹೆದರುವುದಿಲ್ಲ' ಎಂಬ ಧೀರೋದಾತ್ತ ಹೇಳಿಕೆ ಮೊದಲು ನೀಡಿದ್ದಾಗ್ಯೂ, ಹೇಡಿಯಂತೆ ಪರವಸ್ತ್ರ ಧರಿಸಿ ಪಲಾಯನ ಮಾಡಲು ಯತ್ನಿಸಿದ ಅವರ ಬದ್ಧತೆ ಯಾವ ಸ್ವರೂಪದ್ದು? ನಂತರ ಹರಿದ್ವಾರದಲ್ಲಿ ಉಪವಾಸ ಕೈಗೊಂಡ ರಾಂದೇವ್ ಗ್ಲೂಕೋಸ್ ನಿರಾಕರಿಸಿ ನಿಂಬೆಹಣ್ಣಿನ ರಸ ಸೇವಿಸಿದ್ದರಲ್ಲಿ ಯಾವ ಅಚಲವಾದ ನಿರ್ಧಾರವಿದೆ? ಇವುಗಳನ್ನು ಗಮನಿಸಿದರೆ ರಾಂದೇವ್ ಅವರಲ್ಲಿ ಒಂದು ಹೋರಾಟಕ್ಕೆ ಬೇಕಾದ ರಾಜಸ ಗುಣವೂ ಇಲ್ಲದೆ ಸಾತ್ವಿಕ ಪೋಷಾಕಿನಲ್ಲಿ ತಾಮಸ ಶಕ್ತಿ ಕ್ರಿಯಾಶೀಲವಾಗಿರುವಂತೆ ತೋರುತ್ತಿದೆ. ಆದಕಾರಣವೆ ಅವರು ಹನ್ನೊಂದು ಸಾವಿರ ಸಶಸ್ತ್ರ ಯುವಕರ ಬೃಹತ್ ಪಡೆ ಕಟ್ಟಲು ಮುಂದಾಗಿದ್ದಾರೆ. ಈಗಾಗಲೇ ಸಂಘಪರಿವಾರದವರು 'ತ್ರಿಶೂಲ'ಗಳ ಪ್ರಯೋಗ ಮಾಡಿ ಮಣ್ಣುಮುಕ್ಕಿ ಇತಿಹಾಸದಲ್ಲಿ ಸೇರಿಹೋಗಿರುವಂತೆ ಈ ಸಶಸ್ತ್ರ ಪಡೆಗಳನ್ನೂ ತನ್ನ ಗರ್ಭಕ್ಕೆ ಸೇರಿಸಿಕೊಳ್ಳುವ ವಿಶಿಷ್ಟ ಶಕ್ತಿ ಭಾರತದ ಮಣ್ಣಿನದು. ರಾಂದೇವ್ ಹನ್ನೊಂದು ಸಾವಿರ ಸಶಸ್ತ್ರ ಯುವಕರ ಪಡೆಯನ್ನು ಸರ್ಕಾರದ ರಕ್ಷಣೆಯ ಪಡೆಯ ವಿರುದ್ಧ ಕಟ್ಟುವರಂತೆ! ಅಷ್ಟೇ ಅಲ್ಲದೆ ಅವರಿಗೆ 'ಶಾಸ್ತ್ರ' ಹಾಗೂ 'ಶಸ್ತ್ರ' ವಿದ್ಯೆ ಎರಡನ್ನೂ ಕಲಿಸುವರಂತೆ !

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?

– ಎಂಬ ಕುವೆಂಪು ಅವರ ಎದೆಯ ದನಿಯನ್ನು ದಮನಗೈದು ಮತ್ತೆ 'ಶಾಸ್ತ್ರ'ದ ಶೂಲಕ್ಕೇರಿಸುವ ಹುಂಬತನದ ರಾಂದೇವ್ ಒಬ್ಬ ಯೋಗ ಗುರುವೆ ? ಖಂಡಿತ ಅಲ್ಲ. ''ಅವರು ನಮ್ಮನ್ನು ಯಾವುದೋ ಕಂದಾಚಾರಗಳ ಯುಗಕ್ಕೆ ಕರೆದೊಯ್ಯುತ್ತಿದ್ದಾರೆ; ಇದು ದೊಡ್ಡ ಅಪಾಯ'', ಎನ್ನುವ ಯು. ಆರ್. ಅನಂತಮೂರ್ತಿಯವರ ಗ್ರಹಿಕೆ ಸತ್ಯಕ್ಕೆ ಹತ್ತಿರವಾದದ್ದು.

ಸರ್ಕಾರದ ರಕ್ಷಣಾ ಪಡೆಯ ವಿರುದ್ಧ ಶಸ್ತ್ರಾಸ್ತ್ರ ಪಡೆಯನ್ನು ರಚಿಸುತ್ತೇನೆ ಎಂಬ ರಾಂದೇವ್ ಆಲೋಚನೆ ಕ್ರೂರ ಹಾಗೂ ಅನಾಗರಿಕವಾದುದು. ಅದು ರಕ್ಷಿಸುವ ತಾಯ್ತನದಿಂದ ದೂರವಾದ ಭಕ್ಷಿಸುವ ನೀಚತನದ್ದು. ಅಲ್ಲದೆ ಅದು ರಾಷ್ಟ್ರದ ಒಳಗೇ ರಾಷ್ಟ್ರದ ವಿರುದ್ಧವೇ ಆಗಿರುವುದರಿಂದ ಅದನ್ನು ಮೊಳಕೆಯಲ್ಲೇ ಚಿವುಟಿಹಾಕುವುದು ವಿಹಿತ. ಏಕೆಂದರೆ ಅದರ ಅಂತರಂಗದಲ್ಲಿ ರಾಷ್ಟ್ರದ ಅರಾಜಕತೆಯನ್ನು ಬಿತ್ತುವ ಬೀಜಗಳಿವೆ. ಆದ್ದರಿಂದ ಪರಿಸ್ಥಿತಿ ಕೈಮೀರಿಹೋಗುವ ಮುನ್ನವೆ ಎಚ್ಚರ ವಹಿಸುವ ತುರ್ತಿನ ಅಗತ್ಯವಿದೆ. ಯಾರು ಏನೇ ಆಗಿರಲಿ ಇಂಥ ಹಾದಿ ತಪ್ಪಿದವರ ಪ್ರಚೋದನೆಗೆ ಒಳಗಾಗದೆ ವಾಸ್ತವ ಸತ್ಯಗಳನ್ನು ಅರಿತು ಎಚ್ಚರಿಕೆಯಿಂದ ಅಡಿ ಇಡಬೇಕಾದ ಗುರುತರ ಜವಾಬ್ದಾರಿ ದೇಶದ ಯುವ ಜನತೆಯದ್ದಾಗಿದೆ. ಹಾಗೆ ವಯಸ್ಕರೂ ವಿವೇಚನೆಯಿಂದ ವರ್ತಿಸಬೇಕಾಗಿದೆ.

ಭ್ರಷ್ಟಾಚಾರದ ವಿರುದ್ಧ ಮೊದಲಿಗೆ ದನಿ ಎತ್ತಿದ ಅಣ್ಣಾ ಹಜಾರೆಯವರಿಗೂ ಅನಂತರ ಅದಕ್ಕೆ ಪ್ರವೇಶ ಪಡೆದ ಬಾಬಾ ರಾಂದೇವ್‌ಗೂ ಭೂಮಿ ಆಕಾಶಗಳ ಅಂತರವಿದೆ. ಅಣ್ಣಾ ಅವರದು ಮಣ್ಣಿಗೆ ಹತ್ತಿರವಾಗಿದ್ದರೆ ರಾಂದೇವ್‌ರದು ನೆಲೆಯಿರದ ಆಕಾಶದಲ್ಲಿ ಸೂತ್ರವಿರದ ಗಾಳಿಪಟದಂತೆ ಗೋತಾ ಹಾಕುವತ್ತ ಸಾಗುತ್ತಿದೆ. ತನ್ಮೂಲಕ ಭ್ರಷ್ಟಾಚಾರ ವಿರೋಧಿ ಬೆಂಬಲಿಗರನ್ನೂ ಗೊಂದಲಕ್ಕೆ ಈಡುಮಾಡುತ್ತಿದ್ದಾರೆ.

''ಯಾರು ದೇಹ ಸುಖಕ್ಕಾಗಲಿ, ವೈಭೋಗಕ್ಕಾಗಲಿ, ಹೊಗಳಿಕೆಗಾಗಲಿ, ಸ್ಥಾನಮಾನಗಳಿಗಾಗಲಿ ಆಶಿಸದೆ ತಾನು ಸರಿ ಎಂದು ನಂಬಿದ ತತ್ವಕ್ಕಾಗಿ ಸಮರ್ಪಿಸಿಕೊಂಡಿರುವನೋ ಅಂಥವನ ಬಗ್ಗೆ ಜಾಗ್ರತನಾಗಿರು. ಆತ ಅಹಿತಕಾರಿ ಹಾಗೂ ಅಪಾಯಕಾರಿ ಶತ್ರು. ಏಕೆಂದರೆ ನೀನು ವಶಪಡಿಸಿಕೊಳ್ಳಬಹುದಾದ ಆತನ ಶರೀರ ಆತನ ಆತ್ಮಶಕ್ತಿಯ ಎದುರು ನಗಣ್ಯವಾಗಿಬಿಡುತ್ತದೆ'', ಎಂಬ ಗಾಂಧೀಜಿ ಮಾತನ್ನು ಲೂಯಿ ಫಿಶರ್ ದಾಖಲಿಸಿದ್ದಾನೆ. ಇದು ನಿಸರ್ಗ ಸತ್ಯ, ಸಾರ್ವಕಾಲಿಕವಾದ ನಿತ್ಯಸತ್ಯ. ಈ ಪಥದಿಂದ ವಿಮುಖವಾದ ಯಾವುದೇ ಚಳವಳಿ, ಸತ್ಯಾಗ್ರಹ, ಉಪವಾಸ ಮುಂತಾದವುಗಳು ಗೊಡ್ಡುಗಳಾಗಿಬಿಡುತ್ತವೆ.

ಈಗ ಭಾರತದಲ್ಲಿ ಚಾಲನೆಗೊಂಡಿರುವ ಭ್ರಷ್ಟಾಚಾರ ಹಾಗೂ ದೇಶವಿದೇಶಗಳಲ್ಲಿರುವ ಕಪ್ಪು ಹಣದ ವಿರುದ್ಧದ ಹೋರಾಟದ ಸುತ್ತ ಯಾವುದೇ ಗೊಂದಲದ ಹುತ್ತ ಹುಟ್ಟಿಕೊಳ್ಳದಂತೆ ಹಾಗೂ ನಡೆಸುತ್ತಿರುವ ಚಳವಳಿ ಭುಗಿಲೆದ್ದಿರುವ ಭ್ರಷ್ಟಾಚಾರದ ವಿರುದ್ಧ ಕುಬ್ಜವಾಗದಂತೆ ಪ್ರಜ್ಞಾವಂತ ನಾಗರಿಕರು ಎಚ್ಚರವಹಿಸಬೇಕು ಎಂಬುದು ಕಾಲದ ಕರೆಯಾಗಿದೆ.

**ಜ. ಹೊ. ನಾರಾಯಣಸ್ವಾಮಿ**
ನಂ. ೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ-೫೭೩೨೦೧



ಡಾ॥ ತುಮಕೂರು ಚಂದ್ರಕಾಂತ್

# ಒಬಾಮಾಗೆ ಒಂದು ಪತ್ರ

ಮಿ॥ ಪ್ರಸಿಡೆಂಟ್ ಒಬಾಮ ಅವರೆ...

ಇಡೀ ಜಗತ್ತಿನಲ್ಲಿ ಅತ್ಯಂತ ವಾಂಟೆಡ್ ಭಯೋತ್ಪಾದಕ ಆಗಿದ್ದನೆಂದು ನೀವು ನಿರ್ಧರಿಸಿದ್ದ ಒಸಾಮ ಬಿನ್ ಲಾಡೆನ್‌ನನ್ನು ಕೊಂದುಹಾಕಿದ್ದೀರಿ. ಕೇವಲ ನಲವತ್ತು ನಿಮಿಷಗಳಲ್ಲಿ, ಬೇರೆ ದೇಶದಲ್ಲಿದ್ದ ನಿಮ್ಮ ವಿಶೇಷ ಪರಿಣತ ಯೋಧರು ಪಾಕಿಸ್ತಾನಕ್ಕೆ ಬಂದು ಅತ್ಯಂತ ನಿಖರವಾಗಿ ಒಸಾಮನ ಅಡ್ಡೆಗೆ ನುಗ್ಗಿ ಅವನನ್ನು ಅಲ್ಲೇ ಮುಗಿಸಿ ಮುಂದಿನ ಎರಡೇ ಗಂಟೆಗಳಲ್ಲಿ ಅವನ ಶವಸಂಸ್ಕಾರವನ್ನು ಯಾರಿಗೂ ಎಂದೆಂದಿಗೂ ತಿಳಿಯಲಾಗದ ಸ್ಥಳದಲ್ಲಿ ಮುಗಿಸಿ ಇಡೀ ಜಗತ್ತೇ ನಿಬ್ಬೆರಗಾಗುವಂತೆ ಮಾಡಿದ್ದೀರಿ. ಶ್ರೇಷ್ಠಮಟ್ಟದ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಈ ರೀತಿಯ ಯುದ್ಧ ತಂತ್ರಕ್ಕೆ ಬಳಸಿ ಸಾಂಪ್ರದಾಯಿಕ ಯುದ್ಧವನ್ನು ಅಪ್ರಸ್ತುತಗೊಳಿಸಿಬಿಟ್ಟರಿ. ಈ ಘಟನೆಯನ್ನು ಜಗತ್ತಿಗೇ ಸಾರುತ್ತಿದ್ದಾಗ ನಿಮ್ಮಲ್ಲಿದ್ದ ಆತ್ಮವಿಶ್ವಾಸ ಮತ್ತು ಕಿಚ್ಚು ಅನೇಕ ದೇಶಗಳಲ್ಲಿ ನಿಶ್ಯಬ್ದವನ್ನೂ, ಅನೇಕ ಮುತ್ಸದ್ದಿಗಳಲ್ಲಿ ಭಯವನ್ನೂ, ಕೆಲವು ಚಿಂತಕರಲ್ಲಿ ಆತಂಕವನ್ನೂ, ಕೆಲವರಲ್ಲಿ ಗೊಂದಲವನ್ನೂ ಉಂಟುಮಾಡಿದ್ದು ನಿಜ ಕಣ್ರಿ. ನಿಮ್ಮ ದೇಶದಲ್ಲಿ ಹಾಗೂ ನಿಮ್ಮಂತೆ ಯೋಚಿಸುವ ಅನೇಕ ಯೂರೋಪ್ ದೇಶಗಳಲ್ಲಿ ಮತ್ತು ಆಸ್ಟ್ರೇಲಿಯಾ ಇತ್ಯಾದಿ ದೇಶಗಳಲ್ಲದೆ ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳೆಂದು ಕರೆಯಲ್ಪಡುವ ದೇಶಗಳಲ್ಲೂ ಬಂದ ತಕ್ಷಣದ ಪ್ರತಿಕ್ರಿಯೆ ಎಂದರೆ ಒಸಾಮನ ಸಾವಿಗೆ ಸಮಾಧಾನ. ಹತ್ತು ವರ್ಷಗಳಿಂದ ಅಮೆರಿಕದ ಜನರಲ್ಲಿ ಭಗಭಗ ಉರಿಯುತ್ತಿದ್ದ ಪ್ರತೀಕಾರದ ಆಕ್ರೋಶಕ್ಕೆ ಈ ವಿಕ್ರಮ ಒಂದಿಷ್ಟು ಸಮಾಧಾನವನ್ನು ತಂದಿದೆ.

ನೀವು, ನಿಮ್ಮ ದೇಶ, ನಿಮ್ಮ ಆಲೋಚನೆ ಮತ್ತು ನಂಬಿಕೆ ಇವೆಲ್ಲ ನನಗಂತೂ ಬಹಳ ವಿಶಿಷ್ಟವಾಗಿ ಕಾಣುತ್ತವೆ. ನಿಮ್ಮ ಭಾಷಣದ ಕೊನೆಯಲ್ಲಿ ಸಾಮಾನ್ಯವಾಗಿ, ದೇವರು ಅಮೆರಿಕವನ್ನು ಹರಸಲಿ, ದೇವರು ಎಲ್ಲರನ್ನು ಆಶೀರ್ವದಿಸಲಿ, ಎಂದು ಹೇಳುತ್ತೀರಿ. ಆದರೆ ನೀವು ಯಾವುದನ್ನೂ ದೇವರೆಂದು ನಂಬಲಾದವನ ನಿರ್ಧಾರಕ್ಕೆ ಬಿಡುವುದಿಲ್ಲ; ಇರಲಿ, ಒಳ್ಳೆಯದೋ, ಕೆಟ್ಟದ್ದೋ ಒಟ್ಟಿನಲ್ಲಿ ನೀವೇ ಎಲ್ಲವನ್ನೂ ಮಾಡಿ ಮುಗಿಸುವ ಶಕ್ತಿ ನಿಮ್ಮಲ್ಲಿದೆ ಎಂದು ಜಗತ್ತಿಗೆ ತೋರಿಸಿದಿರಿ.

ನಿಮ್ಮ ನಿಕಟಪೂರ್ವ ಅಧ್ಯಕ್ಷ ಜಾರ್ಜ್ ಬುಷ್ ಚುನಾಯಿತರಾದ ವರ್ಷದಲ್ಲೇ ನಡೆದ ೯/೧೧ರ ಘಟನೆಯಿಂದ ಅಮೆರಿಕಗಿಂತ ಹೆಚ್ಚಾಗಿ ತಲ್ಲಣಗೊಂಡಿದ್ದು ನಮ್ಮಂಥ ಬಡಪಾಯಿ ರಾಷ್ಟ್ರಗಳು ಅಂತ ನಿಮಗೂ ಗೊತ್ತಿರಬಹುದು. ನಿಮ್ಮ ದೇಶದ ವಿಮಾನಗಳನ್ನೇ ಬಾಂಬುಗಳನ್ನಾಗಿ ಬಳಸಿ ವಿಶ್ವವ್ಯಾಪಾರ ಕೇಂದ್ರವನ್ನು ಹೊಡೆದುರುಳಿಸಿದ್ದಂತೂ ಜಗತ್ತಿನ ಭಯೋತ್ಪಾದಕ ಕೃತ್ಯಗಳಲ್ಲಿ ಅತ್ಯಂತ ವಿಶಿಷ್ಟವಾದದ್ದು. ಇದರಿಂದ ತೀವ್ರ ವಿಚಲಿತರಾದ ಬುಷ್ ಅಮೆರಿಕಾದ ಜನತೆಗೆ ಸಾಂತ್ವನ ಹೇಳಲು ವಿರಾವೇಶದಿಂದ, ಒಸಾಮ ಎಲ್ಲಿದ್ದರೂ ಅಟ್ಟಾಡಿಸಿ ಕೊಲ್ಲುತ್ತೇವೆ ಎಂದು ಸಾರಿದ್ದರು. ಒಸಾಮ ಅಫ್ಘಾನಿಸ್ತಾನದ ಭೀಕರ ಗುಡ್ಡಗಾಡು ಪ್ರದೇಶದಲ್ಲಿ ಗುಹೆಗಳಲ್ಲಿ ಅಡಗಿದ್ದಾನೆಂಬ ಮಾಹಿತಿಯನ್ನು ನಂಬಿ ಅವನನ್ನು ಬಿಲದಿಂದ ಇಲಿಯನ್ನು ಹೊರಗೆಳೆದು ಸಾಯಿಸುವಂತೆ, ಚಚ್ಚಿ ಚಚ್ಚಿ ಕೊಲ್ಲುತ್ತೇವೆ ಎಂದು ಸಾರಿ ಸಾರಿ ಹೇಳಿ ಅಮೆರಿಕನ್ನರಿಗೆ ಸಿನಿಮೀಯ ಸಾಂತ್ವನ ನೀಡಿದ್ದರು. ಅಫ್ಘಾನಿಸ್ತಾನದ ಬೆಟ್ಟಗಳ ಮೇಲೆ ಮಳೆಯಂತೆ ಸುರಿದ ಅಮೆರಿಕಾದ ಬಾಂಬುಗಳಿಂದ ಅಲ್ಲಿನ ಗುಡ್ಡಗಾಡು ಜನರು ಸಾವಿರಾರು ಸಂಖ್ಯೆಯಲ್ಲಿ ಇಲಿಗಳಂತೆ ಸತ್ತಿದ್ದಂತೂ ನಿಜ. ಇದರಿಂದ ಗುಡ್ಡಗಳು ನಾಶವಾಗಿ ಅಲ್ಲಿನ ಜನರ ಕೋಪ ಪರ್ವತವಾಗಿ ಬೆಳೆಯಿತೆ ?

ನೋಡಿ, ನಿಮ್ಮ ವಿಧಾನಕ್ಕೂ ಮತ್ತು ಬುಷ್ ವಿಧಾನಕ್ಕೂ ಎಷ್ಟೊಂದು ವ್ಯತ್ಯಾಸ : ಅವರು ಬಾಂಬ್ ಹಾಕಿದರು, ನೀವು ಬುಲೆಟ್‌ನಲ್ಲೇ ಮುಗಿಸಿದಿರಿ. ಬುಷ್‌ರ ಇನ್ನೊಂದು ವೈಶಿಷ್ಟ್ಯ ಏನೆಂದರೆ ಅವರು ಉತ್ತರ ಕೊರಿಯಾ, ಇರಾನ್, ಇರಾಕ್ ಇತ್ಯಾದಿ ದೇಶಗಳಲ್ಲಿ ಸಮೂಹ ಹತ್ಯೆಯ ಆಯುಧಗಳನ್ನು ತಯಾರಿಸುತ್ತಿದ್ದಾರೆ ಎಂದು ಆಪಾದಿಸಿ ಅಲ್ಲೆಲ್ಲಾ ಸಮೂಹ ಹತ್ಯೆಗಳನ್ನು ಯಾವುದೇ ಎಗ್ಗಿಲ್ಲದೆ ನಡೆಸಿದ್ದು. ಈ ತುಲನೆಯಲ್ಲಿ ನೀವು ಒಂದು ಗ್ರಾಂನಷ್ಟಾದರೂ ಸದ್ಯಕ್ಕಂತೂ ಮೇಲ್ಮಟ್ಟದಲ್ಲಿದ್ದೀರಿ.

ನಿಮ್ಮ ಯೋಧರ ಪಡೆ ಅಬ್ಬೋಟಾಬಾದ್‌ನಲ್ಲಿದ್ದ ಒಸಾಮನನ್ನು ''ನುಗ್ಗಿ'' ಹೊಡೆದು ಕೊಂದಿದ್ದು ಆ ಕ್ಷಣಕ್ಕೆ ಸಮಾಧಾನ ತರುವುದಾದರೂ ಈ ''ನುಗ್ಗಿ ಹೊಡೆಯುವ'' ಪದ್ಧತಿ ಸರಿ ಇಲ್ಲ ಕಣ್ರಿ. ಇದರರ್ಥ ಯಾವ ದೇಶ ಏನೇ ಮಾಡಿದರೂ ಸುಮ್ಮನಿರಬೇಕೆಂದಲ್ಲ. ದುಷ್ಟ ರಾಷ್ಟ್ರಗಳಾಗಿ ಮಾರ್ಪಟ್ಟು ದುಷ್ಟರಿಗೆ ಆಶ್ರಯ ನೀಡುವ, ಜಗತ್ತಿನ ಎಲ್ಲ ಜೀವರಾಶಿಗೆ ಮಾರಕವಾಗುವ ಯಾವುದೇ ಕೃತ್ಯವನ್ನೆಸಗುವ, ಡ್ರಗ್ಸ್ ಇತ್ಯಾದಿ ಮಾರಕ ವ್ಯವಹಾರಗಳಲ್ಲಿ ತೊಡಗುವ ಯಾವುದೇ ದೇಶವಾಗಿರಲಿ, ಅದಕ್ಕೆ ''ಬುದ್ಧಿ ಕಲಿಸುವ'' ವ್ಯವಸ್ಥೆ ಖಂಡಿತ ಬೇಕು. ಇದಾಗಬೇಕಾಗಿರುವುದು ವಿಶ್ವಸಂಸ್ಥೆಯ ಮುಖಾಂತರವೇ ಹೊರತು ನಿಮ್ಮಂಥ ಒಂದು ಬಲಾಢ್ಯ ದೇಶದ ಸ್ವಂತ ನಿರ್ಧಾರದಿಂದಲ್ಲ.

ನಿಮ್ಮನ್ನು ಪ್ರಶ್ನಿಸುವವರು ಯಾರಿದ್ದಾರೆ ಸ್ವಾಮಿ ? ಈಗ ಪಾಕಿಸ್ತಾನವನ್ನೇ ನೋಡಿ ! ನೀವು ಅಲ್ಲಿ ಮಾಡಿದ ಕೆಲಸ ಬೇರಾವುದೇ ನೆರೆ ರಾಷ್ಟ್ರ ಮಾಡಿದ್ದರೆ ಏನಾಗುತ್ತಿತ್ತೆಂಬ ಊಹೆ ಮಾಡಬಲ್ಲಿರಾ ? ಇಡೀ ಏಷ್ಯಾಖಂಡವೇ ಉರಿದು ಬೂದಿಯಾಗುವಷ್ಟು ಆಟಂಬಾಂಬುಗಳ ಸ್ಫೋಟ ನಡೆದು ಹೋಗುತ್ತಿತ್ತು. ನೀವು ಬಹಳ ಚಾಲೂಕಿದ್ದೀರಿ. ಇಂತಹ ಅಪಾಯ ಉಂಟುಮಾಡುವ ದೇಶಗಳ ಯುದ್ಧ ''ವ್ಯಾಪ್ತಿ ಪ್ರದೇಶದಿಂದ'' ದೂರಾನೂ ಇರುತ್ತೀರಿ, ಹಾಗೆಯೇ ಅವುಗಳನ್ನು ನಿಮ್ಮ ''ವ್ಯಾಪ್ತಿ ಪ್ರದೇಶದಲ್ಲಿ'' ಇರಿಸಿಯೂ ಇರುತ್ತೀರಿ. ನೀವು ನಮಗೆ ಹೊಡೆಯುವಷ್ಟು ನಿಮ್ಮ ಕೈಗಳು ಉದ್ದ ಇವೆ. ನಮ್ಮಂಥವರ ಕೈಗಳನ್ನು ನೀವು ನಿಮ್ಮ ಬಲದಿಂದಲೂ ಚಾಕಚಕ್ಯತೆಯಿಂದಲೂ ದುರ್ಬಲಗೊಳಿಸುತ್ತೀರಿ, ಅಲ್ಲದೆ ನಾವುಗಳೂ ನಿಮ್ಮ ಮೇಲಿನ ಅತೀ ಭಯ, ಭಕ್ತಿಗಳಿಂದ ನಮ್ಮ ಕೈಗಳನ್ನು ನಾವೇ ಕಟ್ಟಿಹಾಕಿಕೊಳ್ಳುತ್ತೇವೆ. ಏನೇ ಆಗಲಿ, ಕೇವಲ ಒಂದು ದೇಶವಾಗಿ ನೀವು ಈ ರೀತಿಯ ''ನುಗ್ಗಿ ಹೊಡೆಯುವ'' ವಿಧಾನವನ್ನು ಅನುಸರಿಸುವುದು ಒಪ್ಪತಕ್ಕದ್ದಲ್ಲ. ನಿಮಗೂ ಪಾಕಿಸ್ತಾನಕ್ಕೂ ''ಒಳ'' ಒಪ್ಪಂದವಾಗಿದ್ದರೂ ಈ ಮಾರ್ಗವನ್ನು ಒಪ್ಪತಕ್ಕದ್ದಲ್ಲ, ಯಾಕೆಂದರೆ, ದೇಶ-ದೇಶಗಳ ಮಧ್ಯೆ ಯಾವುದೇ ''ಒಳ'' ಒಪ್ಪಂದ ಇರಬೇಕಾಗಿಲ್ಲ, ಇರಕೂಡದು. ಇದರಿಂದಾಗಿಯೇ ಒಸಾಮ ಸತ್ತನಂತರ ಪಾಕಿಸ್ತಾನದಲ್ಲಿ ಅನೇಕ ಕಡೆ ದೊಡ್ಡ ಮಟ್ಟದ ಪ್ರತಿಭಟನೆಗಳಾದದ್ದು. ತೀರಾ ದುರದೃಷ್ಟಕರ ಸಂಗತಿ ಎಂದರೆ ಒಸಾಮ ಸಾವಿನ ನಂತರವಾದರೂ ಇಡೀ ಜಗತ್ತಿನ ಎಲ್ಲಾ ರಾಷ್ಟ್ರಗಳೂ ಒಟ್ಟುಗೂಡಿ ವಿಶ್ವಸಂಸ್ಥೆಯನ್ನು ಅತ್ಯಂತ ಬಲಾಢ್ಯ ವ್ಯವಸ್ಥೆಯಾಗಿ ರೂಪಿಸುವಲ್ಲಿ ಯಾವುದೇ ಮಾರ್ಗೋಪಾಯಗಳನ್ನು ಯೋಚಿಸದಿರುವುದು. ದುಷ್ಟರನ್ನು ಪೊರೆಯುವ ಖೂಳ ದೇಶವೇ ಆಗಲಿ, ದುಷ್ಟರಿರುವುದನ್ನು ತಿಳಿಯಲೂ ಆಗದ ಮೂರ್ಖ-ಅಸಮರ್ಥ ದೇಶವೇ ಆಗಲಿ, ತನ್ನ ದೇಶದಲ್ಲಿ ಪರಿಸರಕ್ಕೆ ಸಂಬಂಧಿಸಿದ ಯಾವುದೇ ಹಾನಿಕರ ಚಟುವಟಿಕೆ ನಡೆಸುತ್ತೇನೆಂಬ ಉದ್ಧಟತನದ ದೇಶವಾಗಲಿ, ಜಗತ್ತಿಗೆ ಯಾವತ್ತೂ ಮಾರಕ. ಅದನ್ನು ಸರಿದಾರಿಗೆ ತರುವುದು ಇಡೀ ಜಗತ್ತಿನ ರಾಷ್ಟ್ರಗಳ ಒಟ್ಟಾರೆ ಜವಾಬ್ದಾರಿ. ಇದು ಒಂದು ಬಲಾಢ್ಯ ದೇಶದ ವಿಶಿಷ್ಟ

ಜವಾಬ್ದಾರಿಯೂ ಅಲ್ಲ, ಅದರ ಅಧ್ಯಕ್ಷರ ವಿಶೇಷ ಕಾಳಜಿಯೂ ಆಗಬೇಕಿಲ್ಲ. ನಿಮಗೆ ಜಗತ್ತಿನ ಕ್ಷೇಮದ ಬಗ್ಗೆ ನಿಜವಾದ ಕಾಳಜಿ ಮತ್ತು ಪ್ರಾಮಾಣಿಕ ಬದ್ಧತೆ ಇದ್ದರೆ ನಿಮ್ಮ ಪ್ರಥಮ ಕರ್ತವ್ಯ ವಿಶ್ವಸಂಸ್ಥೆಯನ್ನು ಬಲಗೊಳಿಸಿ, ನಿರ್ಧಾರಗಳನ್ನು ಸಾಮೂಹಿಕ ನಾಯಕತ್ವದ ಮುಖಾಂತರ ತೆಗೆದುಕೊಳ್ಳುವುದು. ಇದೇನೂ ಸುಲಭವಾಗಿ ಆಗುವ ಕೆಲಸವಲ್ಲ, ಕಾರಣಗಳು ನಿಚ್ಚಳವಾಗಿವೆ. ಅಂತಹ ಯಾವುದೇ ಪ್ರಯತ್ನಗಳು ನಿಮ್ಮ ''ಹಿತಾಸಕ್ತಿ''ಗಳಿಗೆ ಮಾರಕವಾಗುವ ಸಾಧ್ಯತೆಗಳೇ ಹೆಚ್ಚು. ಅಷ್ಟೇ ಅಲ್ಲದೆ ಇವತ್ತಿಗೂ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ನಿಮ್ಮಂಥ ಕೇವಲ ಐದು ರಾಷ್ಟ್ರಗಳಿಗೆ ಶಾಶ್ವತ ಸದಸ್ಯತ್ವದೊಂದಿಗೆ ''ವೀಟೋ'' ಹಕ್ಕು ಇದೆ ಎಂದರೇನರ್ಥ ?

ರಷ್ಯಾದ ದೊಡ್ಡಣ್ಣ ತನ್ನ ಅಖಾಡಾದಲ್ಲಿ ತನ್ನ ಕಾಲು ತಾನೇ ಮುರಿದುಕೊಂಡು ಬಿದ್ದಮೇಲೆ ನೀವು ಜಗತ್ತಿನ ಏಕೈಕ ದೊಡ್ಡಣ್ಣ ಎಂದುಕೊಂಡಿರಿ ಮತ್ತು ದೊಡ್ಡತನವನ್ನು ಬಿಟ್ಟು ರೌಡಿತನಕ್ಕೆ ಗಂಟುಬಿದ್ದಿರಿ. ಈ ರೀತಿಯ ''ನುಗ್ಗಿ'' ಹೊಡಿಯಬೇಕಾದ ಪರಿಸ್ಥಿತಿ ಬಂದದ್ದಾದರೂ ಏಕೆ? ಏಕೆಂದರೆ ತಾಲಿಬಾನ್, ಅಲ್‌ಖೈದಾ, ಮುಜಾಹಿದ್ದೀನ್, ಎಲ್‌ಟಿಟಿಇ, ಮುಂತಾದವೆಲ್ಲಾ ತಯಾರಾಗಿದ್ದು ಒಂದಲ್ಲ ಒಂದು ದೇಶದ ಉತ್ತೇಜನದಿಂದ ಮತ್ತು ಒಂದು ವರ್ಗದ ಹಿತಾಸಕ್ತಿಗಾಗಿಯೇ ಅಲ್ಲವೆ? ಆಫ್ಘಾನಿಸ್ತಾನದಲ್ಲಿದ್ದ ಭೂತ ರಷ್ಯಾವನ್ನು ಓಡಿಸಲು ತಾಲಿಬಾನ್ ಎಂಬ ಬೇತಾಳವನ್ನು ಹುಟ್ಟುಹಾಕಿದಿರಿ. ಅದರ ವಿಷಸಂತಾನವೇ ಅಲ್‌ಖೈದ. ಆ ಬೇತಾಳ ಕೊನೆಗೆ ವಿಷಕಾರಿದ್ದು ನಿಮ್ಮ ಮೇಲೆಯೇ! ಆ ಸಂದರ್ಭದಲ್ಲಿ ನೀವೇನೋ ಎಚ್ಚೆತ್ತುಕೊಂಡಿರಿ, ಆದರೆ ಅಷ್ಟರಲ್ಲಿ ಸಾಕಷ್ಟು ಹಾನಿ ನಿಮಗೂ ಆಗಿತ್ತು, ಹಾಗೆಯೇ ವಿಶ್ವಕ್ಕೂ ಆಗಿತ್ತು.

ನಿಮ್ಮ ಯೋಧರು ''ನುಗ್ಗಿ ಹೊಡೆಯುವುದರಲ್ಲಿ'' ಪರಿಣತರು. ನಿಮ್ಮ ದೇಶದ ಉದ್ಯಮಿಗಳು ''ನುಸುಳಿ ಹೊಡೆಯುವುದರಲ್ಲಿ'' ಇನ್ನೂ ಹೆಚ್ಚು ಪರಿಣತರು. ನೋಡಿ, ೧೯೮೪ರಲ್ಲಿ ಭೂಪಾಲ್‌ನಲ್ಲಿ ನಡೆದ ಯೂನಿಯನ್ ಕಾರ್ಬೈಡ್ ದುರಂತದಲ್ಲಿ ಸತ್ತವರು ಸಾವಿರಾರು ಮಂದಿ, ಬದುಕಿಯೂ ಸತ್ತಂತಾದವರು ಹತ್ತಾರು ಸಾವಿರ ಜನ. ಇದಕ್ಕೆ ಸಿಗಬೇಕಾದ ಪರಿಹಾರ ಮತ್ತು ನ್ಯಾಯ ಇನ್ನೂ ನ್ಯಾಯಾಲಯಗಳಲ್ಲೇ ಒದ್ದಾಡುತ್ತಿದೆ.

ನಾವೇನೂ ಅಂಥ ಸಾಚಾ ಅಲ್ಲ, ಬಿಡಿ. ನಮ್ಮ ದೇಶದಲ್ಲೇ ನಮ್ಮ ಯೋಧರು ''ನುಗ್ಗಿ ಹೊಡೆಯುವ'' ಕೆಲಸವನ್ನು ಸಮರ್ಥವಾಗಿ ಸಾಕಷ್ಟು ವರ್ಷಗಳಿಂದ ಕಾಶ್ಮೀರ ಮತ್ತು ಮಣಿಪುರ ಮುಂತಾದ ಈಶಾನ್ಯ ರಾಜ್ಯಗಳಲ್ಲಿ ಕೇಂದ್ರ ಸರ್ಕಾರದ ವಿಶೇಷ ಕಾಯ್ದೆ ಅಡಿಯಲ್ಲಿ ನೆರವೇರಿಸುತ್ತಿದ್ದಾರೆ. ಒಮ್ಮೆ ರಾಜೀವ್ ಗಾಂಧಿ ಪ್ರಧಾನ ಮಂತ್ರಿಗಳಾಗಿದ್ದಾಗ ನಮ್ಮ ಯೋಧರನ್ನು ಪಕ್ಕದ ದೇಶ ಶ್ರೀಲಂಕಾದಲ್ಲಿ ಎಲ್‌ಟಿಟಿಇ ಶಿಬಿರಗಳ ಮೇಲೆ ''ನುಗ್ಗಿ ಹೊಡೆಯಲು'' ಕಳಿಸಿದ್ದರು. ಆದರೆ ಆಗ ನಮ್ಮ ಯೋಧರು ಎಲ್‌ಟಿಟಿಇ ಅವರಿಂದಲೇ ಇಕ್ಕಿಸಿಕೊಂಡು ಬಂದರು. ದುರಂತವೆಂದರೆ ಮುಂದೆ ಅದೇ ರಾಜೀವ್ ಗಾಂಧಿ ಎಲ್‌ಟಿಟಿಇಯ ''ನುಸುಳಿ ಹೊಡೆಯುವ'' ಪೆಟ್ಟಿಗೆ ಛಿದ್ರವಾಗಿಹೋದರು. ನೀವು ನಮ್ಮ ಮೇಲೆ ನುಗ್ಗಿ ಹೊಡೆಯುವಷ್ಟು ತಪ್ಪುಗಳನ್ನು ನಾವೆಂದೂ ಮಾಡುವುದಿಲ್ಲ ಎಂದು ನಿಮಗೆ



ನಮ್ಮ ಕೇಂದ್ರ ಸರ್ಕಾರಗಳು ಮೇಲಿಂದ ಮೇಲೆ ಮನವರಿಕೆ ಮಾಡಿ ತಮ್ಮ ನಮ್ರ ವಿಶ್ವಾಸವನ್ನು ನಿಮಗೆ ಕಾಲಕಾಲಕ್ಕೆ ಸಲ್ಲಿಸುತ್ತಲೇ ಬರುತ್ತಿವೆ.

ಒಬಾಮ ಅವರೇ, ನುಸುಳಿ ಹೊಡೆಯುವವರನ್ನು ಧಿಕ್ಕರಿಸಬೇಕು, ಅವರನ್ನು ಪೊರೆಯುವ ದೇಶಗಳನ್ನು ಮಣಿಸಬೇಕು. ಅಂತಹ ಗುಂಪುಗಳು ಮತ್ತು ಆಲೋಚನೆಗಳು ವಿಶ್ವಕ್ಕೇ ಅಪಾಯ ಎಂದಾದರೆ ನಾವು-ನೀವು ಇಡೀ ವಿಶ್ವವನ್ನು ಸರಿದಿಕ್ಕಿಗೆ ನಡೆಸಬೇಕಲ್ಲವೆ? ಇದರೊಟ್ಟಿಗೆ ಜಾಗತಿಕ ಜವಾಬ್ದಾರಿಯನ್ನು ಮತ್ತು ಇದರ ದಮನಕ್ಕೆ ಬೇಕಾಗುವ ಎಲ್ಲ ರೀತಿಯ ಸೌಲಭ್ಯಗಳನ್ನು ತಯಾರಿಗೊಳಿಸಬೇಕಲ್ಲವೆ? ನಿಮಗೆ ಹೊಡೆದವನು ಮಾತ್ರವೇ ದುಷ್ಟನಲ್ಲ ಎಂಬುದನ್ನು ನೊಬೆಲ್ ಶಾಂತಿ ಪ್ರಶಸ್ತಿಯನ್ನು ಹೇಗೋ ಪಡೆದುಕೊಂಡ ನೀವು ಅರ್ಥಮಾಡಿಕೊಳ್ಳಬೇಕೆಂದು ನಮ್ಮ ಮನವಿ. ಪಾಕೀಸ್ತಾನದಿಂದ ನಮ್ಮ ದೇಶಕ್ಕೆ ನಿರಂತರವಾಗಿ ನುಸುಳಿ ಬಂದು ದಾಂಧಲೆ ನಡೆಸುತ್ತಿರುವ ನೆರೆರಾಷ್ಟ್ರದ ತರಬೇತಿ ಹೊಂದಿದ ಭಯೋತ್ಪಾದಕರು ನಿಮಗೆ ಕಾಣುವುದಿಲ್ಲವೆ? ಲಾಹೋರಿನ ಫುಟ್‌ಪಾತ್ ಮೇಲೆ ನಡೆದಾಡುವ ಇರುವೆಗಳನ್ನು ಎಣಿಸುವಷ್ಟು ಸಮರ್ಥವಾದ ಉಪಗ್ರಹ ಜಾಲವನ್ನು ಹೊಂದಿರುವ ನೀವು ನಮ್ಮ ನೆರೆರಾಷ್ಟ್ರದಲ್ಲಿನ ಭಯೋತ್ಪಾದಕರ ತರಬೇತಿ ಶಿಬಿರಗಳನ್ನು ಕಾಣಲಾರಿರಾ? ಇಂಥ ಮೋಸ ಅಕ್ಷಮ್ಯವಲ್ಲವೆ? ಇದಕ್ಕಾಗಿ ಮತ್ತೆ ಪಾಕೀಸ್ತಾನಕ್ಕೆ ''ನುಗ್ಗಿ ಹೊಡೆಯಿರಿ'' ಎಂದೇನೂ ನಾವು ಕೇಳುವುದಿಲ್ಲ ಮತ್ತು ನಿಮ್ಮ ಮಾಹಿತಿಗಳಿಂದ ನಾವು ನುಗ್ಗಿ ಹೊಡೆಯುವುದೂ ಇಲ್ಲ. ಈ ಮಾಹಿತಿಯನ್ನು ಜಗತ್ತಿಗೇ ತೋರಿಸಿ, ಇಂತಹ ಕೆಲಸದಲ್ಲಿ ತೊಡಗಿರುವ ಯಾವುದೇ ದೇಶವನ್ನು ಒಟ್ಟಾರೆಯಾಗಿ ಬಹಿಷ್ಕರಿಸುವ ಮಟ್ಟಕ್ಕೆ ವಿಶ್ವಸಂಸ್ಥೆಯನ್ನು ಬಲಪಡಿಸೋಣ. ನೀವು ಮನಸ್ಸು ಮಾಡಬೇಕಷ್ಟೆ. ನಿಮಗೆ ಸಿಕ್ಕಿರುವ ನೊಬೆಲ್ ಪ್ರಶಸ್ತಿಯ ಆಶಯಗಳಿಗೆ ನಿರಂತರವಾಗಿ ಕೆಲಸ ಮಾಡುತ್ತೇನೆ, ಎಂದು ನೀವು ಪ್ರಶಸ್ತಿ ಸ್ವೀಕಾರ ಸಮಯದಲ್ಲಿ ತಿಳಿಸಿದ್ದಿರಿ. ಈಗ ಅದಕ್ಕೆ ಸಕಾಲ ಬಂದಿದೆ. ಮೊದಲನೇ ಹೆಜ್ಜೆಯಾಗಿ, ಭಯೋತ್ಪಾದಕರಿಗೆ ಅವಕಾಶ ನೀಡಿ ಮುಗ್ಧತೆಯನ್ನು ಪ್ರಕಟಿಸುತ್ತಿರುವ ಪಾಕೀಸ್ತಾನಕ್ಕೆ ನೀಡುತ್ತಿರುವ ಸೇನಾ ನೆರವನ್ನು ತಕ್ಷಣ ನಿಲ್ಲಿಸಿ; ಸಾಧ್ಯವಾದರೆ ಅದನ್ನು 'ದುಷ್ಟರಾಷ್ಟ್ರ' ಎಂದು ಘೋಷಿಸಿ. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ನಿಮಗಿರುವ ''ವೀಟೋ'' ಹಕ್ಕನ್ನು ತೆರವುಗೊಳಿಸಿ, ವಿಶ್ವದ ಎಲ್ಲ ರಾಷ್ಟ್ರಗಳಿಗೂ ಸಮಾನವಾದ ಹಕ್ಕನ್ನು ನೀಡಬೇಕಿದೆ. ವಿಶ್ವಸಂಸ್ಥೆಯಲ್ಲಿ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ಪ್ರತಿ ರಾಷ್ಟ್ರದ ''ಓಟಿನ ಶಕ್ತಿ'' ಆ ದೇಶದ ಜನಸಂಖ್ಯೆಗೆ ಅನುಗುಣವಾಗುವಂತೆ ಮಾಡಬೇಕಿದೆ. ಇದೆಲ್ಲಾ ನಿಮಗೆ ತಿಳಿಯದ್ದೇನಲ್ಲ. ಜಗತ್ತಿನ ಎಲ್ಲ ದೇಶಗಳ ಉದ್ಧಾರ ಮತ್ತು ಕ್ಷೇಮ ನಿಮ್ಮ ಪ್ರಾಮಾಣಿಕ ಕಾಳಜಿಯಾಗಿದ್ದರೆ ಹೀಗೆ ''ನುಗ್ಗಿ ಹೊಡೆಯುವ' ಪರಿಸ್ಥಿತಿಯೇ ಬಾರದಂತಹ ಜಗತ್ತನ್ನು ರೂಪಿಸುವ ನಿಟ್ಟಿನಲ್ಲಿ ಎಲ್ಲರೂ ಹೋರಾಡೋಣ. ಎಂದಾದರೂ ಒಂದು ದಿನ ಇದಕ್ಕೆ ಯಶಸ್ಸು ಸಿಗಲೇಬೇಕು ಅನ್ನುವುದೇ ನಮ್ಮ ಭರವಸೆ. ಇದು ಖಂಡಿತ ಸಾಧ್ಯ ಎಂಬ ನಂಬಿಕೆ ನಮಗಿದೆ. ನಮಸ್ಕಾರ.


**ಡಾ|| ತುಮಕೂರು ಚಂದ್ರಕಾಂತ**

ಭೌತಶಾಸ್ತ್ರದ ಪ್ರಾಧ್ಯಾಪಕರು, ನಂ. ೭, ೧೯ನೇ ಕ್ರಾಸ್, ಈಶ್ವರ ಲೇಔಟ್

ಇಂದಿರಾನಗರ ೨ನೇ ಹಂತ, ಬೆಂಗಳೂರು - ೫೬೦ ೦೩೮


## ಅತಿರೇಕ

ಅನ್ನದ ಹಸಿವು
ದುಡಿದು ದಣಿದವರಿಗಿದ್ದರೆ
ಹೆಣ್ಣು ಹೊನ್ನು ಮಣ್ಣುಗಳ
ಇಂಗದ ಹಸಿವು
ದುಡಿದವರನು ತುಳಿದು
ನಿತ್ಯ ನಿರಂತರ ಶೋಷಿಸುತ್ತಿರುವ
ಇಂದಿನ ರಾಜ ಮಹಾರಾಜರಿಗೆ

ಎನ್. ಶ್ರೀನಿವಾಸ್, ಮಂಡ್ಯ




## ಒಂದಿಷ್ಟು ಅರ್ಥಶಾಸ್ತ್ರ

# ರಿಸರ್ವ್ ಬ್ಯಾಂಕ್ ಎಷ್ಟು ಸ್ವಾಯತ್ತ? - ಒಂದು ಟಿಪ್ಪಣಿ

**ಕೆ. ಎಸ್. ಪಾರ್ಥಸಾರಥಿ**

'ರಿಸರ್ವ್ ಬ್ಯಾಂಕ್' ಎಂದರೆ 'ಕಾಪಾಡುವ ಬ್ಯಾಂಕ್' ಎಂದೆ ಅರ್ಥ. ಇದು ಅಸ್ತಿತ್ವಕ್ಕೆ ಬಂದುದು ಏಪ್ರಿಲ್ ೧, ೧೯೩೫ರಂದು, ಭಾರತ ಸರ್ಕಾರದ ಕಾಯಿದೆ - ೧೯೩೫ ಬಂದಂತೆ. ಅಂದೆ ವಸಾಹತು ಆಡಳಿತಕ್ಕೆ ಒಂದಿಷ್ಟು ಕಾನೂನುಬದ್ಧ ಸರ್ಕಾರದ ಸ್ವರೂಪವೂ ಬಂದದ್ದು. ಸ್ಥಾಪಿತವಾದಾಗ ಇದರ ಉದ್ದೇಶವಿದ್ದದ್ದು ಹಣಕಾಸು ಕ್ಷೇತ್ರದಲ್ಲಿ ಏರುಪೇರುಗಳು ಇಲ್ಲದ ಸಮಸ್ಥಿತಿಯನ್ನು ಕಾಪಾಡುವುದು ಮತ್ತು ಅದಕ್ಕೆ ಅನುಕೂಲಕರವಾದ ಹಣದ ನೀತಿಯನ್ನು ಜಾರಿಗೆ ತರುವುದು. **ಹಣದ ನೀತಿ (ಮಾನಿಟರಿ ಪಾಲಿಸಿ)** ಅಂದರೆ ನೋಟು, ಚಿಲ್ಲರೆ ಇವುಗಳನ್ನು ತಯಾರಿಸಿ, ಅವುಗಳು ಮೊತ್ತ ಪ್ರಮಾಣ ಎಷ್ಟಿರಬೇಕು, ಚಲಾವಣೆಗೆ ಹೇಗೆ, ಎಲ್ಲಿ ಯಾವಾಗ ಬಿಡಬೇಕು ಎನ್ನುವ ನೀತಿ. ಸರ್ಕಾರದ **ಹಣಕಾಸು ನೀತಿ** ಇದರಿಂದ ಭಿನ್ನವಾದುದು. ಅದರ ನೀತಿಯೂ ಹಣ ಚಲಾವಣೆಯನ್ನು ಪ್ರಭಾವಿಸುತ್ತದೆ. ಇದನ್ನು **ಫಿಸ್ಕಲ್ ಪಾಲಿಸಿ** ಎನ್ನುತ್ತಾರೆ. ಇದು ಸರ್ಕಾರದ ವರಮಾನ, ವೆಚ್ಚ ಕುರಿತ ನೀತಿ. ವರಮಾನವೆಂದರೆ ತೆರಿಗೆ ಮುಂತಾದ ನೀತಿ. ಅರ್ಥವ್ಯವಸ್ಥೆಯ ವಿಕಾಸಕ್ಕೆ ಸಹಾಯವಾಗುವಂತೆ ಅರ್ಥ ಶಾಸ್ತ್ರೀಯವಾಗಿ ಈ ನೀತಿಗಳು ರೂಪಿತವಾಗುತ್ತಿರುತ್ತವೆ; ಸರ್ಕಾರದ ಹಣಕಾಸು ಮಂತ್ರಾಲಯದ ಮೂಲಕ. ಹೀಗಾಗಿ ಸರ್ಕಾರದ ಮತ್ತು ರಿಸರ್ವ್ ಬ್ಯಾಂಕಿನ ನೀತಿಗಳೆರಡೂ ಹಣದ ಚಲಾವಣೆಯನ್ನು ಪ್ರಭಾವಿಸುತ್ತವೆ, ಕೇವಲ ರಿಸರ್ವ್ ಬ್ಯಾಂಕ್ ಅಲ್ಲ ಅನ್ನುವುದು ಸ್ಪಷ್ಟವಾಗುತ್ತದೆ. ಬ್ಯಾಂಕಿಗೆ ಬಡ್ಡಿಯದರ ಒಂದು ಅಸ್ತ್ರವಾದರೆ, ಸರ್ಕಾರಕ್ಕೆ ತೆರಿಗೆಯ ನೀತಿ ಒಂದು ಅಸ್ತ್ರ. ಒಂದು ಅರ್ಥವ್ಯವಸ್ಥೆಯೊಳಗೆ ನಗದು ಹಣ ಇಂತಿಷ್ಟು ಇದ್ದಾಗ, ಅದು ಕೊಳ್ಳಲು ಅಂತಿಷ್ಟು ಸರಕುಗಳನ್ನು ಬೇಡುತ್ತದೆ. ಅಲ್ಲಿ ಸಾಕಷ್ಟು ಸರಕುಗಳಿಲ್ಲದಿದ್ದರೆ ಇರುವ ಸರಕುಗಳ ಬೆಲೆ ಏರುತ್ತದೆ, ತುಟ್ಟಿಯಾಗುತ್ತದೆ. ಆಗ ಅದು **ಹಣದುಬ್ಬರ** ಎನಿಸಿಕೊಳ್ಳುತ್ತದೆ. ಉತ್ಪಾದನಾ ವ್ಯವಸ್ಥೆ ಸಾಕಷ್ಟು ಸರಕುಗಳನ್ನು ಪೂರೈಸಲು ಸ್ವಲ್ಪ ಸಮಯ ಆಗುತ್ತದೆ. ಅದು ಆಗದೆ ಹೋದರೆ ಬೆಲೆ ವಿಪರೀತ ಏರುತ್ತದೆ. ಆಗ ಹೆಚ್ಚು ಬಡ್ಡಿ ನೀಡುವ ಆಸೆ ತೋರಿಸಿ, ಉಳಿತಾಯವಾಗಿ ಹೆಚ್ಚಿನ ಹಣವನ್ನು ಸಂಗ್ರಹಿಸಿ, ಉಬ್ಬರವನ್ನು ಕಡಿಮೆಮಾಡಬಹುದು. ಉಳಿತಾಯ ಹಣ ಹೂಡಿಕೆಯಾಗಬಹುದು. ಆದರೆ ಹೆಚ್ಚು ಬಡ್ಡಿ ದರವೆಂದಾಗ ಹಾಲಿ ಹೂಡಿಕೆಗೆ ಬಂಡವಾಳದ ಬಡ್ಡಿ ಹೆಚ್ಚಿ, ಹೂಡಿಕೆ ಕಡಿಮೆಯಾಗಿ, ಉತ್ಪಾದನೆ ಕಡಿಮೆಯಾಗಿ ಬೆಳವಣಿಗೆಯ ದರ ಕುಂಠಿತವಾಗಿ – ಹೀಗೆ ಇದೊಂದು ಸರಪಣಿ. ಇವನ್ನು ಒಂದಿಷ್ಟು ಸರಿತೂಗಿಸುವುದೆ ಅರ್ಥನೀತಿ. ಇಷ್ಟು ಸಾಮಾನ್ಯ ತಿಳುವಳಿಕೆಯ ಹಿನ್ನೆಲೆಯಲ್ಲಿ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ಒಂದಿಷ್ಟು ಚರ್ಚಿಸುವುದು ಈ ಟಿಪ್ಪಣಿಯ ಉದ್ದೇಶ.

ರಿಸರ್ವ್ ಬ್ಯಾಂಕ್ ಈ ದೇಶದ ಹಣಕಾಸು ವ್ಯವಸ್ಥೆಯನ್ನು ರಕ್ಷಿಸುವಲ್ಲಿ ಅದರ ಸ್ವಾಯತ್ತತೆ ಸಂಪೂರ್ಣ ಎಂಬ ಭ್ರಮೆ ಅರ್ಥಶಾಸ್ತ್ರಜ್ಞರಲ್ಲಿ ಹಲವರಲ್ಲಿ ಹಾಗೂ ಆ ಶಾಸ್ತ್ರ ತಿಳಿಯದ ಸಾಮಾನ್ಯ ಪ್ರಜೆಗಳೆಲ್ಲರಲ್ಲೂ ಇದೆ. ನಮ್ಮ ''ಈ ತಿಂಗಳು'' ಅಂಕಣದಲ್ಲಿ ಈ ಬಗ್ಗೆ ಒಮ್ಮೆ ನಮ್ಮ ಕಳಕಳಿಯೂ ವ್ಯಕ್ತವಾಗಿತ್ತು. ರಿಸರ್ವ್ ಬ್ಯಾಂಕ್ ಏನು ಮಾಡುತ್ತದೆ, ಮಾಡಬಲ್ಲದು, ಅದು ಅದನ್ನು ಮಾಡಲು ಬಿಡುವುದಿಲ್ಲ ಏಕೆ, ಮುಂತಾದುವು ಸಾರ್ವಜನಿಕರ ಹಿತವನ್ನು ನೇರವಾಗಿ ತಟ್ಟುವ ವಿಷಯ. ಆದರೂ ಸಾರ್ವಜನಿಕರು ಈ ಬಗ್ಗೆ ಏನೂ ಮಾಡಲಾರರು. ಅದು ಆಳುತ್ತಿರುವ ರಾಜಕೀಯ ಪಕ್ಷದ, ಅದರ ವರ್ಗದ ಪ್ರಭಾವಕ್ಕೆ ಸಿಗುವುದು ಅನಿವಾರ್ಯ. ಈ ಅರ್ಥದಲ್ಲಿ ಅದರ 'ಸ್ವಾಯತ್ತತೆ' ಎನ್ನುವುದು ಕೇವಲ ಭ್ರಮೆಯಷ್ಟೆ. ಸರ್ಕಾರಕ್ಕೆ ಇನ್ನೂ ಹಲವಾರು ಜವಾಬ್ದಾರಿಗಳಿವೆಯಲ್ಲ! ರಿಸರ್ವ್ ಬ್ಯಾಂಕಿಗೆ ಅಂಥ ನೇರವಾದ ಜವಾಬ್ದಾರಿ ಇಲ್ಲ. ಅದು ಸರ್ಕಾರಕ್ಕೆ ಸಲಹೆ ನೀಡಬಹುದು, ಒತ್ತಾಯ ಮಾಡಲಾರದು. ಅದು ದೇಶದ ಬ್ಯಾಂಕುಗಳ ವ್ಯವಸ್ಥೆಯ ಮೇಲೆ ಪ್ರಭಾವ ಬೀರಬಹುದು ಒಂದಿಷ್ಟು. ಆದರೆ ದೇಶದ ಬಹುಭಾಗ ಬ್ಯಾಂಕ್ ವ್ಯವಸ್ಥೆಯ ಮಾಲಿಕನಾಗಿರುವುದು, ಸಾರ್ವಜನಿಕ ಬ್ಯಾಂಕುಗಳ ಮೂಲಕ, ಸರ್ಕಾರವೇ. ಇನ್ನು ರಿಸರ್ವ್ ಬ್ಯಾಂಕ್ ನೀಡುವ ಸಲಹೆಗಳು ಸರ್ಕಾರದ ಸಾಮಾಜಿಕ ರಾಜಕೀಯ ನೀತಿಗಳಿಗೆ ವಿರುದ್ಧವಾದರೆ ಅವಕ್ಕೆ ಮನ್ನಣೆಯೇ ಸಿಗದಿರಬಹುದು. ''ಹೊಸತು'' ಕಳಕಳಿ ವ್ಯಕ್ತಪಡಿಸಿದ ಸಂದರ್ಭ ಸರಿಯಾದುದೆ. ಈ ಸ್ವಾಯತ್ತತೆ ಮೊಟಕಾಗುವುದಕ್ಕೆ ಹಲವಾರು ಕಾರಣಗಳಿವೆ; ಅವು

ವ್ಯವಸ್ಥೆಯ ರಚನೆಗೆ ಸಂಬಂಧಪಟ್ಟಿದ್ದು ಮತ್ತೆ ಕೆಲವು ಸೀದಾ ರಾಜಕೀಯ ಸ್ವರೂಪದವು. ರಿಸರ್ವ್ ಬ್ಯಾಂಕ್ ನಮ್ಮ ಅರ್ಥವ್ಯವಸ್ಥೆಗೆ ಪೂರೈಸುವ ನಗದು ಹಣದ ಪ್ರಮಾಣವನ್ನು, ಅದರ ಚಲಾವಣೆಯ ವೇಗವನ್ನು, ನಿಯಂತ್ರಿಸಲು ಯತ್ನಿಸುತ್ತದೆ. ಆದರೆ ಸಂಪೂರ್ಣ ಸಫಲವಾಗುವುದಿಲ್ಲ. ಅಗತ್ಯಬಿದ್ದಂತೆ ಯಾವ ಪ್ರಮಾಣದಲ್ಲಿ, ಯಾವ ವೇಗದಲ್ಲಿ ಹಣದ ರಾಶಿ ವ್ಯವಸ್ಥೆಯೊಳಕ್ಕೆ ಹರಿದು ಬರುತ್ತದೆ ಅಥವಾ ಅದನ್ನು ಕಡಿಮೆ ಮಾಡಬಹುದು, ಒಂದಿಷ್ಟನ್ನು ಹಿಂತೆಗೆದುಕೊಳ್ಳಬಹುದು ಎನ್ನುವ ವಿಷಯ ಇದು. ರಿಸರ್ವ್ ಬ್ಯಾಂಕ್ ಇತರ ಬ್ಯಾಂಕುಗಳ ನಗದು ಅಗತ್ಯ ಪೂರೈಸುವಾಗ ತಾನು ನೀಡುವ ಹಣಕ್ಕೆ ಬಡ್ಡಿ ವಿಧಿಸುತ್ತದೆ. ಬ್ಯಾಂಕ್ ರೇಟ್ ಅಂತಾರೆ ಇದಕ್ಕೆ. ಬ್ಯಾಂಕುಗಳೂ ಪಡೆಯುವ ಡಿಪಾಸಿಟ್ ಎಲ್ಲವನ್ನೂ ಸಾಲವಾಗಿ ವ್ಯವಹಾರದಲ್ಲಿ ತೊಡಗಿಸುವಂತಿಲ್ಲ. ರಿಸರ್ವ್ ಬ್ಯಾಂಕ್ ನಿಗದಿಪಡಿಸಿದಂತೆ, ಒಂದಿಷ್ಟನ್ನು ರಿಸರ್ವ್ ಆಗಿ ಕಾಪಿಡಬೇಕು. ಇದನ್ನು **ರಿಸರ್ವ್ ರೇಶಿಯೋ** ಅಂದರೆ, ಅದೆಷ್ಟು ಶೇಕಡವನ್ನು ವ್ಯವಹಾರದಲ್ಲಿ ಬಳಸದೆ ಕಾದಿರಿಸಬೇಕು ಎನ್ನುವುದು, ಡಿಪಾಸಿಟ್ಟಿನ ನಗದು ಚಲಾವಣೆ ನೀತಿಗೆ ಸಂಬಂಧಪಟ್ಟ ವಿಷಯ. ರೀ ಫೈನಾನ್ಸ್, ರೀ ಡಿಸ್ಕೌಂಟ್ ಅನುಕೂಲಗಳು ಮತ್ತೊಂದು ನೀತಿ. ನೇರ ಮಾರುಕಟ್ಟೆಯಿಂದ ರಿಸರ್ವ್ ಬ್ಯಾಂಕ್ ಆಗಾಗ್ಗೆ ಬಾಂಡುಗಳನ್ನು ಮಾರಿ ಮಾರುಕಟ್ಟೆಯ ಚಲಾವಣೆಯಲ್ಲಿರುವ ಹೆಚ್ಚು ಹಣವನ್ನು ಹಿಂದೆ ತೆಗೆದುಕೊಳ್ಳಬಹುದು – **ಓಪನ್ ಮಾರ್ಕೆಟ್ ಆಪರೇಶನ್ಸ್** ಎನ್ನುತ್ತಾರೆ ಇದಕ್ಕೆ. ವಾಣಿಜ್ಯ ಬ್ಯಾಂಕುಗಳು ಎಷ್ಟು ಸಾಲ ಹೇಗೆ ಯಾವ ಕ್ಷೇತ್ರಕ್ಕೆ ನೀಡಬಹುದು ಮುಂತಾದುವುಗಳ ನಿಯಂತ್ರಣ ಮಾಡಬಹುದು ರಿಸರ್ವ್ ಬ್ಯಾಂಕ್. ಇಲ್ಲಿ ಪಟ್ಟಿ ಮಾಡಿದ ತಂತ್ರಗಳೆಲ್ಲ ಒಟ್ಟಾರೆ ಚಲಾವಣೆಯಲ್ಲಿರುವ ಹಣದ ರಾಶಿಯನ್ನು ನಿಯಂತ್ರಿಸುತ್ತವೆ. ಇದು ನಿರಂತರ ನಡೆಯುತ್ತಲೇ ಇರುತ್ತದೆ. ಹೇಗೆ, ಯಾವಾಗ, ಎಷ್ಟು ಎನ್ನುವುದನ್ನು ರಿಸರ್ವ್ ಬ್ಯಾಂಕಿನ ಆರ್ಥಿಕ ಸಂಶೋಧನಾ ವಿಭಾಗ, ಸದಾ ವಸ್ತುಸ್ಥಿತಿಯ ಮೇಲೆ ನಿಗಾ ಇಟ್ಟು, ಸಲಹೆ ಮಾಡುತ್ತಿರುತ್ತದೆ. ಸಾಮಾನ್ಯವಾಗಿ ರಿಸರ್ವ್ ಬ್ಯಾಂಕ್ ಮೂರು ತಿಂಗಳಿಗೊಮ್ಮೆ ತನ್ನ ನೀತಿಯನ್ನು ವಿಮರ್ಶಿಸುತ್ತದೆ. ಆದರೆ ಕಳೆದ ಒಂದು ವರ್ಷದಲ್ಲಿ ಹತ್ತು ಬಾರಿ ಬಡ್ಡಿದರ, ಕ್ಯಾಷ್ ರಿಸರ್ವ್ ರೇಶಿಯೋ ಇವುಗಳನ್ನು ರಿಸರ್ವ್ ಬ್ಯಾಂಕ್ ಪರಿಷ್ಕರಿಸಿ ಹೆಚ್ಚಿಸಿತು. ಅದು ತನ್ಮೂಲಕ ದಿನೇ ದಿನೇ ಏರುತ್ತಿರುವ ಹಣದುಬ್ಬರ ಅಥವಾ ಅತಿ ಹೆಚ್ಚಿನಿಸುವಷ್ಟು ಹಣದ ರಾಶಿ ಚಲಾವಣೆಯಲ್ಲಿ ಇರುವುದನ್ನು, ಹಾಗೆಯೇ ನಿಯಂತ್ರಣಕ್ಕೆ ಸಿಗದಿರುವ ಬೆಲೆ ಏರಿಕೆಯನ್ನು ಆದಷ್ಟು ತಡೆಯಲು, ನಿಯಂತ್ರಿಸಲು ಹೆಣಗಾಡುತ್ತಿದೆ. ಈ ಸಾಂಪ್ರದಾಯಿಕ ಮಾರ್ಗಗಳಿಂದ ಅದು ಈ ನಿಯಂತ್ರಣ ಮಾಡಲಾರದೆ ವಿಫಲವಾಗುತ್ತಿದೆ. ಇದಕ್ಕೆ ಬ್ಯಾಂಕಿಗೆ ಮೀರಿದ ಕಾರಣಗಳಿವೆ. ಅದರ ಹಲವು ಸಲಹೆಗಳನ್ನು ಸರ್ಕಾರ ಸ್ವೀಕರಿಸುವುದಕ್ಕೆ, ಸ್ವೀಕರಿಸದಿರುವುದಕ್ಕೆ ಸರ್ಕಾರಕ್ಕೆ ತನ್ನದೇ ರಾಜಕೀಯ, ಸಾಮಾಜಿಕ ಒತ್ತಾಯಗಳಿರುತ್ತವೆ. ಹೀಗಾಗಿ ರಿಸರ್ವ್ ಬ್ಯಾಂಕಿನ ಜವಾಬ್ದಾರಿ ಮತ್ತು ಸ್ವಾಯತ್ತತೆ ಎನ್ನುವುದು ಒಂದು ಮಿತಿಯೊಳಗಷ್ಟೆ ವಿನಃ ಅದು ನಿರಂಕುಶವಾದುದಲ್ಲ.

ರಿಸರ್ವ್ ಬ್ಯಾಂಕ್ ಪ್ರಯತ್ನದ ಜತೆಗೆ ಸರ್ಕಾರವೂ ತನ್ನ ಕೈ ಜೋಡಿಸಬೇಕು ಈ ನೀತಿಗಳು ಒಂದಿಷ್ಟು ಜಯಪ್ರದವಾಗಬೇಕಾದರೆ. ಅದು ರಿಸರ್ವ್ ಬ್ಯಾಂಕ್ ನೀತಿಗೆ ತೀರ ವಿರುದ್ಧವಲ್ಲದಂತೆ ಬಜೆಟ್‌ಅನ್ನು ನಿರ್ವಹಿಸಬೇಕು; ವಿದೇಶೀ ವಿನಿಮಯದ ಆಮದು-ರಫ್ತಿನ ಲೆಕ್ಕದೊಡನೆ ಆದಷ್ಟು ಸಮತೋಲನವಿರಬೇಕು. ಇದು ಸಾಧ್ಯವಾಗದಿರುವುದಕ್ಕೆ ಹಲವಾರು ಕಾರಣಗಳನ್ನು ನೀಡಬಹುದು. ಹಣದ ಮುಗ್ಗಟ್ಟಿನ ಕಾರಣ ನೀಡಿ ಸರ್ಕಾರ ರಾಷ್ಟ್ರರಕ್ಷಣೆಯ ವೆಚ್ಚವನ್ನು ಕಡಿಮೆ ಮಾಡಲಾದೀತೆ? ದೈನಂದಿನ ಆಡಳಿತಾತ್ಮಕ ಜವಾಬ್ದಾರಿಗಳನ್ನು ವಿಪರೀತ ಕಡಿತ ಮಾಡಿಕೊಳ್ಳಲಾದೀತೆ? ಸಾಮಾಜಿಕ ಕ್ಷೇಮದ ಕ್ಷೇತ್ರ, ಮೂಲಭೂತ ಅಗತ್ಯಗಳ ಅಭಿವೃದ್ಧಿಗಾಗಿ ವೆಚ್ಚ, ಹೂಡಿಕೆ, ಇವುಗಳೆಲ್ಲ ಸರ್ಕಾರದ ಅಗತ್ಯಗಳು, ರಾಜಕೀಯ - ಸಾಮಾಜಿಕ ಜವಾಬ್ದಾರಿಗಳು. ಇವಕ್ಕೆಲ್ಲ ಒಂದು ನಿರ್ದಿಷ್ಟ ಪ್ರಮಾಣದ ಸಾರ್ವಜನಿಕ ವೆಚ್ಚವನ್ನು ಮಾಡಿಯೇ ತೀರಬೇಕು. ಇವುಗಳಲ್ಲಿ ಕಡಿತವೆಂದರೆ ಹಣದುಬ್ಬರ ಕಡಿಮೆಯಾಗಬಹುದು. ಆದರೆ ಅದು ರಾಜಕೀಯವಾಗಿ ಸಾಧ್ಯವೇ? ಬಂಡವಾಳದ ಪರವಾದ ನಮ್ಮ ಇಂದಿನ ವ್ಯವಸ್ಥೆಯೊಳಗೆ ಈ ಪ್ರಶ್ನೆಗಳಿಗೆ ಹೀಗೆಲ್ಲಾ ಉತ್ತರಿಸಬಹುದು: ಇದೆಲ್ಲಾ ಸರ್ಕಾರದ ಕೆಲಸವಲ್ಲ, ಬಿಟ್ಟುಬಿಡಿ ಮುಕ್ತ ಮಾರುಕಟ್ಟೆಯ ಶಕ್ತಿಗಳಿಗೆ ಎನ್ನಬಹುದು. ಹಾಗೆ ಮಾಡಿದರೆ ಆಡಳಿತಾರೂಢ ಪಕ್ಷ ಮತ ಕಳೆದುಕೊಳ್ಳುವ ಹೆದರಿಕೆ! ಹೀಗಾಗಿ ಅದು ಬಂಡವಾಳ ನೀತಿಯೂ ಅಲ್ಲದ ಸಮಾಜವಾದೀಯವೂ ಅಲ್ಲದ ಅರೆಕೊರೆ ಅಸಮರ್ಪಕ ನೀತಿಯನ್ನು ಕೈಗೊಳ್ಳುತ್ತದೆ; ಪರಿಣಾಮವೂ ಅರೆಕೊರೆ, ಅಸಮರ್ಪಕವಾಗುತ್ತದೆ. ಸಮಾಜವಾದಿಗಳು ಬೇರೆಯೇ ಪರಿಹಾರ ನೀಡಬಹುದು. ವಿದೇಶಾಂಗ ನೀತಿಯನ್ನು ಸರಿಯಾಗಿ ನಡೆಸಿದ್ದರೆ ಈ ರಕ್ಷಣಾ ವೆಚ್ಚ ಕಡಿಮೆಯಾಗುತ್ತಿತ್ತೆಂದು ತೀರ್ಪು ನೀಡಿ ಬಿಡಬಹುದು. ರಕ್ಷಣಾ ವೆಚ್ಚದಲ್ಲಿ ವಾಸ್ತವವಾಗಿ ನಡೆಯುವ ಎಲ್ಲ ಭ್ರಷ್ಟಾಚಾರವನ್ನು ಹೊರಗೆಡವಬಹುದು. ಮಾರುಕಟ್ಟೆಯನ್ನು ನಿಯಂತ್ರಿಸಿ, ಬೆಲೆ ತಾನಾಗೆ ಕಡಿಮೆಯಾಗುತ್ತದೆ; ಕಾಳಸಂತೆಯನ್ನು ಹತ್ತಿಕ್ಕಿ, ಎನ್ನಬಹುದು. ಉತ್ಪಾದನಾ ಸಾಮರ್ಥ್ಯ ಇನ್ನೂ ಇದ್ದರೂ, ಬೇಕೆಂತಲೇ ಕಡಿಮೆ ಉತ್ಪಾದಿಸಿ, ಬೆಲೆ ನಿಯಂತ್ರಿಸುವವರತ್ತ ಕೆಂಗಣ್ಣು ಬೀರಬಹುದು. ಹೀಗೆ ಈ ಎಲ್ಲ ಮತಗಳ ಹಿಂದೆ ರಾಜಕೀಯ ಬಹುಮತದ ಒತ್ತಾಯದ ಶಕ್ತಿ ಇಲ್ಲದವರ ಮಾತಿಗೆ ಏನು ಬೆಲೆ! ಪರಿಣಾಮವಾಗಿ ಪ್ರಸ್ತುತ ವ್ಯವಸ್ಥೆಯಲ್ಲಿ ಮೂಲಭೂತ ಪರಿವರ್ತನೆ ಇಲ್ಲವೆಂದಾದಾಗ, ರಿಸರ್ವ್ ಬ್ಯಾಂಕ್ ಅಥವಾ ಅಂಥ ಇತರ ಸಂಸ್ಥೆಗಳ ನೀತಿ ವೈಫಲ್ಯಗಳನ್ನು ಸಹಜವೆಂದೇ ಸ್ವೀಕರಿಸಬೇಕಾಗುತ್ತದೆ. ಅವು ಒಂದಿಷ್ಟು ಜಯಪ್ರದವಾಗಿದ್ದರೆ ಮೆಚ್ಚಲೂ ಬೇಕಾಗುತ್ತದೆ. ಇರುವ ವ್ಯವಸ್ಥೆಯೊಳಗೆ ಅವುಗಳನ್ನು ವಿಮರ್ಶಿಸಬೇಕಾಗುತ್ತದೆ.

ಯಾವುದೇ ಪ್ರತಿಗಾಮಿ ಸರ್ಕಾರವೂ, ಬೂರ್ಷ್ವಾ ಪ್ರಜಾಪ್ರಭುತ್ವದೊಳಗೂ, ಉತ್ತಮ ಹಣಕಾಸು ನೀತಿಗಾಗಿ ರೈತರಿಗೆ, ಸಂಘಟಿತ ಕಾರ್ಮಿಕರಿಗೆ, ಕೈಗಾರಿಕೋದ್ಯಮಿಗಳಿಗೆ, ನಿಗದಿತ ಕಡಿಮೆ ಆದಾಯ ಉಳ್ಳವರಿಗೆ ತೊಂದರೆಯಾಗುವಂಥ ನೀತಿಗಳನ್ನು ಕೈಗೊಳ್ಳಲು ಸಾಮಾನ್ಯವಾಗಿ ಹಿಂಜರಿಯುತ್ತವೆ. ಈಗಾಗಲೇ ಕೆಲವು ಸವಲತ್ತುಗಳನ್ನು ಕೆಲವರು ಅನುಭವಿಸುತ್ತಿದ್ದರೆ, ಅದು ಆರ್ಥಿಕ ನೀತಿಯಾಗಿ ಸರಿಯಾಗಿಲ್ಲದಿದ್ದರೂ, ಆ ಸವಲತ್ತುಗಳನ್ನು ಮೊಟಕುಗೊಳಿಸಲು ಹೆದರುತ್ತವೆ. ಐಟಿ ಕ್ಷೇತ್ರಕ್ಕೆ ಇಂದು ತೆರಿಗೆ ವಿನಾಯ್ತಿ ಮುಂತಾದ ಪ್ರೋತ್ಸಾಹ ಬೇಕಾಗಿಲ್ಲ, ಆದರೂ ಅವು ಮುಂದುವರಿಯುತ್ತಿವೆಯಷ್ಟೆ? ಹತ್ತಾರು ಹಿತಾಸಕ್ತಿಗಳಿಗೆ ಹತ್ತಾರು ಸವಲತ್ತುಗಳಿದ್ದರೆ, ಯಾರದ್ದನ್ನು ನಿಲ್ಲಿಸಿ, ಅವರ ವಿರೋಧ ಕಟ್ಟಿಕೊಳ್ಳುವುದು ಎನ್ನುವ ತೀರ್ಮಾನ ಕಷ್ಟವಾದುದು. ಹಣದ ಕೊರತೆಯನ್ನು ಸರ್ಕಾರ ಹೆಚ್ಚಿನ ತೆರಿಗೆಯಿಂದ ನೀಗಿಕೊಳ್ಳುವುದು ಅಷ್ಟು ಸುಲಭವಲ್ಲ. ನೇರ ತೆರಿಗೆಗಳು ಇನ್ನು ಹೆಚ್ಚು ವಿಸ್ತಾರ ಸಾಧ್ಯವಿಲ್ಲವೆನ್ನುವಷ್ಟು ಸ್ಥಾಪಿತವಾಗಿಬಿಟ್ಟಿವೆ. ಪರೋಕ್ಷ ತೆರಿಗೆಗಳು ಸಾಧಾರಣ ಜನರನ್ನು ಮತ್ತೂ ಹಿಂಡುತ್ತವೆ. ಅಂಥ ತೆರಿಗೆಗಳ ಹೆಚ್ಚಳ, ಬೇಡಿಕೆಯನ್ನು ಮತ್ತು ಉತ್ಪಾದನೆಯನ್ನೇ ತಗ್ಗಿಸಿ, ಹೊಸ ಸಮಸ್ಯೆಗಳನ್ನು ಹುಟ್ಟಿಹಾಕಬಹುದು. ನಮ್ಮ ಸಾರ್ವಜನಿಕ ಉದ್ದಿಮೆಗಳ ಹೂಡಿಕೆಯ ಪ್ರಮಾಣ ನೋಡಿದರೆ ಅವು ಇಂದೂ ಬಹುದೊಡ್ಡ ಪ್ರಮಾಣದವು. ಆದರೆ ಅವು ಹಲವಾರು ಕಾರಣಗಳಿಂದ ಸಾಕಷ್ಟು ಆದಾಯ ತರುತ್ತಿಲ್ಲ ಸರ್ಕಾರಕ್ಕೆ. ಸೈದ್ಧಾಂತಿಕ ವಿರೋಧಗಳಿಂದಾಗಿ ಅವು ಹಾಳಾಗುತ್ತಿರುವುದು ಬೇರೆಯೇ ಚರ್ಚೆ. ಅರ್ಥಶಾಸ್ತ್ರವು ಪರಿಸ್ಥಿತಿಯ ವಾಸ್ತವವನ್ನು ಗ್ರಹಿಸಬೇಕಷ್ಟೆ. ಪ್ರಬಲವಾದ, ಸಮರ್ಥವಾದ ಮತ್ತು ಪ್ರಾಮಾಣಿಕವಾದ ಆಡಳಿತಾತ್ಮಕ ಪ್ರಯತ್ನಗಳಿದ್ದರೆ ಇವನ್ನು ಸರಿಪಡಿಸಬಹುದಿತ್ತು. ಆದರೆ ಅವು ಇಲ್ಲವೆಂಬುದು ವಾಸ್ತವ. ಈ ಎಲ್ಲ ಲಭ್ಯ ಮಾರ್ಗಗಳನ್ನು ತ್ಯಜಿಸಿ ಆಳುವ ಸರ್ಕಾರ ತನಗೆ ಸುಲಭವಾದ ಬ್ಯಾಂಕಿಂಗ್ ಕ್ಷೇತ್ರಕ್ಕೆ ಪ್ರವೇಶಿಸಿ, ಅದು ಆರ್ಥಿಕ ನೀತಿಯಾಗಿ ಸರಿಯಲ್ಲದಿದ್ದರೂ, ತನ್ನ ಕೊರತೆಗಳನ್ನು ನೀಗಿಸಿಕೊಳ್ಳಲು ಮುಂದುವರಿಯುತ್ತದೆ. ರಿಸರ್ವ್ ಬ್ಯಾಂಕ್ ಕೇವಲ ಮೂಕಪ್ರೇಕ್ಷಕನಾಗಿರಬೇಕಾಗುತ್ತದೆ. ಅತಿ ಹೆಚ್ಚಿನ ಕೊರತೆಯ ಬಜೆಟ್

## ಅಭಿನಂದನೆಗಳು



ಡಾ|| ವಿ. ಜಿ. ಅಂದಾನಿ ಹಾಗೂ ಶ್ರೀ ಚಂದ್ರನಾಥ ಆಚಾರ್ಯ
ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು

ಸರಿಯಲ್ಲ ಎಂದು ಉಪದೇಶಿಸಿ ವಿರಮಿಸುತ್ತದೆಯಷ್ಟೆ. ಚಲಾವಣೆಯಲ್ಲಿನ ಹಣದ ರಾಶಿ ವಿಪರೀತ ಹೆಚ್ಚಿ ಹಣದುಬ್ಬರ, ಬೆಲೆ ಏರಿಕೆಯ ಪರಿಣಾಮವಾಗುತ್ತದೆ. ಬೆಲೆ ಏರಿಕೆಗೆ ಇದೊಂದೇ ಕಾರಣವಲ್ಲ. ಆದರೆ ಇದು ಒಂದು ಮುಖ್ಯ ಕಾರಣ. ಈಗ ಆಗಿರುವಂತೆ ಹೆಚ್ಚು, ನಗದು ಚಲಾವಣೆಯ ಕಾರಣವನ್ನು ಸರಿಪಡಿಸಿದರೂ ಬೆಲೆ ಏರಿಕೆ ನಿಯಂತ್ರಣಕ್ಕೆ ಸಿಗದಿರಬಹುದು.

ಹಾಗೆಯೆ ಬೆಲೆ ಏರಿಕೆಯು, ಅರ್ಥವ್ಯವಸ್ಥೆ ವಿಪರೀತ ವೇಗದಲ್ಲಿ ಬೆಳೆಯುತ್ತಿರುವುದರ, ವಿಕಾಸವಾಗುತ್ತಿರುವುದರ, ಲಕ್ಷಣವೆಂದೂ, ಆದ್ದರಿಂದ ಬಡ್ಡಿಯ ದರವನ್ನು ಏರಿಸುವುದು, ತೆರಿಗೆ ಏರಿಸುವುದು ಬೆಳವಣಿಗೆಯನ್ನು ಕುಗ್ಗಿಸುತ್ತದೆಂದೂ ಹೇಳುವುದು ಬಂಡವಾಳದ ಅರ್ಥಶಾಸ್ತ್ರ ಬೆಲೆ ಏರಿಕೆಗೆ ಕಾರಣ ಹಣದ ಚಲಾವಣೆಯ ನೀತಿಯಲ್ಲ, ಬೇಡಿಕೆಗೆ ತಕ್ಕ ಸರಕುಗಳ ಪೂರೈಕೆ ಸಾಲದು ಎನ್ನುತ್ತಾರೆ. ಹಾಗಾದರೆ ಬೆಳವಣಿಗೆಯಲ್ಲಿ ಉತ್ಪಾದನೆ ಆಗುತ್ತಿರುವ ಸರಕುಗಳೇ ಬೇರೆಯವೆ? ಸಾಮಾನ್ಯ ಜನತೆಗೆ ಬೇಡದ್ದೆ? ಹೀಗೆ ಇದೆಲ್ಲ ಕಗ್ಗಂಟಾಗಿದೆ. ಇಂದು ಬ್ಯಾಂಕುಗಳು ಡಿಪಾಸಿಟ್‌ನ ಶೇಕಡ ಇಂತಿಷ್ಟನ್ನು ಬಳಸುವಂತಿಲ್ಲ, ಸರ್ಕಾರದಲ್ಲಿ ನಿಕ್ಷೇಪವಾಗಿಡಬೇಕು ಎನ್ನುವ ನೀತಿ ಇದೆ. ಹಾಗಾಗಿ ಬ್ಯಾಂಕುಗಳ ಅಷ್ಟು ಹಣವನ್ನು ನೇರವಾಗಿ ಸರ್ಕಾರ ತಾನು ತಾತ್ಕಾಲಿಕವಾಗಿ ಬಳಸಿಕೊಳ್ಳುತ್ತೇನೆ ಅಂದರೆ ಹೇಗೆ? ಅಲ್ಪಕಾಲೀನ ಮತ್ತು ಮಧ್ಯಕಾಲೀನ ಸಾಲಗಳನ್ನು ಬ್ಯಾಂಕುಗಳು ಹೆಚ್ಚು ನೀಡದಿರಲಿ ಎಂದು ಈ ಕಟ್ಟುಪಾಡಿನ ಉದ್ದೇಶ. ಆದರೆ ಸರ್ಕಾರದ ಮೂಲಕ ಅಷ್ಟು ಹಣ ಚಲಾವಣೆಗಂತೂ ಬರುತ್ತದೆಯಷ್ಟೆ? ಇದರ ಜೊತೆಗೆ ಆಗಾಗ್ಗೆ ಸರ್ಕಾರ ತತ್ಕಾಲೀನ ನಗದು ಅಗತ್ಯಕ್ಕಾಗಿ ಟ್ರೆಜರಿ ಬಿಲ್‌ಗಳನ್ನು ಬ್ಯಾಂಕಿಗೆ ಮಾರಿ ಅದನ್ನು ಪಡೆಯುತ್ತದೆ. ಇದಲ್ಲದೆ ಬಜೆಟ್ ಮಾಡುವವರು ಇಲ್ಲಿಯವರೆಗೂ ಗಮನಿಸಿದಂತೆ ಸರ್ಕಾರದ ಆದಾಯವನ್ನು ವಾಸ್ತವಕ್ಕಿಂತ ಹೆಚ್ಚೆಂದು ತೋರಿಸುವುದು, ಸರ್ಕಾರದ ವೆಚ್ಚವನ್ನು ವಾಸ್ತವಕ್ಕಿಂತ ಕಡಿಮೆ ಎಂದು ಅಂದಾಜು ಮಾಡುವುದು ಪರಿಪಾಟಲಾಗಿದೆ. ಇವೆಲ್ಲಾ ಹಣದ ಚಲಾವಣೆಯ ಮೊತ್ತಕ್ಕೆ ಸಂಬಂಧಪಟ್ಟ ರಿಸರ್ವ್ ಬ್ಯಾಂಕ್‌ನ ಲೆಕ್ಕವನ್ನು ತೀವ್ರವಾಗಿ ಏರುಪೇರಾಗಿಸುತ್ತವೆ. ರಿಸರ್ವ್ ಬ್ಯಾಂಕ್ ಚಲಾವಣೆಯಲ್ಲಿ ಇರುವ ಹಣವನ್ನು ಹಿಂದೆ ತೆಗೆದುಕೊಳ್ಳಲು ತನ್ನಲ್ಲಿರುವ ಟ್ರೆಜರಿ ಬಿಲ್‌ಗಳನ್ನು (ಹುಂಡಿಗಳನ್ನು) ಮಾರುಕಟ್ಟೆಯಲ್ಲಿ ಮಾರಬಹುದು. ಆದರೆ ಮಾರುವುದಕ್ಕಿಂತ ಹೆಚ್ಚಾಗಿ ಸರ್ಕಾರದಿಂದ ಅಂಥ ಬಿಲ್‌ಗಳನ್ನು ಕೊಳ್ಳುವುದೇ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ಹೋದರೆ ಈ ಹುಂಡಿಗಳನ್ನು ಮಾರುಕಟ್ಟೆಯಲ್ಲಿ ಮಾರುವುದರಿಂದ ಹಣ ಚಲಾವಣೆ ಸಂಕುಚಿತವಾಗುವುದೇ ಇಲ್ಲ. ವಿದೇಶೀ ಹೂಡಿಕೆಯ ಹಣ ಒಳಹರಿದರೆ ಈ ಪರಿಸ್ಥಿತಿ ಸ್ವಲ್ಪ ತೂಗಿಸಬಹುದು. ಆದರೆ ಅದು ಸರ್ಕಾರದ ನೀತಿಯನ್ನು ಅವಲಂಬಿಸಿರುತ್ತದೆ. ಹಾಗೂ ವಿದೇಶೀ ಸಾಲಗಳು ಮುಕ್ತವಾಗಿ ಬರುವುದಿಲ್ಲ. ಅವರು ಸಾಮಾನ್ಯವಾಗಿ ಬಂಡವಾಳಶಾಹಿ ಮಾದರಿಯ ಆರ್ಥಿಕ ಉದಾರೀಕರಣದ ನೀತಿಗೆ ಒತ್ತಾಯಿಸಿ ಸಾಲ ನೀಡುವುದು. ಹಾಗೆಯೇ ಅಂಥ ಉದಾರೀಕರಣ ನೀತಿ ಸರ್ಕಾರದ ಸಾಮಾಜಿಕ ನೀತಿಗೆ ವಿರುದ್ಧವಾಗಿರುತ್ತವೆ. ಈಗಷ್ಟೆ ಯೂರೋ ಯೂನಿಯನ್




ಗ್ರೀಸ್ ದೇಶಕ್ಕೆ ಸಾಲ ನೀಡಲು ಒಂದು ಷರತ್ತು ಹಾಕಿದೆ. ಆ ಸರ್ಕಾರದ ಆದಾಯ ವಸೂಲಿಯ ಕೆಲಸವನ್ನು ತಾವೇ ನೇರವಾಗಿ ಮಾಡಬೇಕಂತೆ! ಆಗೇನಾದೀತು? ಇಲ್ಲಿರುವ ದ್ವಂದ್ವ: ಸಾರ್ವಭೌಮತೆಯೋ! ಅಂತರರಾಷ್ಟ್ರೀಯತೆಯೋ!

ಹೀಗೆ ರಿಸರ್ವ್ ಬ್ಯಾಂಕ್ ಮುಕ್ತವಾಗಿ ತನ್ನ ನೀತಿಗಳನ್ನು ಅನುಸರಿಸಲು ಸಂಪೂರ್ಣ ಸ್ವತಂತ್ರವಲ್ಲ. ಅರ್ಥಶಾಸ್ತ್ರೀಯವಾಗಿ ಸಾಧುವಾದ ಮೇಲೆ ಚರ್ಚಿಸಿದ ಮಾರ್ಗಗಳು ಬಹುತೇಕ ಅದಕ್ಕೆ ಲಭ್ಯವಾಗದೆ ಹೋದಾಗ, ಅದು ಇನ್ನೇನು ಮಾಡಬಹುದು? ಬ್ಯಾಂಕುಗಳು ನೀಡುವ ವಾಣಿಜ್ಯ ಸಾಲಗಳ ಪ್ರಮಾಣ, ಷರತ್ತುಗಳನ್ನು ಒಂದಿಷ್ಟು ನಿಯಂತ್ರಿಸಿ, ಹಣದ ಸರಬರಾಜನ್ನು ತಡೆಹಿಡಿಯಬಹುದು – ಅಥವಾ ಇನ್ನೂ ಸರಿಯಾಗಿ ಹೇಳುವುದಾದರೆ ಹಣ ಸರಬರಾಜಿನ ವೇಗವನ್ನು (ವೆಲಾಸಿಟಿ ಆಫ್ ಮನಿ ಸರ್ಕುಲೇಷನ್) ನಿಯಂತ್ರಿಸಬಹುದು – ಹೆಚ್ಚಿಸಬಹುದು, ಕುಗ್ಗಿಸಬಹುದು; ಕೆಲವು ಆಡಳಿತಾತ್ಮಕ ಕ್ರಮಗಳನ್ನು ಕೈಗೊಳ್ಳಬಹುದು. ತನ್ನ ಹಿರಿಯ ಅಂತಸ್ತಿನಿಂದಾಗಿ ನೈತಿಕವಾಗಿ ಒಪ್ಪಲೇಬೇಕಾಗುವ ಉಪದೇಶಗಳನ್ನು ನೀಡಬಹುದು. "ಇಂಥ ಸಾಲಗಳನ್ನು ಹೆಚ್ಚು ನೀಡಬೇಡೀಪ್ಪಾ, ನೀಡುವ ಸಾಲದ ಮೊತ್ತವನ್ನು ಒಂದಿಷ್ಟು ಯೋಜಿತವಾಗಿ ಹಂತ ಹಂತವಾಗಿ ನೀಡಿ, ಆದ್ಯತೆಯ ವಿಭಾಗಗಳಿಗೆ ಮೊದಲು, ಹೆಚ್ಚಾಗಿ ಸಾಲ ನೀಡಿ" ಮುಂತಾದುವು ಇಂಥ ಉಪದೇಶಗಳು. ಹೀಗೆ ರಿಸರ್ವ್ ಬ್ಯಾಂಕ್ ಕೆಟ್ಟ ಸಾಲಗಳನ್ನು ನೀಡಿ ಉಂಟಾಗುವ ಹಣದುಬ್ಬರದ ಕ್ಲಿಷ್ಟ ಮಾರ್ಗಗಳನ್ನು ಕಾಲಕಾಲಕ್ಕೆ ಸಮರ್ಪಕವಾಗಿ ನಿರ್ವಹಿಸಿರುವುದುಂಟು. ಆದರೆ ಸರ್ಕಾರದ ದುಂದುವೆಚ್ಚದ ಮೇಲಾಗಲೀ, ವಿದೇಶೀ ವಿನಿಮಯದ ಆಮದು ರಫ್ತು ವೆಚ್ಚದ ಸರಿತೂಗಿಸುವಿಕೆಯಲ್ಲಾಗಲೀ ನೇರವಾಗಿ ಏನೂ ಮಾಡಲಾಗುವುದಿಲ್ಲ. ಈ ಸಾಲ ನಿಯಂತ್ರಿಸುವುದರಲ್ಲೂ ರಿಸರ್ವ್ ಬ್ಯಾಂಕಿನ ಅಧಿಕಾರವೇನೂ ಪರ್ಯಾಪ್ತವೂ, ಸಮಗ್ರವೂ ಅಲ್ಲ ಎಂದು ನೆನಪಿಡಬೇಕು. ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯ ಪ್ರಶ್ನೆಗೆ ಒಂದು ಸಲಹೆ ಮಾಡಬಹುದಾದರೆ ಆಗಾಗ ನಡೆಯುವಂತೆ ರಿಸರ್ವ್ ಬ್ಯಾಂಕ್ ಗವರ್ನರ್ ಸರ್ಕಾರದ ಹಣಕಾಸು ವಿಭಾಗದ ಕಾರ್ಯದರ್ಶಿಯಾಗಿಯೂ, ಅಲ್ಲಿಯವ ಗವರ್ನರ್ ಆಗಿಯೂ ಅದಲು ಬದಲಾಗುವ ಪರಿಪಾಟಲವನ್ನು ನಿಲ್ಲಿಸಬಹುದೆ? ಆದರೆ ಸಂಪೂರ್ಣ ಸ್ವಾಯತ್ತ ಎನ್ನುವ ಅಮೆರಿಕಾ ಸಂಯುಕ್ತ ಸಂಸ್ಥಾನದ ಫೆಡರಲ್ ಬ್ಯಾಂಕ್ ವಾಲ್‌ಸ್ಟ್ರೀಟ್ ಜತೆ ಹೊಕ್ಕಳ ಸಂಬಂಧ ಪಡೆದಿರುವಾಗ, ಅವರದ್ದಕ್ಕಿಂತ ನಮ್ಮದೇ ಎಷ್ಟೋ ವಾಸಿ ಎನ್ನಿಸುತ್ತದೆ.

ಈ ಲೇಖನ ಬರೆಯುತ್ತಿದ್ದಂತೆಯೇ ಹಾಲಿ ರಿಸರ್ವ್ ಬ್ಯಾಂಕ್ ಗವರ್ನರ್ ಸುಬ್ಬರಾವ್ ಅವರು ರಿಸರ್ವ್ ಬ್ಯಾಂಕಿಗೆ ಸ್ವಾಯತ್ತತೆಯನ್ನು ನೀಡಬೇಕೆಂದು ಜೂನ್ ೧೦ರಂದು ಸಾರ್ಕ್ ಸಮ್ಮೇಳನದಲ್ಲಿ ಉಪನ್ಯಾಸ ನೀಡಿದ್ದಾರೆ. ಇವರು ನಿವೃತ್ತರಾಗಲು ಇನ್ನು ಮೂರೇ ತಿಂಗಳು ಬಾಕಿ ಇರುವುದು! ಇವರ ಹಿಂದಿನ ಗೌರವಾನ್ವಿತ ಅರ್ಥಶಾಸ್ತ್ರಿ ಗವರ್ನರ್ ಪಿ. ವಿ. ರೆಡ್ಡಿಯವರು ತಮ್ಮ ಹುದ್ದೆಯನ್ನು ಮತ್ತೂ ಮೂರು ವರ್ಷಗಳು ಮುಂದುವರಿಸುವುದನ್ನು ಸರ್ಕಾರ ನಿರಾಕರಿಸಿತ್ತು. ಸರ್ಕಾರ ಈ ಬ್ಯಾಂಕಿನ ಸ್ವಾಯತ್ತತೆಯನ್ನು ಸಂಪೂರ್ಣ ಹಾಳುಗೆಡವುತ್ತಿರುವುದರ ಸೂಚನೆ ಇದು. ಸುಬ್ಬರಾಯರು, ಇರುವ ಪರಿಸ್ಥಿತಿಯಲ್ಲಿ, ರಿಸರ್ವ್ ಬ್ಯಾಂಕಿನ ನೀತಿಯಿಂದ ಮಾತ್ರ ಹಣದುಬ್ಬರ ತಡೆದು, ಬೆಲೆ ನಿಯಂತ್ರಣ ಮಾಡಿ, ಬೆಳವಣಿಗೆಯ ದರವನ್ನು ಕಾಪಾಡುವುದು ಸಾಧ್ಯವಿಲ್ಲ ಎಂದಿದ್ದಾರೆ. ಈ ಹಿಂದೆ ಡೆಪ್ಯುಟಿ ಗವರ್ನರ್ ಆಗಿದ್ದ ಕೆ. ಎಸ್. ಕೃಷ್ಣಸ್ವಾಮಿಯವರು ಹೇಗೆ ಸರ್ಕಾರದ ಹಣಕಾಸು ಮಂತ್ರಾಲಯ **"ಬ್ಯಾಂಕಿಂಗ್ ಡಿಪಾರ್ಟ್‌ಮೆಂಟ್"** ಎಂಬ ಇಲಾಖೆಯನ್ನು ಸ್ಥಾಪಿಸಿ ಬ್ಯಾಂಕುಗಳ ರಾಷ್ಟ್ರೀಕರಣವಾಗಿ, ಸರ್ಕಾರ ಅವುಗಳ ಮಾಲೀಕನಾಗುತ್ತಿದ್ದಂತೆಯೇ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ಮೊಟಕು ಮಾಡಿತು ಎಂದು ವಿವರವಾಗಿ ಬರೆದಿದ್ದಾರೆ. ಈಗ ಅದೇ ಮಂತ್ರಾಲಯ **"ಡೆಟ್ ಮ್ಯಾನೇಜ್‌ಮೆಂಟ್ ಆಫೀಸ್"** (ಸರ್ಕಾರೀ ಸಾಲ ವಹಿವಾಟಿನ ನಿರ್ವಹಣಾ ಇಲಾಖೆ)ಯನ್ನು ಪ್ರಾರಂಭಿಸಲು ಉದ್ದೇಶಿಸಿರುವುದನ್ನು ಸುಬ್ಬರಾಯರು ತಮ್ಮ ಉಪನ್ಯಾಸದಲ್ಲಿ ಸಕಾರಣವಾಗಿ ವಿರೋಧಿಸಿದ್ದಾರೆ. ಅಂತೂ ರಾಜಕೀಯವಾಗಿ ನಾವು ಅರ್ಥಮಾಡಿಕೊಳ್ಳಬಹುದಾದ ವಿಚಾರವೆಂದರೆ ಇಂದಿನ ಸರ್ಕಾರಕ್ಕೆ ಆದ್ಯತೆ ಕೇವಲ ಖಾಸಗೀ ಕ್ಷೇತ್ರದ ಕೆಲವು ಕ್ಷೇತ್ರಗಳ ವಿಕಾಸ ದರದ ಹೆಚ್ಚಳ ಒಂದೇ. ಇದರ ಪರಿಣಾಮವಾದ ಹಣದುಬ್ಬರ, ತುಟ್ಟಿ ಮುಂತಾದುವು ಅದರ ಅವಗಾಹನೆಯಲ್ಲಿಲ್ಲ. ಆದರೆ ರಿಸರ್ವ್ ಬ್ಯಾಂಕ್ ಈ ಕೆಲಸವನ್ನು ನಿರ್ವಹಿಸಬೇಕು ಎಂದು ಮರು ಉಪದೇಶ ಮಾಡುತ್ತಾ ಕಾಲಹರಣ ನಡೆಸುತ್ತಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಇಂಗ್ಲೆಂಡಿನಲ್ಲಿರುವಂತೆ **"ಮಾನಿಟರಿ ಪಾಲಿಸಿ ಕಮಿಟಿ"**ಯೊಂದನ್ನು ಇಲ್ಲೂ ಸ್ಥಾಪಿಸಿ, ತನ್ಮೂಲಕ ಕೊನೆಯ ಪಕ್ಷ ಹಣ ಚಲಾವಣೆಯ ನೀತಿಗೆ ಸಂಬಂಧಪಟ್ಟಂತೆ ಒಂದಿಷ್ಟು ಸ್ವಾಯತ್ತತೆ ತರ ಬೇಕೆನ್ನುತ್ತಾರೆ ಸುಬ್ಬರಾಯರು. ಹೀಗೆಲ್ಲ ಬಹಿರಂಗವಾಗಿ ಮಾತನಾಡಿದ ಸುಬ್ಬರಾಯರು ಇನ್ನು ಯಾವ ಸರ್ಕಾರಿ ಪದವಿಯನ್ನೂ ಪಡೆಯಲಾರರು. ಹಾಗೆಯೇ ಅವರ ಸಲಹೆಗೂ ಇಲ್ಲಿಯವರೆಗೆ ಸರ್ಕಾರದಿಂದ ಯಾವುದೇ ಪ್ರತಿಕ್ರಿಯೆಯೂ ಬಂದಿಲ್ಲ.


**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ
ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

## ಬುದ್ಧ ಬೆಳದಿಂಗಳು

**(ಕವಿತೆಗಳು)**

ಮೂಡ್ನಾಕೂಡು ಚಿನ್ನಸ್ವಾಮಿ

**ಪುಟ : ೮೮**

**ಬೆಲೆ : ರೂ. ೬೫**

**ಅಕ್ಷರ ಪ್ರಕಾಶನ,** ಹೆಗ್ಗೋಡು

ಸಾಗರ - ೫೭೭ ೪೧೭

ಬುದ್ಧ ಬೆಳದಿಂಗಳೆಂದರೆ ಜ್ಞಾನದ ಬೆಳದಿಂಗಳೇ. ಪರಿಪೂರ್ಣ ಜ್ಞಾನದ ಕಡೆಗೆ ನಡೆಯುವುದು ಬಾಳಿನ ಗುರಿ. ಜಗದ ಜಂಜಡಗಳನ್ನು ದಿಟ್ಟವಾಗಿ ಎದುರಿಸಿ ಮುನ್ನಡೆಯಬೇಕು. ಎಲ್ಲ ಕಾಲಕ್ಕೂ ಜಗತ್ತಿನಲ್ಲಿ ನೋವು-ಸಂಕಟಗಳಿದ್ದು ಅವುಗಳ ನಿವಾರಣೆಗೆ ನಿರಂತರ ಪ್ರಯತ್ನ ಇರುತ್ತದೆ. ಈ ಕಾಲವೂ ಅದಕ್ಕೆ ಹೊರತಲ್ಲ. ಬುದ್ಧ ಇಂದು ಎಲ್ಲರಿಗೂ ಆಪ್ತನಾಗಿ ಗುರುವಾಗುತ್ತಿದ್ದಾನೆ. ಶತಮಾನಗಳಿಂದ ತುಳಿಯಲ್ಪಟ್ಟವರ ಪರವಾಗಿ ಈ ಕವಿತೆಗಳಿದ್ದು ವಿಚಾರಪ್ರಚೋದಕವಾಗಿವೆ. ನೂರಾರು ಪ್ರತಿಮೆಗಳು, ರೂಪಕಗಳು, ಕವಿತೆಗಳಲ್ಲಿ ಬಂದಿದ್ದು ಅಲ್ಲಲ್ಲಿ ಅವುಗಳನ್ನು ಗ್ರಹಿಸಿದಾಗ ಮಾತ್ರ ಕವಿತೆ ನಮಗೆ ದಕ್ಕೀತು. ''ಅರಹಂತನನ್ನು ಕೇಳು'' ಎಂಬ ಕವಿತೆಯಲ್ಲಿ ಪಂಚೇಂದ್ರಿಯಗಳ ಮೂಲಕ ಮನಸ್ಸನ್ನು ಮಣಿಸುವ ವಿಫಲ ಪ್ರಯತ್ನವಿದೆ; ಕಿವುಡು, ಕುರುಡು, ಮಾತಿಲ್ಲದ, ಗಂಧವನ್ನೇ ಗ್ರಹಿಸದ ಮನಸ್ಸಿಗೆ ಕೊನೆಗೆ – ನನ್ನ ಅಂಗೈಯೊಳಗಿನ ಲಿಂಗವಾಗು ಎಂಬ ಆಹ್ವಾನವಿದೆ. ''ನನ್ನನ್ನು ಯಾರೂ ಮುಟ್ಟಲಾರರು. ಈ ಲೋಕದ ಮೊದಲ ಅಸ್ಪೃಶ್ಯ ನಾನು'' ಎನ್ನುತ್ತದೆ ಮನಸ್ಸು! ಇಂಥ ಕವಿತೆಯನ್ನು ಮೆಚ್ಚದಿರಲಾದೀತೆ? ಇಂಥ ಒಳನೋಟಗಳಿರುವ ಪದ್ಯಗಳು ಇಲ್ಲಿ ಬೇಕಾದಷ್ಟಿವೆ. ಅವು ನಮಗೆ ವಿವೇಕವನ್ನೂ ಎಚ್ಚರವನ್ನೂ ನೀಡುವಂತೆ ಆಗಲಿ, ಸಂಕುಚಿತ ಮನಸ್ಸುಗಳು ಬದಲಾಗಲಿ. ಈ ಕವನಗಳನ್ನು ಬರೆದ ಶ್ರೀ ಮೂಡ್ನಾಕೂಡು ಚಿನ್ನಸ್ವಾಮಿ ಓದುಗರಿಗೆ ಈಗಾಗಲೇ ಪರಿಚಿತರು. ಇವರ ಕವಿತೆಗಳು ಇಂಗ್ಲಿಷ್, ಸ್ಪ್ಯಾನಿಷ್ ಹಾಗೂ ಹೀಬ್ರೂ ಭಾಷೆಗಳಿಗೆ ಅನುವಾದಗೊಂಡಿವೆ.

## ಕನ್ನಡ ಸಾಹಿತ್ಯ - ಚಾರಿತ್ರಿಕ ಬೆಳವಣಿಗೆ - ೧ (ಪ್ರಾಚೀನ ಸಾಹಿತ್ಯ - ರಾಜಸತ್ತೆಯ ವೈಭವದ ಕಾಲ)

*ಡಾ|| ಸಿ. ವೀರಣ್ಣ*

**ಪುಟ : ೪೧೨** **ಬೆಲೆ : ರೂ. ೨೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫

ಬೆಂಗಳೂರು - ೫೬೦ ೦೦೧

ಪ್ರಾಚೀನ ಕಾಲದಿಂದ ಪ್ರಾರಂಭಿಸಿ ಆಧುನಿಕ ಕಾಲದ ತನಕ ಐದು ಸಂಪುಟಗಳಲ್ಲಿ ಕನ್ನಡ ಸಾಹಿತ್ಯವು ಬೆಳೆದು ಬಂದ ವಿವಿಧ ಘಟ್ಟಗಳನ್ನು ಓದುಗರಿಗೆ ಪರಿಚಯಿಸುವ ಯೋಜನೆಯಲ್ಲಿ ಈ ಸಂಪುಟ ಮೊದಲನೆಯದು. ಇದು ರಾಜರು – ಚಕ್ರವರ್ತಿಗಳು ವೈಭವದಿಂದ ಆಳುತ್ತಿದ್ದ ಸಂದರ್ಭದಲ್ಲಿ ಸಾಹಿತಿಗಳು ರಚಿಸಿದ ಸಾಹಿತ್ಯವನ್ನು ಶೋಧನಾತ್ಮಕ ನೆಲೆಯಲ್ಲಿ ಹೊಸ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡುತ್ತದೆ. ಇಂದಿನಂತೆ ಅಂದೂ ಕೂಡ ಸಮಾಜ ವ್ಯವಸ್ಥೆ ದುಡಿಮೆಗಾರರ ಬವಣೆ, ಜಮೀನ್ದಾರಿ ಪದ್ಧತಿಯ ಶೋಷಣೆ, ಜಾತಿಪದ್ಧತಿಯ ಸಂಕೋಲೆಗಳಿಂದ ಮುಕ್ತವಾಗಿದ್ದಿಲ್ಲ. ಅಂದಿನ ಸಾಹಿತ್ಯ ರಚನೆ ಸಾಮಾನ್ಯವಾಗಿ ರಾಜಾಶ್ರಯ ಪಡೆದ ಕವಿಗಳಿಂದ ಪ್ರಧಾನಧಾರೆಯಾಗಿ ಹೊಮ್ಮಿದ್ದು ಜನಸಾಮಾನ್ಯರ ನೋವಿನ ಝರಿ ಅಲ್ಲಿ ಅಶಕ್ತವಾಗಿತ್ತು. ಆದರೂ ಅಲ್ಲಲ್ಲಿ ಪ್ರತಿಭಟನೆ ಕನ್ನಡ ಕಾವ್ಯಗಳಲ್ಲಿ ದಾಖಲಾಗಿದೆ. ''ರಾಜನು ಪ್ರಜೆಗಳನ್ನು ಮಕ್ಕಳಂತೆ ಕಂಡು ಧರ್ಮದಿಂದ ರಾಜ್ಯವಾಳುತ್ತಿದ್ದನು'' ಎಂಬ ಹೇಳಿಕೆಗೆ ತದ್ವಿರುದ್ಧವಾಗಿ ''ಅಲ್ಪನಿಗೆ ಅರಸೊತ್ತಿಗೆ ಸಿಕ್ಕಿದರೆ ಅರ್ಧರಾತ್ರೆಯಲೆದ್ದು ಕೊಡೆ ಹಿಡಿಸಿದ್ದನಂತೆ'' ಎಂಬಂಥ ಟೀಕೆಗಳೂ ಇದ್ದವು. ಇಂಥ ರಾಜರುಗಳ ಮಧ್ಯೆ ಅಂದಿನ ಕವಿಗಳ ಪಾಡೇನು ? ಪಾತ್ರವೇನು ? ಸಾಹಿತ್ಯ ಸೃಷ್ಟಿಯ ಒತ್ತಡಗಳೇನು ? 'ಕನ್ನಡ ಪ್ರತಿಭಟನೆ ಕಾವ್ಯ' ಕೃತಿಯಿಂದ ಹೊಸ ಚಿಂತನೆಗಳನ್ನು ಪರಿಚಯಿಸಿದ ಡಾ|| ಸಿ. ವೀರಣ್ಣ ಇಲ್ಲಿ ಕನ್ನಡ ಸಾಹಿತ್ಯದ ಚಾರಿತ್ರಿಕ ಬೆಳವಣಿಗೆಯ ಸ್ವರೂಪವನ್ನು ನೀಡಿದ್ದಾರೆ.



## ಬರೀ ಎರಡು ರೆಕ್ಕೆ (ಕಾದಂಬರಿ)

ಸುನಂದಾ ಪ್ರಕಾಶ ಕಡಮೆ

**ಪುಟ : ೨೨೪** **ಬೆಲೆ : ರೂ. ೧೫೦**

**ಚಂದಾ ಪುಸ್ತಕ,** ಐ-೦೦೪, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ

ಬೆಂಗಳೂರು - ೫೬೦ ೦೭೬

ಇದು ಒಂದು ಹಳ್ಳಿಯ ಬದುಕನ್ನು ಪರಿಚಯಿಸುವ ಸಾಮಾಜಿಕ ಕಾದಂಬರಿ. ಹಬ್ಬ, ಜಾತ್ರೆ, ಮದುವೆ ಸಂಭ್ರಮಗಳಲ್ಲೆಲ್ಲ ಜನರು ಒಟ್ಟಾಗಿ ಸೇರಿ ಸಂತೋಷವನ್ನು ಹಂಚಿಕೊಳ್ಳುವರು. ಸಂಪ್ರದಾಯಗಳು, ಶಾಸ್ತ್ರಗಳು ಇವೆಲ್ಲ ಜನರ ನಂಬಿಕೆಗಳಾಗಿ ಆಚರಿಸಲ್ಪಡುವುವು. ಸಂಬಂಧಗಳು, ವಿರಸಗಳು, ಜಗಳಗಳು ಬದುಕಿನ ಅವಿಭಾಜ್ಯ ಅಂಗಗಳೆಂಬಂತೆ ಇಣುಕುತ್ತವೆ. ಮನೆಯಲ್ಲಿನ ಹಿರಿಯರು ಎಳೆಯರನ್ನು ತಿದ್ದಿ ಬುದ್ಧಿಹೇಳುವುದು, ಎಳೆಯರು ಆದರ್ಶಗಳನ್ನು ಮೈಗೂಡಿಸಿಕೊಳ್ಳುವುದು ಇವೆಲ್ಲ ಇಂದು ಕಳೆದುಹೋದ ಮೌಲ್ಯಗಳು. ಯಾವುದೇ ರಭಸವಿಲ್ಲದೆ ನಿಧಾನಗತಿಯಲ್ಲಿ ಹರಿಯುವ ನದಿಯಂತೆ ಈ ಹಳ್ಳಿಯ ಜನರ ಬಾಳು ಸಾಗುತ್ತದೆ. ನಗರದ ಯಾಂತ್ರಿಕ ಬದುಕಾಗಲೀ, ವಿದೇಶಗಳ ಕನಸಾಗಲೀ ಯಾವುದರ ಹಂಗೂ ಇಲ್ಲಿನ ಮುಗ್ಧ ಜನರಿಗಿಲ್ಲ. ಮನೆಯ ಸದಸ್ಯರು, ಅವರ ಬೇನೆ-ಬೇಸರಿಕೆಗಳು, ದುಗುಡ-ಅಸಮಾಧಾನಗಳು ಚಿತ್ರಿತವಾಗಿದ್ದು ಪಾತ್ರಗಳ ಅಂತರಂಗವನ್ನು ಅವರಾಡುವ ಮಾತುಗಳಿಂದ ಗ್ರಹಿಸಬಹುದು. ಇದನ್ನು ರಚಿಸಿದ ಸುನಂದಾ ಪ್ರಕಾಶ ಕಡಮೆ ಅವರಿಗೆ ಡಿ. ಎಸ್. ಕರ್ಕಿ ಕಾವ್ಯ ಬಹುಮಾನವೂ ಸೇರಿ ಇನ್ನಿತರ ಪ್ರಶಸ್ತಿಗಳು ಬಂದಿವೆ. ಇವರ ಕೆಲವು ಕಥೆಗಳು ಕೊಂಕಣಿ, ತಮಿಳು, ಮಲಯಾಳಂ, ಇಂಗ್ಲಿಷ್ ಭಾಷೆಗಳಿಗೆ ಅನುವಾದವಾಗಿವೆ.

## ಅವಳಿ ಕ್ರಾಂತಿ ಕಿಡಿಗಳು ಕಲ್ಲುರ್ಟಿ - ಕಲ್ಕುಡ



*ಡಾ|| ಕೆ. ಸಾವಿತ್ರಿ*

**ಪುಟ : ೭೨** **ಬೆಲೆ : ರೂ. ೬೦**

**ಸಿರಿವರ ಪ್ರಕಾಶನ,** ನಂ. ಎಮ್ ೩೭/ಬಿ, ೮ನೇ ಅಡ್ಡರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೫೬೦ ೦೨೧

ತುಳುನಾಡಿನಲ್ಲಿ ಭೂತಾರಾಧನೆಯು ಹಿಂದಿನಿಂದಲೂ ನಡೆದುಬಂದ ಸಂಪ್ರದಾಯ. ತುಳುವರು ಕಷ್ಟಸಹಿಷ್ಣುಗಳು ಮಾತ್ರವಲ್ಲ; ಶ್ರಮದ ಕೆಲಸದಲ್ಲಿಯೂ ಯಾವತ್ತೂ ಮುಂದೆ. ತುಳುನಾಡಿನಲ್ಲಿ ವೀರರಾಗಿ ಪ್ರಸಿದ್ಧರಾದವರು ಬಹುಮಂದಿ. ಈ ಕಥೆಯೂ ಅನ್ಯಾಯದ ವಿರುದ್ಧ ಸಿಡಿದೆದ್ದ ಅವಳಿ ಸೋದರ-ಸೋದರಿಯರದು. ದುಷ್ಟರನ್ನು ಸದೆಬಡಿದು ಹೋರಾಡಿ ಗೆದ್ದವರನ್ನು ಜನರು ಅವರ ಕಾಲಾನಂತರವೂ ಆರಾಧಿಸುತ್ತಾರೆ. ಅವರ ನೆನಪಲ್ಲಿ ಕಲ್ಲೊಂದನ್ನು ಸ್ಥಾಪಿಸಿ ಹೆಸರಿಟ್ಟು ಪೂಜಿಸತೊಡಗುತ್ತಾರೆ. ಕ್ರಮೇಣ ಅದು ದೇವರು-ಭೂತ-ದೈವವಾಗಿ ಜನರ ಮನಸ್ಸಲ್ಲಿ ಭಯಭಕ್ತಿಗಳು ಮೂಡಿ ಆರಾಧ್ಯದೈವವಾಗಿಬಿಡುತ್ತದೆ. ಪ್ರಸಿದ್ಧ ಶಿಲ್ಪಿಯಾಗಿದ್ದು ಅನೇಕ ಕಲ್ಲಿನ ಮೂರ್ತಿಗಳನ್ನು ಕೆತ್ತಿ ಸಾಕಷ್ಟು ಕಷ್ಟಕೋಟಲೆಗಳನ್ನು ಅನುಭವಿಸಿ ವಿಕಲಾಂಗನಾದ ಅಣ್ಣ, ಹಾಗೂ ಆತನ ಮೇಲಾದ ದೌರ್ಜನ್ಯಕ್ಕೆ ಕೆರಳಿ ಕ್ರೂರ ರೀತಿಯಲ್ಲಿ ಸೇಡುತೀರಿಸಿಕೊಂಡ ತಂಗಿ, ಇವರಿಬ್ಬರೂ ಇಂದು ತುಳುನಾಡಿನಲ್ಲಿ ಕಲ್ಕುಡ-ಕಲ್ಲುರ್ಟಿ ಎಂಬ ಹೆಸರಿನಿಂದ ಭೂತಗಳಾಗಿ ಆರಾಧಿಸಲ್ಪಡುತ್ತಿರುವುದಾಗಿ ಈ ಪುಸ್ತಕದಲ್ಲಿ ಹೇಳಲಾಗಿದೆ. ಇದು ಅವರವರ ನಂಬಿಕೆಯ ಪ್ರಶ್ನೆ. ಅವರು ನಂಬಿದ ಸತ್ಯಗಳು ತುಳುವರೊಂದಿಗೆ ಉಸಿರಾಗಿ ಎಂದೆಂದಿಗೂ ಇರುತ್ತವೆ. ಅವೆಲ್ಲ ಹೇಗೇ ಇರಲಿ, ಅನ್ಯಾಯದ ವಿರುದ್ಧ ಬಂಡೇಳುವ ಪ್ರವೃತ್ತಿ, ಸಂದೇಶವನ್ನು ಮಾತ್ರ ನಾವು ಸ್ವೀಕರಿಸಿ, ಪ್ರತೀಕಾರವಾಗಿ ನಡೆಸುವ ಹಿಂಸಾಪ್ರವೃತ್ತಿಯನ್ನು ಬಿಡೋಣ.

## ಝೆನ್ನದಿ

ಎಚ್. ಆರ್. ರಮೇಶ

**ಪುಟ : ೧೦೪** **ಬೆಲೆ : ರೂ. ೬೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ
ವಿಜಯನಗರ, ಬೆಂಗಳೂರು - ೫೬೦ ೦೪೦

ಇಲ್ಲಿ ಕವಿತೆಗಳ ನದಿಯೊಂದು ಹರಿಯುತ್ತಿದೆ. ಹೆಸರು ಝೆನ್ ಎನ್ನಬಹುದು. ಅದಕ್ಕೆ ಆ ಹೆಸರು ಕೊಡದಿದ್ದರೂ ಅದು ತನ್ನ ಸ್ವರೂಪವನ್ನೇನೂ ಬದಲಾಯಿಸುವುದಿಲ್ಲ. ಅರ್ಥಗಳನ್ನೆಲ್ಲ ತನ್ನೊಳಗೆ ಅವಿತಿಟ್ಟುಕೊಂಡು ಒಂದು ಗಣೆಯಂತಿದ್ದು ಆಗೆದುನೋಡು ಎನ್ನುತ್ತಿವೆ ಅವು. ಓದುಗರ ಮಿದುಳಿಗೆ ಸ್ವಲ್ಪ ಜಾಸ್ತಿ ಕೆಲಸ ಕೊಟ್ಟು ತಿಣುಕಾಡಿಸುತ್ತಿವೆ. ನದಿಯೊಂದು ಎದುರಾದ ಅಡೆತಡೆಗಳನ್ನು ನಿವಾರಿಸಿ ಸ್ವಚ್ಛಂದವಾಗಿ ಹೇಗೆ ಹರಿಯುವುದೋ ಹಾಗೆಯೇ ಪ್ರಾಸ-ಛಂದಸ್ಸುಗಳಂತಹ ಬಂಧನಗಳಿಂದ ಮುಕ್ತವಾಗಿ ಸರಾಗವಾಗಿ ಉಸಿರಾಡುವಂತೆ ಕವಿತೆಗಳು ಹೆಣೆಯಲ್ಪಟ್ಟಿವೆ. ಕವಿ ಇಲ್ಲಿ ಏಕಾಂತವಾಗಿ ತನ್ನೊಂದಿಗೆ ತಾನೇ ಮಾತನಾಡುತ್ತ ಭಾವನೆಗಳನ್ನು ಮಾತ್ರ ಹರಿಯಬಿಟ್ಟಿದ್ದಾನೆ. ಪ್ರಕೃತಿಯ ಭಾಗವಾಗಿರುವ ಎಲ್ಲ ವಸ್ತುಗಳನ್ನೂ ಬಳಸಿಕೊಂಡು ಕವಿ ನಮಗಿಲ್ಲಿ ನಶ್ವರ ಬದುಕಿನ ದರ್ಶನ ಮಾಡಿಸುತ್ತಾನೆ. ನಶ್ವರವೆಂದರೆ ಇಲ್ಲಿ ಸಾವಲ್ಲ, ಒಂದು ಬದಲಾವಣೆ – ರೂಪಾಂತರ. ಕವಿ ಏಕಾಂತದಲ್ಲಿ ತನಗೆ ತಾನೇ ಕಂಡುಕೊಳ್ಳುವ ಸತ್ಯ ಇದು. ಹೆಚ್ಚಿನ ಪದ್ಯಗಳಲ್ಲಿ ಸೂರ್ಯ-ಚಂದ್ರ, ಬಿಸಿಲು-ಬೆಳದಿಂಗಳು, ಮಗು, ಹೂವು, ಬೆಂಕಿ, ನೀರು, ಚಿಗುರು ಇವೆಲ್ಲ ಬಂದಿರುವುದರಿಂದ ಒಂದು ಮಾತು – ದಿನವಿಡೀ ಸುಡುವ ಸೂರ್ಯನ ಬಿಸಿಲು ಇರುಳಲ್ಲಿ ಚಂದ್ರನ ಮೂಲಕ ಬೆಳದಿಂಗಳಾಗುವಂತೆ ಲೋಕದ ಜನರಿಗೆ ಒಂದಿಷ್ಟು ತಂಪು ನೀಡುವ ಮಹಾತ್ಮನೊಬ್ಬನುದಯಿಸಲಿ ! ಇದು ಸರಿಯಾದ ಹಾರೈಕೆ.




## ರಸಿಕ ರಂಗ ಮತ್ತು ಇತರ ಲೇಖನಗಳು



ಎಚ್. ಜಿ. ಸೋಮಶೇಖರರಾವ್

**ಪುಟ : ૩೧೦** **ಬೆಲೆ : ರೂ. ೧೬೦**

**ಅಕ್ಷಯ ಪ್ರಕಾಶನ,** ನಂ. ೨೨೯, ೨ನೇ ಅಡ್ಡರಸ್ತೆ
೩ನೇ ಮುಖ್ಯರಸ್ತೆ, ಹನುಮಂತನಗರ
ಬೆಂಗಳೂರು - ೫೬೦ ೦೧೯

ಮೊದಲ ಭಾಗ ಹಾಸ್ಯಲೇಖನಗಳಿಂದಲೂ ಇನ್ನರ್ಧ ಭಾಗ ಪ್ರಬಂಧರೂಪದ ಲೇಖನಗಳಿಂದಲೂ ಕೂಡಿದ ಅಪರೂಪದ ಪುಸ್ತಕ. ಸಿನಿಮಾ - ಕಿರುತೆರೆಯ ನಟ, ನಿವೃತ್ತ ಬ್ಯಾಂಕ್ ಅಧಿಕಾರಿ, ರಂಗಭೂಮಿಯ ಸಾನ್ನಿಧ್ಯ, ಶಾಲಾ ಕಾಲೇಜಿನ ದಿನಗಳಲ್ಲಿ ಗಳಿಸಿದ ಹೆಸರು ಇವೆಲ್ಲ ಸೇರಿ ಎಚ್. ಜಿ. ಸೋಮಶೇಖರರಾಯರನ್ನು ಇಂದು ಬರಹಗಾರನನ್ನಾಗಿ ರೂಪಿಸಲು ಸಹಕಾರಿಯಾಯಿತು. ಇಂಥ ಕ್ಷೇತ್ರಗಳಲ್ಲಿನ ಅವರ ಶ್ರೀಮಂತ ಅನುಭವ ಇಲ್ಲಿನ ಬರಹಗಳಿಗೆ ಸ್ಫೂರ್ತಿಯಾಗಿದ್ದು ತಮ್ಮ ಜೀವನದಲ್ಲಿ ಕಂಡುಂಡ ಸ್ವಾರಸ್ಯಕರ ಘಟನೆಗಳನ್ನು ಬರಹರೂಪದಲ್ಲಿ ಮನಬಿಚ್ಚಿ ಹಂಚಿಕೊಂಡಿದ್ದಾರೆ. ಕೆಲವು ಲೇಖನಗಳು ನಗೆಯುಕ್ಕಿಸಿದರೆ ಇನ್ನು ಕೆಲವು ಗಂಭೀರ ಚಿಂತನೆಗೆ ಎಡೆಮಾಡಿಕೊಡುತ್ತವೆ. ಕಾಲವು ಬದಲಾದ ಸನ್ನಿವೇಶದಲ್ಲಿ ಹಿಂದಿನ ಮತ್ತು ಇಂದಿನ ತುಲನೆ, ಲೇಖನಗಳುದ್ದಕ್ಕೂ ಗುರುತಿಸಬಹುದು. ಇಲ್ಲಿನ ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿ ಜನಮನ್ನಣೆ ಪಡೆದಿವೆ. ಯಾವುದೇ ಲೇಖನದಲ್ಲಿನ ಹಾಸ್ಯ ಯಾರನ್ನೂ ಚುಚ್ಚಿ ನೋಯಿಸದೆ ತಿಳಿಹಾಸ್ಯದಿಂದ ಕೂಡಿದ್ದು ನಗುವು ತಂತಾನೇ ಹೊರಹೊಮ್ಮುವಂತಿದೆ. ಮನಸ್ಸಿಗೂ ಆಹ್ಲಾದಕರ, ಬುದ್ಧಿಗೂ ಚುರುಕು ನೀಡುವಂತಿದೆ.

**– ಇಂದಿರಾಕುಮಾರಿ**

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

---

# ಸಾದರ ಸ್ವೀಕಾರ

**ಕರ್ನಾಟಕದ ಸೂಫಿಗಳು** ಡಾ|| ರಹಮತ್ ತರೀಕೆರೆ
**ಪುಟ : ೩೦೪** **ಬೆಲೆ : ರೂ. ೧೫೦**

**ಎಚ್. ಎಸ್. ಶಿವಪ್ರಕಾಶರ ಸಮಗಾರ ಭೀಮವ್ವ**
ಸಂ. : ನ. ರವಿಕುಮಾರ್
**ಪುಟ : ೮೦** **ಬೆಲೆ : ರೂ. ೬೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಮಥಿಸಿದಷ್ಟೂ ಮಾತು** (ಅಮೆರಿಕಾ ಕನ್ನಡಿಗರ ಸಲ್ಲಾಪ)
ಸಂ. : ತ್ರಿವೇಣಿ ಶ್ರೀನಿವಾಸರಾವ್
ಎಂ. ಆರ್. ದತ್ತಾತ್ರಿ
**ಪುಟ : ೨೮೪** **ಬೆಲೆ : ರೂ. ೫೦**
**ಕನ್ನಡ ಸಾಹಿತ್ಯ ರಂಗ,** ನ್ಯೂ ಜೆರ್ಸಿ, ಯು.ಎಸ್.ಎ., ಅಭಿನವ ಬೆಂಗಳೂರು

**ಬಹುಜನ ಹಿತಾಯ ಬಹುಜನ ಸುಖಾಯ** (ಪ್ರಬಂಧಗಳು)
ಎಂ. ವಿ. ಭಟ್
**ಪುಟ : ೨೯೭** **ಬೆಲೆ : ರೂ. ೧೫೦**
**ಯುಗಪುರುಷ ಪ್ರಕಟಣಾಲಯ,** ಕಿನ್ನಿಗೋಳಿ - ೫೭೪ ೧೫೦ (ದ.ಕ.)

**ಮನೋಲೋಕ** (ಕಥಾ ಸಂಕಲನ) ಅಶ್ಫಾಕ ಪೀರಜಾದೆ
**ಪುಟ : ೮೮** **ಬೆಲೆ : ರೂ. ೫೦**
**ಚಿಂತನ ಪ್ರಕಾಶನ,** ಗೋಕಾಕ ಜಿಲ್ಲೆ, ಬೆಳಗಾವಿ

**ಕಾಲವು ಅಳಿಸಿದ ಕಾಲ ಗುರುತುಗಳು** ಸಿ. ಹೆಚ್. ಮಾರಿಯತ್
ಅನು : ಪಾರ್ವತಿ ಜಿ. ಐತಾಳ್
**ಪುಟ : ೧೧೬** **ಬೆಲೆ : ರೂ. ೬೦**

**ಆಲ-ಬೇಲ** (ಕವನ ಸಂಕಲನ) ಡಾ|| ದೊಡ್ಡರಂಗೇಗೌಡ
**ಪುಟ : ೩೨೦** **ಬೆಲೆ : ರೂ. ೨೦೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಓಂಕಾರ ಪ್ರಕಾಶನ,** 'ಮಾಳಿ', ತಾಮ್ರತೋಟ, ಹಿಡಕಲ್ ಅಂಚೆ, ರಾಯಬಾಗ ತಾಲೂಕು, ಬೆಳಗಾಂ ಜಿಲ್ಲೆ

**ಮೊದಲ ಮೆಟ್ಟಲು** (ಕವನ ಸಂಕಲನ) ಐ. ಎಂ. ಜಯಶ್ರೀ
**ಪುಟ : ೭೧** **ಬೆಲೆ : ರೂ. ೪೫**
**ಶ್ರೀ ಗೌರಿ ಪ್ರಕಾಶನ,** ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ಸುಮಧುರ ಪಯಣ** (ಕವನ ಸಂಕಲನ) ಐ. ಎಂ. ಜಯಶ್ರೀ
**ಪುಟ : ೧೨೫** **ಬೆಲೆ : ರೂ. ೬೦**
**ಕನ್ನಡ ಸಾಹಿತ್ಯ ಪರಿಷತ್ತು,** ಬಳ್ಳಾರಿ ಜಿಲ್ಲಾ ಘಟಕ, ಬಳ್ಳಾರಿ

**ಪ್ರತೀಕ್ಷಾ** (ಸಾಮಾಜಿಕ ಕಾದಂಬರಿ) ಬಿ. ಪಿ. ಶಿವಾನಂದರಾವ್
**ಪುಟ : ೧೮೪** **ಬೆಲೆ : ರೂ. ೯೦**
**ಹೇಮಂತ ಸಾಹಿತ್ಯ,** ನಂ. ೯೭೨, 'ಸಿ', ೪ನೇ 'ಇ' ವಿಭಾಗ, ೧೦ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಪವಿತ್ರ** (ಕಾದಂಬರಿ) ಬಿ. ಪಿ. ಶಿವಾನಂದರಾವ್
**ಪುಟ : ೧೧೨** **ಬೆಲೆ : ರೂ. ೬೦**
**ಸಾಹಿತ್ಯ ಚಂದನ,** ನಂ. ೪೦೨/೧೬, ೪ನೇ ಮುಖ್ಯರಸ್ತೆ, ೫೦ ಅಡಿ ರಸ್ತೆ, ಬನಶಂಕರಿ ೧ನೇ ಹಂತ, ೨ನೇ ಘಟ್ಟ, ಬೆಂಗಳೂರು - ೫೬೦೦೫೦

**ರಮಾಬಾಯಿ** (ಕಾದಂಬರಿ) ಡಾ|| ಯಶವಂತ ಮನೋಹರ್
ಅನು : ಡಾ|| ಎಚ್. ಟಿ. ಪೋತೆ
**ಪುಟ : ೧೧೨** **ಬೆಲೆ : ರೂ. ೬೦**
**ಸಪ್ನ ಬುಕ್ ಹೌಸ್,** ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು - ೫೬೦ ೦೦೯

**ದಮನಿತ** (ಕವನ ಸಂಕಲನ) ಸಂ. : ಎಸ್. ಆರ್. ಗುರುನಾಥ್
**ಪುಟ : ೬೭** **ಬೆಲೆ : ರೂ. ೫೦**
**ಅಪೂರ್ವ ಪ್ರಕಾಶನ,** ಸಿಂಗಾಪುರ, ಚಿತ್ರದುರ್ಗ - ೫೭೭ ೫೦೧

**ಕನ್ನಡ ವಿಭಕ್ತಿ ರೂಪಗಳು** (ಸಂಶೋಧನ ಪ್ರಬಂಧಗಳು)
ಬಸವರಾಜ ಕೋಡಗುಂಟಿ
**ಪುಟ : ೧೫೨** **ಬೆಲೆ : ರೂ. ೧೧೦**
**ಬಂಡಾರ ಪ್ರಕಾಶನ,** ಮಸ್ಕಿ - ೫೮೪ ೧೨೪, ರಾಯಚೂರು ಜಿಲ್ಲೆ

**ಬಸವಣ್ಣನವರ ವಚನ ಪ್ರಯೋಗ ಕೋಶ**
ಡಾ|| ಎಸ್.ಆರ್. ಗುಂಜಾಳ,
ಶ್ರೀ ಮಡಿವಾಳ ಸ್ವಾಮಿಗಳು
**ಪುಟ : ೬೮೦** **ಬೆಲೆ : ರೂ. ೫೦೦**
**ಲಿಂಗಾಯತ ಸಂಶೋಧನ ಕೇಂದ್ರ,** ಸಾಗನೂರು ಶ್ರೀ ರುದ್ರಾಕ್ಷಮಠ, ಶಿವಬಸವ ನಗರ, ಬೆಳಗಾವಿ - ೧೦

**ದಾಸಾಮೃತವಾಣೀ – ಒಂದು ಒಳನೋಟ**
ವಿದ್ಯಾಧರ ಮುತಾಲಿಕ ದೇಸಾಯಿ
**ಪುಟ : ೧೩೦** **ಬೆಲೆ : ರೂ. ೯೦**
**ಶ್ರೀವತ್ಸ ಪ್ರಕಾಶನ,** ಧಾರವಾಡ

# HEALTHY GIFT FROM THE HOUSE OF MEDIA ICON

MEDIA










# ವೈದ್ಯಲೋಕ

ಆರೋಗ್ಯ-ಆಹಾರ-ಆಯುರ್ವೇದ

**ಕನ್ನಡದ ಸಮಗ್ರ ಆರೋಗ್ಯ ಮಾಸಪತ್ರಿಕೆ**

## "ಇದು ನಿಮ್ಮ ಮನೆಯ ಡಾಕ್ಟರ್"

**ಆರೋಗ್ಯಕರ ಜೀವನಕ್ಕೆ ನಿಮ್ಮ ಜೊತೆಗಿದ್ದೇವೆ**

- ಆರೋಗ್ಯ
- ಆಹಾರ
- ಜೀವನ ಶೈಲಿ
- ವ್ಯಕ್ತಿತ್ವ ವಿಕಸನ
- ಸೌಂದರ್ಯ
- ಆಯುರ್ವೇದ
- ಜೀವನ ಮಾರ್ಗದರ್ಶಿ

ಖ್ಯಾತ ತಜ್ಞ ವೈದ್ಯರ
ಲೇಖನಗಳು, ಸಲಹೆಗಳು

HEALTH DIGEST

**ಉದ್ಯಮಿಗಳೇ**
**ಜಾಹೀರಾತು ನೀಡಿ**
**ಸಹಕರಿಸಿ**

**ಚಂದಾದಾರರಾಗಿ ನಮ್ಮನ್ನು ಪ್ರೋತ್ಸಾಹಿಸಿ**

*We Create Health Awareness*

## ಚಂದಾದಾರರ ಅರ್ಜಿ

ಭರ್ತಿ ಮಾಡಿ ಕಳುಹಿಸಿ

ಹೆಸರು: ______________________ ಜನ್ಮದಿನ: ______________________

ವಿಳಾಸ: ______________________________________________

ಅಂಚೆ ಕೋಡ್: ______________________ ರಾಜ್ಯ: ______________________

ದೂ.: ______________ ಮೊಬೈಲ್: ______________ ಇ-ಮೇಲ್: ______________

ಚಂದಾ ಅವಧಿ :- 1 ವರ್ಷ : 240 ☐ 2 ವರ್ಷ: 450 ☐ 5ವರ್ಷ: 1,000 ☐ ಪೋಷಕರು/ಅಜೀವ: 2,500 ☐

Address:
**MEDIA ICON**
No 2&3, Janani, 1st Floor, 7th Cross
Central Excise Layout, Sanjaynagar
**BANGALORE-560 094**

ಚೆಕ್/ಡಿಡಿಯನ್ನು
'Media Icon'ಹೆಸರಿಗೆ ಕಳುಹಿಸಿ
ಹೆಚ್ಚಿನ ವಿವರಗಳಿಗೆ ಕರೆ/ಎಸ್‌ಎಂಎಸ್ ಮಾಡಿ: 9845890884
*(For Subscription Please SMS/Call)* 8197554373

*email: mediaicon@ymail.com*

ಜಾವೇದ್ ಅಖ್ತರ್ ಹಿಂದಿ ಸಿನಿಮಾರಂಗದ ಸುಪ್ರಸಿದ್ಧ ಗೀತಕಾರ, ಸೃಜನಶೀಲ ಚಿಂತಕ, ಚಳುವಳಿಗಾರ. ೨೦೦೭ರಲ್ಲಿ ಇವರು ಪದ್ಮಭೂಷಣ ಪುರಸ್ಕೃತರು. ವಿಚಾರಶೀಲ, ಪ್ರಗತಿಪರವಾದ ಎಲ್ಲ ಚಳುವಳಿಗಳಲ್ಲೂ ಭಾಗವಹಿಸುವವರು. ''ಇಂಡಿಯಾ ಟುಡೆ'' ಎಂಬ ಸಾಪ್ತಾಹಿಕ ಆಂಗ್ಲ ಪತ್ರಿಕೆ ಪ್ರತಿವರ್ಷ ಸಪ್ತತಾರಾ ಹೋಟೆಲೊಂದರ ಭವ್ಯ ಸಭಾಭವನದಲ್ಲಿ ವಾಣಿಜ್ಯ-ಉದ್ದಿಮೆ ಲೋಕದ ಅತಿರಥ ಮಹಾರಥರನ್ನು , ಆರಿಸಿದ ಮಾಧ್ಯಮ, ಸಾಹಿತ್ಯ, ಕಲಾ, ಸಿನಿಮಾ, ರಾಜಕೀಯ ಲೋಕದ ದೇಸೀ ವಿದೇಶೀ ಪ್ರಸಿದ್ಧರನ್ನು ಆಹ್ವಾನಿಸಿ ಅವರಿಂದ ಭಾಷಣ ಮಾಡಿಸುತ್ತದೆ. ಪ್ರಧಾನಿಯೇ ಆದಿಯಾಗಿ ರಾಜಕೀಯ ಅಧಿಕಾರಕ್ಷೇತ್ರದ ಪ್ರಭಾವಿಗಳೆಲ್ಲ ಇಲ್ಲಿ ಹಾಜರಾಗಲೇಬೇಕು. ಈ ಸಾರಿ ಸಿನಿಮಾ ಕ್ಷೇತ್ರದ ಜಾವೇದ್ ಅಖ್ತರ್ ಅವರನ್ನು ಉಪನ್ಯಾಸ ನೀಡಲು ಆಹ್ವಾನಿಸಲಾಗಿತ್ತು. ಅಲ್ಲಿ ''ಸ್ಪಿರಿಚುಯಾಲಿಟಿ'' – ಆಧ್ಯಾತ್ಮಿಕತೆಯ ವಿಷಯ ಕುರಿತ ಅವರು ನೀಡಿದ ಉಪನ್ಯಾಸದ ಸಂಗ್ರಹಾನುವಾದವನ್ನು ಇಲ್ಲಿ ನೀಡಲಾಗಿದೆ. ಅವರೊಡನೆ ಅಂದು ಶ್ರೀ ರವಿಶಂಕರರೂ ಇದ್ದರು. ಅವರ ಪ್ರತಿಕ್ರಿಯೆ ತಿಳಿದಿಲ್ಲ.

# ಆಧ್ಯಾತ್ಮಿಕತೆ ಒಂದು ಪ್ರಭಾವಳಿಯೇ ಅಥವಾ ನಯವಂಚನೆಯೇ ?

**ಜಾವೇದ್ ಅಖ್ತರ್**

ಕನ್ನಡಕ್ಕೆ
**ಕೆ. ಎಸ್. ಪಾರ್ಥಸಾರಥಿ**



**ಮೊ**ದಲಿಗೆ ಒಂದೆರಡು ವಿಷಯಗಳನ್ನು ನಾನು ಸ್ಪಷ್ಟಪಡಿಸುತ್ತೇನೆ. ನನ್ನ ಹೆಸರು ಜಾವೇದ್ ಅಖ್ತರ್. ಈ ಹೆಸರು ನೋಡಿ ಮಾರುಹೋಗಬೇಡಿ. ವಾಸ್ತವದಲ್ಲಿ ನಾನು ಒಬ್ಬ ನಾಸ್ತಿಕ. ಹಾಗೆಂದ ಮಾತ್ರಕ್ಕೆ ನಾನೇನೂ ಇಲ್ಲಿಯವರೆಗೂ ಗೌಪ್ಯವಾಗಿದ್ದ ರಹಸ್ಯವನ್ನೇನೂ ಪ್ರಪ್ರಥಮವಾಗಿ ನಿಮ್ಮ ಮುಂದೆ ಬಹಿರಂಗಪಡಿಸುತ್ತಿಲ್ಲ. ಹಲವಾರು ಬಾರಿ ನನ್ನ ಬರವಣಿಗೆಯಲ್ಲಿ, ದೂರದರ್ಶನ ಕಾರ್ಯಕ್ರಮಗಳಲ್ಲಿ, ಸಾರ್ವಜನಿಕ ವೇದಿಕೆಗಳಲ್ಲಿ ಇದನ್ನು ಹೇಳಿದ್ದೇನೆ. ನನಗೆ ಯಾವುದೇ ಮತೀಯ ನಂಬಿಕೆಗಳು ಇಲ್ಲ. ಅದೇ ಕಾರಣ ಯಾವುದೇ ರೀತಿಯ ಆಧ್ಯಾತ್ಮಿಕತೆಯಲ್ಲೂ ನನಗೆ ವಿಶ್ವಾಸವಿಲ್ಲ. ಅದನ್ನು ನಾನು ನಂಬುವುದಿಲ್ಲ. ನಾವು ಕೃಷ್ಣ, ಗೌತಮ, ಕಬೀರ ಅಥವಾ ವಿವೇಕಾನಂದರ ಸಿದ್ಧಾಂತಗಳನ್ನು ಕುರಿತು ಭಾವಿಸುವುದಾದರೆ ಅದು ಬೇರೆಯೇ ವಿಷಯ. ಅವುಗಳ ಬಗ್ಗೆ ನಾನು ಏನೂ ಹೇಳಲಾರೆ. ನಾನು ಈಗಲೇ ವಿರಮಿಸಬಹುದು. ಪ್ರತಿಯೊಬ್ಬ ಭಾರತೀಯನೂ ನ್ಯಾಯವಾಗಿಯೇ ತನ್ನ ಗತಕಾಲದ ವೈಭವ ಪರಂಪರೆಗಳ ಬಗ್ಗೆ ಹೆಮ್ಮೆ ಪಡಬಹುದು. ನಾನು ಅದನ್ನು ಇಲ್ಲಿ ಚರ್ಚಿಸಲಾರೆ. ನಾನು ಈಗ ನಿಮ್ಮ ಮುಂದೆ ನಿಂತಿರುವುದು ವರ್ತಮಾನದಲ್ಲಿ ಚಾಲ್ತಿಯಲ್ಲಿರುವ ಈ ಕುರಿತ ಸಂದೇಹಾಸ್ಪದ ವಿಷಯಗಳಿಗೆ ಸಂಬಂಧಿಸಿ ಹೇಳಲು.

''ಇಂಡಿಯಾ ಟುಡೆ'' ನನ್ನನ್ನು ಆಧ್ಯಾತ್ಮಿಕತೆಯ ಬಗ್ಗೆ ಮಾತನಾಡಲು ಆಹ್ವಾನಿಸಿದೆ. ಈ 'ಆಧ್ಯಾತ್ಮಿಕ' ಪದದ ಬಗ್ಗೆ ಯಾವುದೇ ಗೊಂದಲ ಬೇಡ. ಕಾರಣ ಇದು ಒಬ್ಬೊಬ್ಬರಿಗೆ ಒಂದೊಂದು ಅರ್ಥನೀಡುವ ಪದ. ಒಂದೇ ಹೆಸರಿನ ಇಬ್ಬರು ಸಂಪೂರ್ಣ ವಿಭಿನ್ನ ವ್ಯಕ್ತಿಗಳಾಗಿರಬಹುದು ಎಂಬಂತೆ. ತುಲಸೀದಾಸ 'ರಾಮಚರಿತ ಮಾನಸ'ವನ್ನು ರಚಿಸಿದ. ನಮ್ಮ ಕಾಲದ ರಮಾನಂದ ಸಾಗರ ರಾಮಾಯಣದ ದೂರದರ್ಶನದ ಸೀರಿಯಲ್ ಮಾಡಿದರು. ಹಾಗೆಂದು ಅವರಿಬ್ಬರ ರಾಮಾಯಣವನ್ನು ಒಂದೇ ರೀತಿ ಕಾಣಲಾಗುವುದಿಲ್ಲ. ನಾನು ಓದಿದ ನೆನಪು : ತುಲಸಿ 'ರಾಮಚರಿತ ಮಾನಸ' ಬರೆದಾಗ ಒಂದು ರೀತಿಯ ಸಾಮಾಜಿಕ ಬಹಿಷ್ಕಾರವನ್ನೇ ಎದುರಿಸಬೇಕಾಯ್ತು. 'ಅವಧಿ'ಯಂತ ಸಾಮಾನ್ಯ ಜನರ ಭಾಷೆಯಲ್ಲಿ ಪವಿತ್ರ ರಾಮಾಯಣವನ್ನು ರಚಿಸುವುದು ಎಂದರೆ ಏನು !? ಒಮ್ಮೊಮ್ಮೆ ನನಗೆ ಅಚ್ಚರಿ ಉಂಟಾಗುತ್ತದೆ : ಯಾವುದೇ ಬಣ್ಣದ, ಮತಧರ್ಮದ, ಕೋಮುಗಳೇ ಆಗಿರಲಿ, ಅವುಗಳ ಒಳಗಿನ ಮೂಲಭೂತವಾದಿಗಳೆಲ್ಲ ಒಂದೇ ರೀತಿ ಕಂಡು ಬರುತ್ತಾರಲ್ಲ ಎಂದು. ೧೯೪೮ರಲ್ಲಿ ಷಾ ಅಬ್ದುಲ್ ಖಾದಿರ್ ಎಂಬ ಸಭ್ಯ ಇದೇ ನಗರದಲ್ಲಿ, ಮೊಟ್ಟಮೊದಲಿಗೆ, ಖುರಾನನ್ನು ಉರ್ದು ಭಾಷೆಗೆ ತರ್ಜುಮೆ ಮಾಡಿದ. ಆ ಕಾಲದ ಎಲ್ಲ ಉಲೇಮಾಗಳೂ ''ಧರ್ಮಬಾಹಿರರ ಭಾಷೆಯೊಂದಕ್ಕೆ ಪವಿತ್ರ ಖುರಾನನ್ನು ಭಾಷಾಂತರಿಸಿದ ಪಾಪಕ್ಕೆ ಶಿಕ್ಷೆಯಾಗಿ'' ಅವನ ವಿರುದ್ಧ ಫತ್ವಾ ವಿಧಿಸಿದ್ದರು. ತುಲಸೀದಾಸನೂ ಅದೇರೀತಿ ಬಹಿಷ್ಕಾರಕ್ಕೆ ಒಳಗಾದಾಗ, ''ನನ್ನನ್ನು ಧೂರ್ತನೆಂದೋ, ಪರಮಹಂಸನೆಂದೋ, ರಜಪೂತನೆಂದೋ, ಜುಲಾಹ ಅಂತಲೋ ಏನಾದರೂ ಹೇಳಿಕೊಳ್ಳಿ. ನನಗೆ ಅದರಿಂದ ಏನೂ ಆಗುವುದಿಲ್ಲ. ನನಗೆ ಒಬ್ಬ ಸೊಸೆಯೋ, ಅಳಿಯನೋ ಬೇಕಾಗಿಲ್ಲ. ನಾನು ಯಾರನ್ನೂ ಮುಟ್ಟಿ ಅವರ ಜಾತಿಯನ್ನು ಕೆಡಿಸಬೇಕಾಗೂ ಇಲ್ಲ. ತುಳಸಿ ಶ್ರೀ ರಾಮಚಂದ್ರನ ಗುಲಾಮ. ಅವನಿಗೆ ಭಿಕ್ಷದ ಊಟ, ಮಸೀದಿಯಲ್ಲಿ ನಿದ್ದೆ ಸಾಕು. ನಾನು ಯಾರಿಗೂ ಏನೂ ಕೊಡಬೇಕಾಗಿಲ್ಲ, ಯಾರಿಂದಲೂ ಏನೂ ತಗೋಬೇಕಾಗಿಲ್ಲ'' ಎಂದು ಉತ್ತರಿಸಿದನಂತೆ.

*(ಮೂಲ ಮತ್ತು ಭಾಷಾಂತರ ಸಹಾಯ : ಡಾ|| ನೀರಾ ನಾರಂಗ್)*

*ಧೂತ ಕಹೋ, ಅವಧೂತ ಕಹೋ,*
*ರಜಪೂತ ಕಹೋ ಜೊಲಾಹಾ ಕಹೋ ಕೋಉ*
*ಕಾಹು ಕೀ ಬೇಟಿ ಸೋ, ಬೇಟಾ ನ ಬ್ಯಾಹವ*
*ಕಾಹು ಕೀ ಜಾತಿ ಬಿಗಾರ ನ ಸೋಉ*
*ತುಲಸೀ ಸರನಾಮ ಗುಲಾಮು ಹೈ ರಾಮ*
*ಕೋ ಜಾಕೋ ರುಚೆ ಸೋ ಕಹೇ ಕಛು ಓಉ*
*ಮಾಂಗೀ ಕೇ ಖೇಬೋ, ಮಸೀತ ಕೋ ಸೋಇಬೋ*
*ಲೈಬೋ ಕೋ ಏಕು ನಾ ದೈಬೇ ಕೋ ದೋಉ*

ರಮಾನಂದ ಸಾಗರ ಅವರು ರಾಮಾಯಣ ಸೀರಿಯಲ್ ಮಾಡಿ ಕೋಟ್ಯಂತರ ಸಂಪಾದಿಸಿದರು. ಅವರ ಆ ಸಾಧನೆಯನ್ನೇನೂ ನಾನು ಅಲ್ಲಗಳೆಯುವುದಿಲ್ಲ. ಆದರೆ ಆತ ತುಲಸಿಗೆ ಸಮಾನ ಅಲ್ಲ ಎನ್ನುವುದು ಸ್ಪಷ್ಟ. ಇನ್ನೂ ನೇರವಾಗಿಯೂ, ಸಮರ್ಪಕವಾಗಿಯೂ, ಅಂದಿಗೂ, ಇಂದಿಗೂ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸುವ ಮತ್ತೊಂದು ಉದಾಹರಣೆಯನ್ನು ನೀಡುತ್ತೇನೆ. ಗೌತಮ ಅರಮನೆ ಬಿಟ್ಟು ಕಾಡಿಗೆ ಹೋದ, ಸತ್ಯವನ್ನು ಅರಸಿ. ಆದರೆ ಈ ಕಾಲದ ಗುರುಗಳು ವನದಿಂದ ಹೊರಬಿದ್ದು ಅರಮನೆಗೇ ಮುಗಿಬೀಳುತ್ತಿದ್ದಾರೆ. ಹಿಂದಿನವರು ಗಮಿಸಿದ ಮಾರ್ಗದ ವಿರುದ್ಧ ಗತಿಯಲ್ಲಿ ಇಂದಿನವರು ಚಲಿಸುತ್ತಿದ್ದಾರೆ. ಹೀಗಾಗಿ ಅಂದಿನ ಗುರುಗಳೊಡನೆ ಇಂದಿನ ಗುರುಗಳನ್ನು ಹೋಲಿಸಲಾಗದು. ಆದ್ದರಿಂದ ಭಾರತೀಯರು ಪ್ರೀತಿಸುವ, ಗೌರವಿಸುವ ಹಿಂದಿನ ಹೆಸರುಗಳ ಹಿಂದೆ ಇಂದಿನ ಗುರುಗಳು ಅವಿತುಕೊಳ್ಳುವುದು ಸರ್ವಥಾ ಸಲ್ಲದ ವರ್ತನೆ.

ನನ್ನನ್ನು ಏಕೆ ಈ ಕಾರ್ಯಕ್ರಮದಲ್ಲಿ ಮಾತನಾಡಲು ಆಹ್ವಾನಿಸಿದರೆಂದು ಯೋಚಿಸಿದೆ. ನಾನು ಒಬ್ಬ ನಾಸ್ತಿಕನಾಗಿ, ಪ್ರತಿಯೊಂದು ಸಂದರ್ಭದಲ್ಲೂ ವಿಚಾರವಂತನಾಗಿರುವ ಪ್ರಯತ್ನ ನಡೆಸುತ್ತಲೇ ಇದ್ದೇನೆ. ಅದೇ ಕಾರಣವಿರಬಹುದೇ ಎಂದುಕೊಂಡಿದ್ದೆ. ಆದರೆ ಈಗ ದಿಢೀರನೆ ಒಂದು ವಿಷಯ ಹೊಳೆಯಿತು. ನಾನೂ ಆಧುನಿಕ ಗುರುಪರಂಪರೆಯೊಂದಿಗೆ ಒಂದು ಸಾಮಾನ್ಯ ಸಂಗತಿಯನ್ನು ಹಂಚಿಕೊಂಡಿದ್ದೇನೆ. ನಾನು ಚಲನಚಿತ್ರಗಳಲ್ಲಿ ಕೆಲಸ ಮಾಡುತ್ತೇನೆ. ನಮ್ಮಿಬ್ಬರ ನಡುವೆ ಈ ಕಾರಣದಿಂದ ಹಲವು ಸಾಮ್ಯಗಳಿವೆ. ನಾವಿಬ್ಬರೂ ಕನಸುಗಳನ್ನು ಮಾರಾಟ ಮಾಡುತ್ತೇವೆ. ಭ್ರಾಂತಿಯನ್ನು ಸೃಷ್ಟಿಸುತ್ತೇವೆ. ಆದರೆ ಇದರಲ್ಲೂ ಒಂದು ಮುಖ್ಯ ವ್ಯತ್ಯಾಸವಿದೆ. ಮೂರು ಗಂಟೆಯ ಪ್ರದರ್ಶನದ ಕೊನೆಗೆ ''ಕೊನೆ'' ''ಸಮಾಪ್ತಿ'' ಎಂದು ಹೇಳಿಬಿಡುತ್ತೇವೆ. ತದನಂತರ ಪ್ರೇಕ್ಷಕ ತನ್ನ ವಾಸ್ತವಕ್ಕೆ ಹಿಂದಿರುಗುತ್ತಾನೆ. ಆದರೆ ನಮ್ಮ ಆಧುನಿಕ ಗುರುಗಳು, ''ಸಮಾಪ್ತಿ'' ಹೇಳುವುದೇ ಇಲ್ಲ! ಅವರು ನಿರಂತರ ಭ್ರಾಮಕತೆಯನ್ನು ಉಳಿಸಿರುತ್ತಾರೆ.

ಆದ್ದರಿಂದ, ಮಹಿಳೆಯರೆ ಮತ್ತು ಮಹನೀಯರೆ! ನಾನು ಇಂದು ಮಾತನಾಡಲು ಬಂದಿರುವುದು ಈ ಠಕ್ಕಿನ ಆಧ್ಯಾತ್ಮಿಕತೆಯ ಬಗೆಗೆ; ಅದಕ್ಕೆ ಅದರದೇ ಸೂಪರ್ ಮಾರುಕಟ್ಟೆ ಇರುವುದರ ವಿಷಯ. ಆಯುಧಗಳು, ಮಾದಕ ವಸ್ತುಗಳು ಮತ್ತು ಆಧ್ಯಾತ್ಮಿಕತೆ – ಈ ಮೂರೂ ಇಂದು ಜಗದ್ವ್ಯಾಪಕವಾದ ದೊಡ್ಡ ಉದ್ಯಮಗಳು. ಆಯುಧ ಮತ್ತು ಮಾದಕ ವಸ್ತುಗಳಾದರೋ ಅವು ಒಂದು ಗುರುತಿಸಬಹುದಾದ, ಉತ್ಪಾದನೆ ಮಾಡಬೇಕಾದ ಘನವಾದ ಸರಕುಗಳು. ಅದೇ ಮುಖ್ಯ ವ್ಯತ್ಯಾಸ. ಆಧ್ಯಾತ್ಮಿಕತೆಯ ಮಾರುಕಟ್ಟೆಯಲ್ಲಿ ಏನನ್ನೂ ನೀಡಬೇಕಾಗಿಲ್ಲ. ಈ ಸೂಪರ್ ಮಾರುಕಟ್ಟೆಯಲ್ಲಿ ಕ್ಷಣಮಾತ್ರದಲ್ಲಿ ನಿರ್ವಾಣ, ಮೆಯಿಲ್ ಮೂಲಕ ಮೋಕ್ಷ, ಆತ್ಮದರ್ಶನಕ್ಕೆ ಕೆಲವೇ ಪಾಠಗಳ ಮಾರ್ಗದರ್ಶನ, ನಾಲ್ಕು ಸುಲಭ ಪಾಠಗಳಲ್ಲಿ ವಿಶ್ವಾಕ್ರಾಂತ ಅನುಭವ – ಇವೆಲ್ಲಾ ಲಭ್ಯವಿರುವ ಸರಕುಗಳು. ಈ ಸೂಪರ್ ಮಾರುಕಟ್ಟೆಯ ಅಂಗಸಂಸ್ಥೆಗಳು ಜಾಗತಿಕವಾಗಿ ಎಲ್ಲೆಡೆ ಹರಡಿವೆ. ಅತೃಪ್ತರೂ, ಅಶಾಂತರೂ ಆದ ಅಸ್ವಸ್ಥ, ಉಳ್ಳವರ ವರ್ಗದವರೇ ಇಲ್ಲಿಯ ಗ್ರಾಹಕರು. ಇಲ್ಲಿ ಅವರಿಗೆ ಚಿಟಿಕೆ ಹಾಕುವಷ್ಟರಲ್ಲಿ ಸಿದ್ಧವಾದ ಆಧ್ಯಾತ್ಮಿಕ ತಿನಿಸುಗಳು ಕೊಳ್ಳಲು ಸಿಗುತ್ತವೆ. ನಾನು ಮಾತನಾಡಲಿರುವ ವಿಷಯ ಈ ವಿಶಿಷ್ಟ ಆಧ್ಯಾತ್ಮಿಕತೆಗೆ ಸಂಬಂಧಪಟ್ಟದ್ದು.

ಪ್ಲೇಟೋ ಹಲವಾರು ಜಾಣ್ನುಡಿಗಳನ್ನು ಹೇಳಿದ್ದಾನೆ. ಯಾವುದೇ ಚರ್ಚೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ, ಅದರಲ್ಲಿ ಬಳಸುವ ಪದಗಳ ಅರ್ಥವನ್ನು ಸ್ಪಷ್ಟಪಡಿಸುವುದು ಮುಖ್ಯ ಅನ್ನುತ್ತಾನೆ, ಅವನು. ನಮ್ಮ ಚರ್ಚೆಗೂ ಮುಂಚೆ ಇದೇನಪ್ಪಾ ಈ ಆಧ್ಯಾತ್ಮಿಕತೆ ಅಂದ್ರೆ ಅಂತ ಮೊದಲು ಸ್ಪಷ್ಟಪಡಿಸೋಣ. ಅದು ಎಲ್ಲ ಮತಧರ್ಮಗಳನ್ನೂ, ಜಾತಿ, ಪಂಗಡಗಳನ್ನೂ, ಜನಾಂಗಗಳನ್ನೂ ಮೀರಿದ ಮಾನವರನ್ನು ಕುರಿತ ಅಪಾರ ಪ್ರೀತಿ ಎಂದಾಗುವುದಾದರೆ ನನಗೆ ಆ ಪದದ ಬಗ್ಗೆ ಯಾವುದೇ ಸಮಸ್ಯೆ ಇಲ್ಲ. ಕೇವಲ ಮಾನವಕುಲ ಮಾತ್ರವಲ್ಲದೆ, ಗಿಡ ಮರ ಬಳ್ಳಿ ಬೆಟ್ಟಗುಡ್ಡ ನದಿ ಸಮುದ್ರ ಸಾಗರ ಸಮಸ್ತ ಪ್ರಾಣಿವರ್ಗಗಳನ್ನು ಕುರಿತ ಪ್ರೀತಿ ಅದು ಎಂದಾದರೆ ನನಗೆ ಅದು ಸಮಸ್ಯೆ ಆಗುವುದಿಲ್ಲ. ಇಡೀ ಇದಕ್ಕೆ ಪರಿಸರ ಪ್ರಜ್ಞೆ ಎನ್ನುವ ಪದ ಬಳಸಲು ಇಚ್ಛಿಸುತ್ತೇನೆ. ಹಾಗೆಂದರೆ ಮದುವೆ, ಮಾತಾಪಿತೃತ್ವ, ಲಲಿತಕಲೆಗಳು, ನ್ಯಾಯವ್ಯವಸ್ಥೆ, ವಾಕ್ ಸ್ವಾತಂತ್ರ್ಯ ಮುಂತಾದ ಸಾಮಾಜಿಕ ಸಂಸ್ಥೆಗಳ ಬಗ್ಗೆ ಹೃತ್ಪೂರ್ವಕ ಗೌರವ ಭಾವನೆ ಎಂದೂ ಅರ್ಥವಾಗಬೇಕು. ಆಧ್ಯಾತ್ಮಿಕತೆ ಎಂದರೆ ಹಾಗೆ ಆದರೆ ಆಗಲೂ ನನಗೆ ಅದು ಒಪ್ಪಿಗೆ. ಇದನ್ನು ನಾಗರಿಕ ಹೊಣೆಗಾರಿಕೆ ಎನ್ನಬಹುದು. ನಿನ್ನನ್ನೇ ಒಳಹೊಕ್ಕು, ನಿನ್ನದೆ ಅಂತರಿಕ ಜಗತ್ತಿನ, ಜೀವನದ ರಹಸ್ಯಗಳನ್ನು ಕುರಿತ ತಡಕಾಟದ, ಚಿಂತನೆಯೇ? ಇದನ್ನು ಯಾರೂ ವಿರೋಧಿಸುವುದಿಲ್ಲ. ಅದನ್ನು ಆತ್ಮಾವಲೋಕನವೆನ್ನಬಹುದು. ಆಧ್ಯಾತ್ಮಿಕತೆ ಎಂದರೆ ಯೋಗವೆ? ಯಮ, ನಿಯಮ, ಆಸನ, ಪ್ರಾಣಾಯಾಮ ಮುಂತಾದ ಯೋಗದ ವಿವರಣೆಗಳನ್ನು




**ದೇ**ಶದ ಗಡಿಗಳಲಿ ಇದ್ದವರು ಇವರೆಲ್ಲ
ಕತ್ತಲೆಯ ಮನೆಗಳಲಿ ಇದ್ದವರು ಇವರೆಲ್ಲ

ಲಾಟಿ ಏಟಿಗೆ ಮುಂದೆ ಇದ್ದವರು ಇವರೆಲ್ಲ
ಕುರ್ಚಿಗಳಿಗೆ ಸದಾ ದೂರ ಇದ್ದವರು ಇವರೆಲ್ಲ

ರಾಜನ ಬಂದೂಕಿಗೆ ಗುಂಡು ಆದವರು ಇವರೆಲ್ಲ
ವಿಜಯೋತ್ಸವದಿಂದ ದೂರ ಇದ್ದವರು ಇವರೆಲ್ಲ

ಅಕ್ಷರಗಳ ಮೊಳೆ ಜೋಡಿಸಿದವರು ಇವರೆಲ್ಲ
ಕಾವ್ಯದಲಿ ಅನಾಮಿಕರಾಗಿದ್ದವರು ಇವರೆಲ್ಲ

ಮಹಾಕಾವ್ಯಕೆ ಕಟ್ಟುರಟ್ಟು ಹಾಕಿದವರು ಇವರೆಲ್ಲ
ಮುನ್ನುಡಿ ಹಿನ್ನುಡಿಗೆ ದಕ್ಕದಾದವರು ಇವರೆಲ್ಲ

ನಿನ್ನ ಕಾವ್ಯ ಗರ್ಭ ಕಟ್ಟುವ ಕಾಲದಲ್ಲಿ ''ಕಾಶಿ''
ಆತ್ಮಹತ್ಯೆಗೆ ಸಿದ್ಧರಾಗುತ್ತ ಇದ್ದವರು ಇವರೆಲ್ಲ

**ಪ್ರೊ॥ ಕಾಶೀನಾಥ ಅಂಬಲಗೆ**
೨-೯೧೦, ಜಯನಗರ, ವಿಶ್ವವಿದ್ಯಾಲಯ ರಸ್ತೆ, ಗುಲಬರ್ಗಾ - ೫೮೫ ೧೦೫

ನೀಡಿ ಉಪಕರಿಸಿದ ಆ ಪತಂಜಲಿಯನ್ನು ಗೌರವಿಸಬೇಕು. ಪ್ರಾಣಾಯಾಮವನ್ನು ಬೇರೆ ಯಾವುದೇ ಹೆಸರಿನಲ್ಲಿ ಅಭ್ಯಾಸ ಮಾಡಿದರೂ ಅದು ನೀಡುವ ಅನುಭವ ಆಪ್ಯಾಯಮಾನವಾದುದು. ಅದು ಆರೋಗ್ಯ ಕಾಪಾಡಿಕೊಳ್ಳುವ, ಶಾರೀರಕ ಸಿದ್ಧತೆಯ ವಿಷಯ. ಆಧ್ಯಾತ್ಮಿಕತೆಯನ್ನು ಕುರಿತ ಈ ವಿವರಣೆ ಕೇವಲ ಭಾಷೆಯ ಬಳಕೆಯ ವಾಗ್ವಾದದ ವೈಖರಿಯಷ್ಟೇಯೆ ? ಈ ಮೇಲೆ ಹೇಳಿದ್ದೆಲ್ಲಾ ಆಧ್ಯಾತ್ಮಿಕತೆಯೆಂದು ಒಪ್ಪುವುದಾದರೆ ಇನ್ನು ಚರ್ಚಿಸುವುದು ಏನಿದೆ? ಇವೆಲ್ಲ ಎಲ್ಲರೂ ಒಪ್ಪತಕ್ಕ ಪದಗಳು. ಈ ಯಾವುದೇ ಪದಗಳಲ್ಲೂ ಗ್ರಹಿಕೆಗೆ ಸಿಗದ ಯಾವುದೂ ಇಲ್ಲ. ಹಾಗಿರುವಾಗ 'ಆಧ್ಯಾತ್ಮಿಕತೆ' ಎನ್ನುವ ಪ್ರತ್ಯೇಕ ಪದ ಒಂದರ ಅಗತ್ಯವೇನು ? ಇವೆಲ್ಲವುಗಳಲ್ಲೂ ಅಡಕವಾಗದ ಅಂಥದೇನಿದೆ ಆ ಪದದಲ್ಲಿ? ಹಾಗಿದ್ದರೆ ಅದೇನು ?

ಅಯ್ಯೋ ಸ್ವಾಮಿ, ಇಷ್ಟಕ್ಕು ಈ ಪದದ ಬಳಕೆಯ ಬಗ್ಗೆ ನಿಮಗೆ ತಾನೆ ಏನು ಸಮಸ್ಯೆ, ಎಂದು ನೀವು ಕೇಳಬಹುದು. ನಾನು ಈ ಪದವನ್ನು ಬಳಸುವುದೇ ಬೇಡ, ಅದನ್ನು ಮರೆತೇಬಿಡೋಣ, ಕೈಬಿಡೋಣ ಎನ್ನುತ್ತೇನೆ. ಏಕೆ ? ನನ್ನ ಸಮಸ್ಯೆ ಹೀಗೆ : ನಾನು ಪಟ್ಟಿಮಾಡಿದ್ದೆಲ್ಲಾ ಆಧ್ಯಾತ್ಮಿಕತೆ ಎಂದು ಒಪ್ಪುವಿರಾದರೆ ಅದರ ಬಗ್ಗೆ ಚರ್ಚೆ ಇಲ್ಲ. ನನಗೆ ಮುಜುಗರವಾಗುವುದು ಬೇರೆಯೆ ಕಾರಣದಿಂದ. ಶಬ್ದಕೋಶದಲ್ಲಿ ಆಧ್ಯಾತ್ಮಿಕತೆಯ ಮೂಲಪದ 'ಆತ್ಮ' ಎಂದಿದೆ. ಭೂಮಿ ವೃತ್ತಾಕಾರವೋ, ಚಪ್ಪಟೆಯೋ ಎಂದು ಇನ್ನೂ ಅರಿತಿರದ ಆ ಆದಿಮ ಕಾಲದಲ್ಲಿ ಮಾನವ, ಮನುಷ್ಯ ಅಂದರೆ ಶರೀರ ಮತ್ತು ಆತ್ಮಗಳ ಸೇರಿಕೆ ಎಂದು ಊಹಿಸಿದ್ದ. ಶರೀರ ಸಾಯುತ್ತದೆ. ಆದ್ದರಿಂದ ಅಶಾಶ್ವತವಾದುದು. ಬಹುಶಃ ಆತ್ಮವೆನ್ನುವುದು ಪ್ರಕೃತಿಯೊಂದಿಗೆ ವಿಲೀನವಾಗುವ ವಸ್ತುವಲ್ಲವೆಂದಿರಬಹುದೆ? ಈ ಶರೀರದಲ್ಲಿ ಕರುಳು, ಪಿತ್ತಕೋಶ, ಹೃದಯ ಮುಂತಾದುವೆಲ್ಲ ಅಡಕವಾಗಿವೆ. ಮಿದುಳು ಬುದ್ಧಿಯ ಕೇಂದ್ರವಾಗಿದ್ದರೂ ಅದೂ ಕೊನೆಗೆ ಶರೀರದೊಡನೆ ನಶಿಸುತ್ತದೆ. ಆದರೆ 'ನೀನು' ಮಾತ್ರ ಸಾಯುವುದಿಲ್ಲ; ನೀನು ಆತ್ಮ, ಅಮರ; ಅದಕ್ಕೆ ಅಸೀಮವಾದ, ಶರೀರಾತೀತವಾದ ಪ್ರಜ್ಞಾವಲಯವಿದೆ. ಅದಕ್ಕೆ ಅಳಿವಿಲ್ಲ. ನಿನ್ನ ಸಮಸ್ಯೆಗಳೆಲ್ಲ ಬುದ್ಧಿಯಿಂದ ಜನಿತವಾದುದು. ಅದರ ಆಜ್ಞಾಧಾರಕನಾಗುವುದು ಸರಿ, ಆದರೆ ಅದರ ಆಜ್ಞಾವರ್ತಿಯಾಗಬೇಡ. ನಿನ್ನ ಆತ್ಮ ಹೇಳುವಂತೆ ಕೇಳು. ಅದಕ್ಕೆ ವಿಶ್ವದ ರಹಸ್ಯ ಗೊತ್ತು. ಇದು ಈ ವಾದದ ವೈಖರಿ. ಪುಣೆಯಲ್ಲಿ ಒಂದು ಆಶ್ರಮವಿದೆ. ಅಲ್ಲಿಯ ಭಾಷಣಗಳ ಮೋಡಿ ಆಕರ್ಷಕವಾಗಿದ್ದು, ನಾನೂ ಅಲ್ಲಿಗೆ ಒಮ್ಮೊಮ್ಮೆ ಹೋಗುತ್ತಿದ್ದೆ. ಆಶ್ರಮದ ಪ್ರವೇಶದ್ವಾರದಲ್ಲಿ ಒಂದು ಪ್ರಕಟಣೆ ಇತ್ತು. ''ಇಲ್ಲಿ ನಿಮ್ಮ ಚಪ್ಪಲಿಯನ್ನೂ, ಬುದ್ಧಿಯನ್ನೂ ಬಿಟ್ಟು ಒಳಗೆ ಬನ್ನಿ!'' ಮತ್ತೆ ಕೆಲವು ಗುರುಗಳಿಗೆ ನೀವು ಚಪ್ಪಲಿ ಧರಿಸಿ ಬಂದರೆ ಪರವಾಗಿಲ್ಲ. ಆದರೆ ಬುದ್ಧಿಯನ್ನು ಒಳಗೆ ಕೊಂಡೊಯ್ಯಬಹುದೇ ?

ಬುದ್ಧಿಯನ್ನು ಬಿಟ್ಟುಬಂದರೆ ನೀವೇನು ಮಾಡುತ್ತೀರಿ ? ಮುಂದಿನ ಪ್ರಜ್ಞಾವಸ್ಥೆಯನ್ನು ತಲುಪಲು ಆಗ ಗುರುವಿನ ಮಾರ್ಗದರ್ಶನ ಬೇಕಾಗುತ್ತದೆ. ಆ ಅದು ಆ ಆತ್ಮದಲ್ಲೆಲ್ಲೋ ಹುದುಗಿಕೊಂಡಿರುತ್ತದೆ. ಗುರುವಾದರೆ ಈಗಾಗಲೆ ಪ್ರಜ್ಞೆಯ ಪರಾಕಾಷ್ಠೆಯನ್ನು ತಲುಪಿರುತ್ತಾನೆ. ಅವನಿಗೆ ಆತ್ಯಂತಿಕ ಸತ್ಯ ಗೊತ್ತು. ಆದರೂ ಅದನ್ನು ಅವನಿಂದ ಹೇಳಲಾಗುವುದಿಲ್ಲ. ನೀವಾಗೇ ಅದನ್ನು ತಿಳಿದುಕೊಳ್ಳಬಲ್ಲಿರೇ ಅಂದರೆ ಅದೂ ಇಲ್ಲ, ಅದಕ್ಕೆ ನಿಮಗೆ ಗುರು ಬೇಕು. ನಿಮಗೆ ಅವನು ಬೇಕು, ಆದರೆ ಅವನು ನೀವು ಪರಮಸತ್ಯವನ್ನು ತಿಳಿಯಬಲ್ಲಿರೆಂದು ಖಾತ್ರಿಯಾಗಿ ಹೇಳಲಾರ. ಇಷ್ಟಕ್ಕು ಅದೇನದು ಆ ಪರಮಸತ್ಯ ? ವಿಶ್ವಾತ್ಮಕ ಸತ್ಯ ? ಖಗೋಳಕ್ಕೆ ಸಂಬಂಧಿಸಿದ್ದು ? ನನಗಂತೂ ಇದು ಇನ್ನೂ ತಿಳಿಯಲು ಸಾಧ್ಯವಾಗಿಲ್ಲ. ನಮ್ಮ ಸೂರ್ಯಮಂಡಲವನ್ನು ಬಿಟ್ಟು ಹೊರಹೋದ ಒಡನೆಯೇ ನಮಗೆ ಎದುರಾಗುವುದು ಆಲ್ಫ ಸೆಂಟಾರಿ ನಕ್ಷತ್ರಪುಂಜ. ಅದು ನಮ್ಮಿಂದ ಕೇವಲ ಎಂಟು ಜ್ಯೋತಿರ್ವರ್ಷಗಳಷ್ಟು ದೂರದಲ್ಲಿದೆ. ನನಗೂ ಅದಕ್ಕೂ ಇರುವ ಸಂಬಂಧವೇನು ? ಹೇಗೆ ಸಂಪರ್ಕಿಸಲಿ ! ಆ ಕತೆಯಲ್ಲಿ ಬರುವಂತೆ 'ರಾಜ ಧರಿಸಿರುವ ವಸ್ತ್ರ ಬೇರಾರಿಗೂ ಕಾಣುವುದಿಲ್ಲ'. ಅದು ಕೇವಲ ಜ್ಞಾನಿಗಳಿಗೆ ಮಾತ್ರ ಕಾಣಿಸುತ್ತದೆ. ರಾಜ ಮಾತ್ರ ಬೃಹದಾಕಾರವಾಗಿ ಹಿಗ್ಗುತ್ತಲೇ ಇದ್ದಾನೆ. ದಿನದಿನವೂ ಆ ಕಾಣದ ವಸ್ತ್ರವನ್ನು 'ಕಂಡವರ' ಸಂಖ್ಯೆ ಹೆಚ್ಚುತ್ತಲೇ ಇದೆ !

ಆಧ್ಯಾತ್ಮಿಕತೆ ಎನ್ನುವುದು ಮತಧರ್ಮೀಯತೆಯ ಎರಡನೇ ಹಂತದ ರಕ್ಷಣಾ ಕೋಟೆಯೆಂದು ನಾನು ಭಾವಿಸಿದ್ದೆ. ಸಾಂಪ್ರದಾಯಿಕ ಮತಧರ್ಮೀಯತೆಯ ಬಗ್ಗೆ ಮುಜುಗರ ಹೆಚ್ಚಾದಂತೆ, ಅದು ನಗರ ಮಾರುಕಟ್ಟೆಯ ಕೇಂದ್ರದಲ್ಲಿ ಬಿಕರಿಯಾಗುವ ವಸ್ತುವಾಗುತ್ತಿದ್ದಂತೆಯೇ, ಆಧ್ಯಾತ್ಮಿಕತೆಯ ಪರವಾದವರು ವಿಶ್ವ ಮತ್ತು ಅತ್ಯುಚ್ಚಮಟ್ಟದ ಪ್ರಜ್ಞೆ ಮುಂತಾದ ಕಲ್ಪನೆಗಳ ತೆಳುಪರದೆಯ ಹಿಂದೆ ಅವಿತುಕೊಳ್ಳುತ್ತಿದ್ದಾರೆ. ಆದರೆ ಇದಿಷ್ಟೇ ಅಲ್ಲ. ಸಾಂಪ್ರದಾಯಿಕ ಮತಧರ್ಮ ವಿತರಕರೂ ಮತ್ತು ಆಧ್ಯಾತ್ಮಿಕತೆಯ ಗ್ರಾಹಕರೂ ಬೇರೆ ಬೇರೆ. ಜಗತ್ತಿನ ಭೂಪಟವನ್ನು ಗಮನಿಸಿ. ಅದರಲ್ಲಿ ತೀವ್ರವಾದ ಮತಧರ್ಮದ ಅನುಯಾಯಿಗಳು ಎಲ್ಲೆಲ್ಲಿ ಕೇಂದ್ರೀಕರಿಸಿದ್ದಾರೋ ಅವನ್ನು ಗುರುತಿಸುತ್ತಾ ಬನ್ನಿ. ಭಾರತದಲ್ಲಿ, ಭಾರತದ ಸುತ್ತಮುತ್ತ, ಏಷ್ಯಾಖಂಡದಲ್ಲಿ, ದಕ್ಷಿಣ ಅಮೆರಿಕ ಮತ್ತು ಯೂರೋಪಿನಲ್ಲಿ, ಎಲ್ಲೆಲ್ಲಿ ತೀವ್ರ ಮತೀಯತೆಯ ಕೇಂದ್ರಗಳಿವೆಯೋ ಅಲ್ಲೆಲ್ಲ ಮಾನವ ಹಕ್ಕುಗಳು ಮೊಟಕಾಗಿರುವುದನ್ನು ಕಾಣಬಹುದು. ಅಲ್ಲಿ ದಬ್ಬಾಳಿಕೆ ಇರುತ್ತದೆ. ನನ್ನ ಮಾರ್ಕ್ಸ್‌ವಾದೀ ಗೆಳೆಯರು ಮತಧರ್ಮವೆಂಬುದು ಶೋಷಿತರ ದೀನದಲಿತರ ದಮನಿತರ ಮಾದಕದ್ರವ್ಯ, ಅದು ಅವರ ನಿಟ್ಟುಸಿರು ಎನ್ನುತ್ತಾರೆ. ಅದನ್ನು ನಾನು ಚರ್ಚಿಸ ಹೋಗುವುದಿಲ್ಲ. ಆದರೆ ಇಂದು ನಿಶ್ಚಯವಾಗಿ ಮತಧರ್ಮವೆಂಬುದು ಉಳ್ಳವರಿಗೆ ನಿದ್ರೆ ಬರಿಸುವ ಮಾದಕದ್ರವ್ಯವಂತೂ ಹೌದು.

ಇಲ್ಲಿಯ ಗ್ರಾಹಕರು ಹೊಟ್ಟೆ ತುಂಬಿದವರು, ಅತಿ ಶ್ರೀಮಂತರು. ಹೀಗಾಗಿ ಅವರ ಗುರುವಿಗೆ ಅಧಿಕಾರ, ಗೌರವ, ಮಾನ್ಯತೆ, ಸಂಪತ್ತು (ಅದೇನೂ ಅಷ್ಟು ಮುಖ್ಯವಲ್ಲವೆನ್ನಬಹುದು), ಅವರ ರಾಜಕೀಯ ಶಕ್ತಿ ಇವೆಲ್ಲ ದಕ್ಕುತ್ತವೆ. ಶಿಷ್ಯನಿಗೆ ಏನು ಸಿಗುತ್ತದೆ ? ಈ ಶಿಷ್ಯರನ್ನೆಲ್ಲ ಗಮನಿಸಿದರೆ ಒಂದು ವಿಷಯ ತಿಳಿದುಬರುತ್ತದೆ – ಅವರೆಲ್ಲಾ ಒಂದೇ ರೀತಿಯವರಲ್ಲ, ಹಲವು ರೀತಿಯಲ್ಲಿ ವಿಭಿನ್ನವಾದ ವರ್ಗ ಅದು. ಒಬ್ಬನಿಗೆ ಜೀವನದಲ್ಲಿ ಬಯಸಿದ್ದೆಲ್ಲ ಸಿಕ್ಕಿದೆ – ಸಂಪತ್ತು, ಅಧಿಕಾರ ಇತ್ಯಾದಿ. ಈಗ ಅವನಿಗೆ ಪರಲೋಕದಲ್ಲಿ ಸದ್ಗತಿ ಖಾತ್ರಿಯಾಗಬೇಕಷ್ಟೆ. ಇದೊಂದು ವರ್ಗ. ಗುರುವಿನ ಉಪದೇಶ ಅವನಿಗೆ ಸಮಾಧಾನ ತರುವಂಥದು : ''ನೀನು ಮಾಡುತ್ತಿರುವ ಈ ಎಲ್ಲ ವ್ಯವಹಾರವೂ ನಿಷ್ಕಾಮಕರ್ಮ. ಈ ಮಾಯಾಲೋಕದಲ್ಲಿ ನಿನ್ನ ಪಾತ್ರವನ್ನು ನೀನು ವಹಿಸುತ್ತಿದ್ದೀಯೆ. ಈ ಆಸ್ತಿಪಾಸ್ತಿ ಸಂಪತ್ತು ಸಂಗ್ರಹಣೆಯ ಕೆಲಸ ಆ ಪಾತ್ರದ ಮುಖವಷ್ಟೆ. ಭಾವುಕವಾಗಿ ನೀವು ಅದರೊಳಗಿಲ್ಲ. ನೀನೀಗ ನನ್ನಿಂದ ಶಾಶ್ವತ ಸತ್ಯಗಳನ್ನು ಅರಸಿ ಬಂದಿದ್ದೀಯೆ. ನಿನ್ನ ತನು ಕಷ್ಮಲಗೊಂಡಿದ್ದರೂ ನಿನ್ನ ಆತ್ಮ ಶುದ್ಧವಾಗಿಯೇ ಇದೆ.'' ಗುರುವಿನ ಆ ಉಪದೇಶ ಅವನಿಗೆ ಎಲ್ಲಿಲ್ಲದ ಸಂತೋಷ ಉಂಟುಮಾಡುತ್ತದೆ. ತನ್ನ ಬಗ್ಗೆ ತನಗೇ ಮೆಚ್ಚಿಗೆ ಉಂಟಾಗುತ್ತದೆ. ವಾರದಲ್ಲಿ ಏಳು ದಿವಸವೂ ಶೋಷಣೆಯಲ್ಲಿಯೇ ತೊಡಗಿದ್ದರೂ, ವಾರಾಂತ್ಯದಲ್ಲಿ ಗುರುವಿನ ಪಾದ ಸಾಮೀಪ್ಯದಲ್ಲಿ ಅವನು ತಾನು ಒಬ್ಬ ಸಂವೇದನಾಶೀಲ ಎಂದು ಭಾವಿಸಿಕೊಳ್ಳಲು ಸಾಧ್ಯವಾಗುತ್ತದೆ.

ಮತ್ತೊಂದು ಬಗೆಯ ಗ್ರಾಹಕ ಇದ್ದಾನೆ. ಈ ಆಧ್ಯಾತ್ಮಿಕತೆಯ ಮಾರುಕಟ್ಟೆಯಲ್ಲಿ ಅವನೂ ಅತ್ಯಂತ ಶ್ರೀಮಂತನೇ. ಯಾವುದೇ ಸಂದರ್ಭದಲ್ಲಿ ಒಬ್ಬ ಗೆದ್ದನೋ ಸೋತನೋ ಎಂಬುದು ಹೋಲಿಕೆಯ ವಿಷಯವಷ್ಟೆ? ಪಾದಚಾರಿ ರಸ್ತೆಯಲ್ಲಿ ಕುಳಿತು ಜೂಜಾಡಿ ರಿಕ್ಷ ನಡೆಸುವವನೊಬ್ಬ ೧೦೦ ರೂಗಳನ್ನು ಗೆದ್ದಾಗ ಅವನಿಗೆ ಪರಮ ತೃಪ್ತಿ; ಗೆದ್ದೆ! ಎಂದು ಕೊಳ್ಳುತ್ತಾನೆ. ಅದೇ ವಾಣಿಜ್ಯಲೋಕದ ಹಿರಿಯ ಉದ್ಯಮಿಯೊಬ್ಬ ಕೇವಲ ೩೦೦ ಮಿಲಿಯನ್ ಡಾಲರ್ ಗಳಿಸಿದಾಗ, ಅದೂ ಅವನ ಸೋದರ ಉದ್ಯಮಿ ಬಿಲಿಯನ್ ಡಾಲರ್ ಗಳಿಸಿರುವಾಗ, ತಾನು ಸೋತೆನೆಂದು ಖಿನ್ನನಾಗುತ್ತಾನೆ. ಈ ಶ್ರೀಮಂತವಾದ ಅಪಜಯ ಪಡೆದವ ಏನು ಮಾಡುತ್ತಾನೆ, ಆಗ ? ಅವನಿಗೆ ಒಬ್ಬ ಗುರು ಬೇಕು. ಅವನನ್ನು ಆಶ್ರಯಿಸಿ ಉಪದೇಶ ಪಡೆಯುತ್ತಾನೆ. ''ನೀನು ಸೋತೆ ಎಂದು ಹೇಳಿದವರ್‍ಯಾರಪ್ಪ? ನೀನು ಗೆಲ್ಲಬಹುದಾದ ಹಲವು ವಿಶ್ವಗಳಿವೆ ಅದಕ್ಕೆ ಬೇಕಾದ ಮತ್ತೊಂದು ದರ್ಶನವಿದೆ ನಿನಗೆ. ನಿನಗೇ ವಿಶಿಷ್ಟವಾದ ಸಂವೇದನೆ ಇದೆ. ಅದು ನಿನ್ನ ಸೋದರನಲ್ಲಿ ಇಲ್ಲ. ಅವನು ತಾನು ಜಯಶಾಲಿ ಎಂದುಕೊಂಡಿದ್ದಾನೆ. ಅದು ನಿಜವಲ್ಲ. ನಿನಗೆ ಈಗಾಗಲೆ ಅನುಭವವಾಗಿರುವಂತೆ ಜಗತ್ತು ತುಂಬ ಕ್ರೂರವಾದುದು. ಅದು ನಿಷ್ಕರುಣೆಯಿಂದ ಹೇಳುತ್ತದೆ : ಸ್ವಾಮಿ ನಿಮಗೆ ಸಿಕ್ಕಿದ್ದು ಹತ್ತಕ್ಕೆ ಮೂರು ಅಂಕ ಅನ್ನುತ್ತದೆ ಅದು. ಆ ಇನ್ನೊಬ್ಬನಿಗೆ ಹತ್ತಕ್ಕೆ ಏಳು ಬಂತು ಎನ್ನುತ್ತದೆ. ಅದು ಹಾಗಿರಲಿ, ಅವರು ನಿನ್ನನ್ನು ಆ ಕಮ್ಮಿ-ಹೆಚ್ಚಿನ ಅಂಕಗಳ ಮಟ್ಟದಲ್ಲೇ ಅಳೆಯುತ್ತಾರೆ.'' ಅಯ್ಯೋಪಾಪ ಎನ್ನುವ ಈ ಅನುಕಂಪದ ಮಾತುಗಳು ಅವನಿಗೆ ಸಮಾಧಾನ ನೀಡುತ್ತವೆ. ಇದು ಅದೇ ಗುರುವಿನ ಮತ್ತೊಂದು ಮುಖ.

ಈ ಪೈಕಿ ಮತ್ತೊಂದು ಗುಂಪುಂಟು. ನಾನು ಇವರ ಬಗ್ಗೆ ಅಸಡ್ಡೆಯಿಂದಾಗಲೀ, ನಾನು ಅವರಿಗಿಂತ ಉತ್ತಮನೆಂದಾಗಲೀ ಎನ್ನುವ ಧೋರಣೆಯಿಂದ ಹೇಳುತ್ತಿಲ್ಲ. ಅವರ ಬಗ್ಗೆ ನನಗೆ ಯಾವುದೇ ಕೆಟ್ಟ ಭಾವನೆಯೂ ಇಲ್ಲ. ನನಗಿರುವುದು ಕೇವಲ ಪರಿತಾಪವೇ. ಇದೇ ಆಧುನಿಕ ಗುರುಪರಂಪರೆಗೆ ಅತಿಹೆಚ್ಚಿನ ಸಂಖ್ಯೆಯ ಶಿಷ್ಯೆಯರನ್ನು ಒದಗಿಸುವುದು. ಅದು ಶ್ರೀಮಂತಳಾದ ಅಸುಖೀ ಮಡದಿ. ಈ ಹೆಣ್ಣು ತನ್ನ ಎಲ್ಲ ವಿಶಿಷ್ಟ ವ್ಯಕ್ತಿತ್ವವನ್ನು, ಬಯಕೆಗಳನ್ನು, ಕನಸುಗಳನ್ನು, ಸ್ವಂತಿಕೆಯನ್ನು ಮದುವೆಯೆಂಬ ಬಲಿಪೀಠಕ್ಕೆ ಧಾರೆ ಎರೆದಿದ್ದಾಳೆ. ಆದರೆ ಆಕೆಗೆ ದಕ್ಕಿದ್ದು ಅವಳ ಕಡೆ ತಿರುಗಿಯೂ ನೋಡದ ಪತಿದೇವ. ಆಕೆಗೆ ಒಂದೆರಡು ಮಕ್ಕಳನ್ನು ನೀಡಿದ್ದಾನೆ. ಆದರೆ ಪತಿಗೆ ಬಿಡುವಿಲ್ಲದ ವ್ಯವಹಾರ. ಹಾಗೆಯೇ ಬಿಡುವಿಲ್ಲದಷ್ಟು ಹೆಂಗೆಳೆಯರ ಸಹವಾಸ. ಈ ಅಸುಖೀ ಭಾರ್ಯೆಗೆ ಒರಗಿಕೊಳ್ಳಲು

ಒಂದು ತೋಳಿನ ಆಸರೆ ಬೇಕು. ಅವಳಿಗೆ ತನ್ನ ಅಸ್ತಿತ್ವದ ವೈಫಲ್ಯದ ಅರಿವಾಗಿದೆ. ಮುಂದೆ ಎಂದೂ ಇದು ಬದಲಾಗುವ ಸಾಧ್ಯತೆಗಳೂ ಕಂಡುಬರುತ್ತಿಲ್ಲ. ಅವಳ ಒಳತೋಟಿ ಬರಿದೋ ಬರಿದು. ಎಲ್ಲ ಸೌಖ್ಯಗಳಿದ್ದರೂ ತೆರವಿನದು, ಗುರಿಯಿಲ್ಲದ್ದು. ಇದು ತುಂಬ ವಿಷಾದನೀಯ ಪರಿಸ್ಥಿತಿ ಆದರೆ ವಾಸ್ತವ ಸಂಗತಿ.

ಮತ್ತೆ ಕೆಲವು ಭಕ್ತರ ಪರಿಸ್ಥಿತಿ ಬೇರೆಯದೇ ಇರುತ್ತದೆ. ತಮ್ಮ ಪ್ರೀತಿಯ ಮಗು ಅಕಾಲದಲ್ಲಿ ಸಾಯುತ್ತದೆ, ಮಡದಿ ಗತಿಸುತ್ತಾಳೆ; ಪತಿಯ ಮರಣ ಅಥವಾ ಅವರು ಆಸ್ತಿ ಕಳೆದುಕೊಳ್ಳುತ್ತಾರೆ, ಉದ್ದಿಮೆ ಪರರ ಪಾಲಾಗುತ್ತದೆ. ಅಂಥ ಹಲವಾರು ಅನಿರೀಕ್ಷಿತ ಧಡಿ ಏಟುಗಳು. ಸಹಿಸಲಾರದ ಹಿಂಸೆ ದುಃಖ. ನನಗೇ ಏಕೆ ಹೀಗೆ ! ಎಂದು ಆಶ್ಚರ್ಯಗೊಳ್ಳುತ್ತಾರೆ. ಆ ಪ್ರಶ್ನೆ ಕೇಳಲು ಗುರುವಿನ ಬಳಿ ಧಾವಿಸುತ್ತಾರೆ. ಗುರು ಅದು ಕರ್ಮದ ಆಟ ಎಂದು ಸಮಾಧಾನ ಹೇಳುತ್ತಾನೆ. "ನನ್ನ ಮಾತು ಕೇಳುವಿಯಾದರೆ ನಿನಗೆ ಮತ್ತೊಂದು, ನೋವಿಲ್ಲದ, ಸಾವಿಲ್ಲದ ಲೋಕದರ್ಶನ ಮಾಡಿಸುತ್ತೇನೆ. ಅಲ್ಲಿ ಅಮರತ್ವ ಪಡೆಯಬಲ್ಲೆ. ಅದು ಸದಾ ಆನಂದಮಯ. ನನ್ನನ್ನು ಅನುಸರಿಸಿ, ನಿಮ್ಮನ್ನು ನಾನು ಅಲ್ಲಿಗೆ ತಲುಪಿಸುತ್ತೇನೆ, ಆ ಸ್ವರ್ಗಕ್ಕೆ" ಎನ್ನುತ್ತಾನೆ ಗುರು. ನಾನು ನಿಮಗೆ ನಿರಾಸೆ ಉಂಟುಮಾಡುತ್ತೇನೆ ಎಂದುಕೊಳ್ಳಬೇಡಿ, ಸತ್ಯವೆಂದರೆ ಅಂಥದೊಂದು ತಾಣ ಇಲ್ಲ. ಜೀವನದಲ್ಲಿ ಎಲ್ಲರಿಗೂ ಅವರವರ ಪಾಲಿನ ದುಃಖ ಒಂದಿಷ್ಟು ಇದ್ದೇ ಇರುತ್ತದೆ. ಅಪಜಯಗಳು, ನೋವು ಇವೆಲ್ಲ ಜೀವನದ ಭಾಗ. ಆದರೆ ಗುರುವಿನ ಆ ಭರವಸೆ ಅವರಿಗೆ ಒಂದಿಷ್ಟು ಸದ್ಯದ ಸಮಾಧಾನ ಉಂಟುಮಾಡುತ್ತದೆ.

ಹೌದಪ್ಪ! ಇದರಿಂದ ಅವರಿಗೆ ಒಂದಿಷ್ಟು ಸಮಾಧಾನ ಸಿಕ್ಕರೆ, ಮನಃಶಾಂತಿ ದಕ್ಕಿದರೆ ನಿನಗೇನು ನಷ್ಟ ಇದರಿಂದ ? ಹಾಗೆಂದೀರಿ ನಿಮ್ಮಲ್ಲಿ ಕೆಲವರಾದರೂ. ನಾನು ಓದಿದ ಕತೆಯೊಂದು ಜ್ಞಾಪಕಕ್ಕೆ ಬಂತು. ನಮ್ಮ ನಾಡಿನ ಹಳೆಯ ಕತೆ ಅದು. ಹಸಿದ ನಾಯಿಗೆ ಒಂದು ಎಲುಬು ಸಿಕ್ಕಿತು. ಅದನ್ನೇ ತಿನ್ನಲು ತವಕಿಸಿ ಕಚ್ಚಿದ ಅದರ ನಾಲಗೆ ಸೀಳಿ ರಕ್ತ ಬಂತು. ತನ್ನದೇ ರಕ್ತವನ್ನು ಸವಿಯುತ್ತ ತನಗೆ ಒಳ್ಳೆಯ ಪೋಷಣೆ ದೊರೆಯಿತು ಅಂತ ನಾಯಿ ತೃಪ್ತಿಪಟ್ಟು ಕೊಂಡಿತಂತೆ ! ಹಾಗಿದೆ ಇಲ್ಲಿ ದೊರೆಯುವ ಸಮಾಧಾನ !

ನನಗೂ ಇದೆಲ್ಲಾ ವಿಷಾದ ಉಂಟುಮಾಡುತ್ತದೆ. ಈ ವಯಸ್ಕರು ಪಾಪ ಈ ರೀತಿ ವರ್ತಿಸುವುದು ನನಗೆ ಹಿಡಿಸುತ್ತಿಲ್ಲ. ಮಾದಕ ದ್ರವ್ಯಗಳು, ಮದಿರೆ ಇದೇ ರೀತಿ ತಾತ್ಕಾಲಿಕ ಸೌಖ್ಯ ನೀಡುತ್ತವೆ. ಆದರೆ ಈ ಶಾಂತಿ, ಈ ಸೌಖ್ಯವನ್ನೇ ನಾವು ಬಯಸುವುದು ? ಅದು ಸರಿಯೆ ? ವೈಚಾರಿಕತೆಯಿಂದ ಮೂಡಿಬರದ ಅಂಥ ಯಾವುದೇ ಸಮಾಧಾನ ಪರಿಸ್ಥಿತಿಯೂ ಆತ್ಮವಂಚನೆಯಷ್ಟೆ? ಸತ್ಯ ಪರಿಸ್ಥಿತಿಯಿಂದ ದೂರ ಒಯ್ಯುವ ಯಾವುದೇ ಮಾರ್ಗವೂ ಭ್ರಮಾತ್ಮಕ, ಮರೀಚಿಕೆ. ಈ ಪರಿಸ್ಥಿತಿಯಲ್ಲಿ ಒಂದು ರೀತಿಯ ರಕ್ಷಿತ ಭಾವನೆ, ಜೋಪಾನವಾಗಿರುವ ಅನುಭವ ಬರಬಹುದು. ಮೂಗಾಲಿ ಸೈಕಲ್ಲಿನಲ್ಲಿ ಬೀಳುವ ಭಯವಿಲ್ಲದ ನಿರಾತಂಕದಂತೆ. ಆದರೆ ಪ್ರಾಪ್ತ ವಯಸ್ಕರು ಮೂಗಾಲಿ ಸೈಕಲ್ ಬಿಡುವರೆ? ಇಗ್ಗಾಲಿಯಲ್ಲಿ ಬೀಳ ಬಹುದು. ಆದರೆ ಅದು ಅದರ ಸಹಜಗುಣವಾಗಿದ್ದು, ಯಾರೂ ಅದರಿಂದ ವಿಚಲಿತರಾಗುವುದಿಲ್ಲ.




ಈ ಗ್ರಾಹಕರ ಪೈಕಿ ಮತ್ತೊಂದು ಗುಂಪು ಇದೆ. ಗಾಲ್ಫ್ ಕ್ಲಬ್‌ನ ಸದಸ್ಯರೆಲ್ಲ ಗಾಲ್ಫ್ ಬಲ್ಲವರಲ್ಲ! ಅದನ್ನು ಮೆಚ್ಚಿದವರೂ ಅಲ್ಲ. ಆಶ್ರಮದೊಳಕ್ಕೆ ಪ್ರವೇಶಿಸಿ ದವರೆಲ್ಲ ಆಧ್ಯಾತ್ಮಿಕ ಆಕಾಂಕ್ಷಿಗಳೂ ಅಲ್ಲ. ದೆಹಲಿಯ ಸಮೀಪದಲ್ಲಿರುವ ಆಶ್ರಮ ಒಂದಕ್ಕೆ ಚಲನಚಿತ್ರ ತಯಾರಕರೊಬ್ಬರು ಹೋಗುತ್ತಿರುತ್ತಾರೆ. ನನ್ನನ್ನು ಒಮ್ಮೆಯಾದರೂ ಅವರ ಗುರುವನ್ನು ನೋಡಬೇಕು ಎಂದು ಒತ್ತಾಯಿಸಿದರು. ಅವರು ನೀಡಿದ ಕಾರಣ : ಅಲ್ಲಿ ದೆಹಲಿಯ ಸಮಾಜದ ಅತ್ಯುನ್ನತ ವರ್ಗದವರನ್ನೆಲ್ಲಾ ಒಂದೆಡೆ ಸಂಧಿಸಬಹುದು. ನನ್ನ ಗುರು ಇನ್ನೇನು ಮತ್ತೊಬ್ಬ ಚಂದ್ರಸ್ವಾಮಿಯಾಗುವ ಹಂತದಲ್ಲಿದ್ದಾರೆ. ವ್ಯಾವಹಾರಿಕವಾಗಿ ಇದು ಮುಖ್ಯವಾದವರು ಪರಸ್ಪರ ಸಂಧಿಸಲು ಒಂದು ವೇದಿಕೆ, ಎಂದು !

ನನಗೆ ಆಧ್ಯಾತ್ಮಿಕತೆಯನ್ನು, ಮತಧರ್ಮೀಯತೆಯನ್ನು ತಾಜಾತನದಿಂದ ಹೊರಸೂಸುವವರ ಬಗ್ಗೆ ಅಪಾರವಾದ ಗೌರವವಿದೆ. ಇಂಥವುಗಳಲ್ಲಿ ತೊಡಗಿಯೂ ಅವರು ಸದ್ಗುಣಿಗಳಾಗಿರುವುದನ್ನು ನಾನು ಕಂಡಿದ್ದೇನೆ. ಪ್ರತಿಯೊಂದು ವೈಯಕ್ತಿಕ ಭಾವನೆಗೂ, ಭಾವುಕತೆಗೂ ಒಂದು ಮಿತಿ ಇದೆಯಷ್ಟೆ. ನನ್ನ ಮೆಚ್ಚುಗೆಗೆ ಇದೇ ಕಾರಣ.

ನಮ್ಮ ದೃಷ್ಟಿ ಒಂದು ದೂರದವರೆಗೆ ನೋಡಬಲ್ಲದು. ಅದಕ್ಕೊಂದು ಮಿತಿಯಿದೆ. ಕಿವಿಯ ಕೇಳುವ ಶಕ್ತಿಗೆ, ಹಾಗೆಯೇ ದುಃಖವಾದಾಗ ಅಳುವುದಕ್ಕೆ ಇವಕ್ಕೆಲ್ಲ ಒಂದು ಮಿತಿಯಿದೆ, ಕೊನೆಯಿದೆ. ಸುಖಾನುಭವವೂ ಚಿರಕಾಲದ್ದಲ್ಲ. ಹಿರಿತನಕ್ಕೂ ಈ ಮಿತಿ ಇದೆ. ಸಾಧಾರಣ ಮನುಷ್ಯನಿಗೂ ಖಂಡಿತ ತನ್ನಲ್ಲಿರುವ ಹಿರಿತನವನ್ನು ಹೊರಗೆಡಹುವ ಸಾಮರ್ಥ್ಯವಿದೆ. ಸಹಜ ಪ್ರವೃತ್ತಿಯಿದೆ. ಅದು ಅವನಲ್ಲಿ ಹತ್ತು ಅಂಕಗಳಷ್ಟು ಎಂದು ಆದರೆ, ಅವನು ಮಸೀದಿಗೆ ಪ್ರಾರ್ಥನೆ ಮಾಡಲು ಹೋದಾಗ ಈ ಸಾಮರ್ಥ್ಯದ ಅರ್ಧವನ್ನು ವೆಚ್ಚಮಾಡಿರುತ್ತಾನೆ. ದೇವಸ್ಥಾನದ ದೇವರ ಬಳಿ, ಮೆಚ್ಚಿದ ಗುರುವಿನ ಪಾದದ ಬಳಿ ಆಗುವುದೂ ಹೀಗೆಯೇ. ಅವನ ಒಳ್ಳೆಯತನದ ಬಹುಭಾಗ ಅಲ್ಲಿ ಪ್ರಕಟವಾಗಿರುತ್ತದೆ. ಈ ಸ್ಥಳಗಳಲ್ಲಿ ಅವನ ಒಳ್ಳೆಯತನವನ್ನು ವೆಚ್ಚಮಾಡಿ ಪಡೆದದ್ದು ಲೆಕ್ಕಕ್ಕೆ ಸಿಗದಂಥದು. ನಾನು ಪ್ರಾರ್ಥನೆಗೆ ಮಸೀದಿಗೆ ಹೋಗುವುದಿಲ್ಲ. ನಾನು ಗುರುವಿನ ಬಳಿಯೂ ಹೋಗುವುದಿಲ್ಲ. ಚರ್ಚು, ಮಸೀದಿ, ದೇವಸ್ಥಾನ ಎಲ್ಲೂ ನಾನು ನನ್ನ ಒಳ್ಳೆಯತನವನ್ನು ವೆಚ್ಚಮಾಡುವುದಿಲ್ಲ. ಹೀಗಾಗಿ ಅದನ್ನು ಯಾರಿಗೋ ಸಹಾಯವೆಸಗುವಾಗ, ಹಸಿದವರಿಗೆ ಊಟ ನೀಡಿದಾಗ, ನೆಲೆಯಿಲ್ಲದವನಿಗೆ ಒಂದು ನೆಲೆ ಕಲ್ಪಿಸಿಕೊಟ್ಟಾಗ ನನ್ನ ಒಳ್ಳೆಯತನದ ಹತ್ತನ್ನೂ ವೆಚ್ಚ ಮಾಡಬಹುದು. ಇಲ್ಲಿ ಪಡೆದದ್ದನ್ನು ಅಳೆದು ನೋಡಬಹುದು. ಮಂದಿರ ಮಸೀದಿಗಳಿಗೆ ಪ್ರಾರ್ಥನೆಗೆ ಹೋಗುವವರಲ್ಲೂ ಹಲವರು ಇಂಥ ಒಳ್ಳೆಯ ಕೆಲಸಗಳಲ್ಲಿ ಭಾಗವಹಿಸುತ್ತಾರೆ. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲುತ್ತವೆ. ಅವರು ಮಹಾನುಭಾವರು.

ನಾನು ಸಾಮಾನ್ಯವಾಗಿ ಕೃಷ್ಣ, ಕಬೀರ, ಗೌತಮ ಬುದ್ಧರಿಗೆ ಗೌರವ ಸಲ್ಲಿಸುತ್ತೇನೆ. ಮತಧರ್ಮೀಯರ ಬಗ್ಗೆ ಇಷ್ಟೆಲ್ಲಾ ಋಣಾತ್ಮಕವಾಗಿ ಮಾತನಾಡುವ ನಾನು ಹಾಗೇಕೆ ಮಾಡುತ್ತೇನೆ ಎಂದು ಪ್ರಶ್ನಿಸಬಹುದು. ಅವರೆಲ್ಲಾ ಮಾನವನ ನಾಗರಿಕತೆಯನ್ನು ಬೆಳೆಸುವುದಕ್ಕೆ ಅಪಾರವಾದ ಕೊಡುಗೆ ನೀಡಿದವರು. ಅವರು ಬದುಕಿ ಬಾಳಿದ ಕಾಲ ಬೇರೆ ಬೇರೆಯದೇ ಆದರೂ ಅವರೆಲ್ಲರನ್ನೂ ಒಂದೇ ಸೂತ್ರದಲ್ಲಿ ಪೋಣಿಸುವ ಒಂದು ಗುಣವಿದೆ. ಅವರು ಅನ್ಯಾಯದ ವಿರುದ್ಧ ಸಿಡಿದೆದ್ದವರು. ಕೆಳಗೆ ಬಿದ್ದವರ ಪರವಾಗಿ ಹೋರಾಡಿದರು. ರಾವಣನೋ, ಕಂಸನೋ, ಈಜಿಪ್ಟಿನ ಫ್ಯಾರೋವೋ, ಪೋಪನೋ, ಗಾಂಧಿ ವಿರೋಧಿಸಿದ ಬ್ರಿಟಿಷ್ ಸಾಮ್ರಾಜ್ಯದಂಥದೋ, ಕಬೀರ ಎದುರಿಸಿದ ಫಿರೋಜ್ ತೊಗಲಖನ ಅನ್ಯಮತ ದ್ವೇಷಿ ಆಡಳಿತವೋ ಅವುಗಳ ವಿರುದ್ಧ ಹೋರಾಡಿದ ಅವರು ಮಹನೀಯರು.

ಇಂದಿನ ಕಟು ಸತ್ಯವೇನು ? ಇಂದು ಆಧ್ಯಾತ್ಮಿಕವಾಗಿ ವಿಕಸಿತರಾದ ಈ ಜನ ಏಕೆ ಅನ್ಯಾಯಗಳ ವಿರುದ್ಧ ಎದ್ದು ನಿಲ್ಲುತ್ತಿಲ್ಲ ಎನ್ನುವುದು ಆಶ್ಚರ್ಯಕರ ವಿಷಯ. ಆಳುವವರ್ಗದ ದಬ್ಬಾಳಿಕೆಯ ವಿರುದ್ಧ, ಸವಲತ್ತು ಪಡೆದವರು ಬೆರಳೆತ್ತುತ್ತಿಲ್ಲ. ಇವರು ಮಾಡುವ ದಾನಧರ್ಮಗಳೂ ಆಳುವವರ್ಗದ ಒಪ್ಪಿಗೆ ಪಡೆದೇ ನಡೆಯುವಂಥವು. ಕದ ಮುಚ್ಚಿದ ದೇವಸ್ಥಾನದೊಳಕ್ಕೆ ದಲಿತರನ್ನು ಕರೆದುಕೊಳ್ಳುವ ಗುಣಗಳು ಎಲ್ಲೂ ಕಂಡುಬರುತ್ತಿಲ್ಲವಲ್ಲ? ತೇಕೆದಾರರ, ಕಂಟ್ರಾಕ್ಟರುಗಳ ವಿರುದ್ಧ ಆದಿವಾಸಿಗಳ ಪರ ನಿಂತ ಗುರುವೊಬ್ಬ ನನ್ನಾದರೂ ತೋರಿಸಿಕೊಡಿ. ಗುಜರಾತಿನ ಸಂತ್ರಸ್ತರ ಸೇವೆಗೆ ಧಾವಿಸಿದ ಗುರುವೊಬ್ಬನನ್ನೂ ಕಾಣಲಿಲ್ಲವೆ! ಅವರೆಲ್ಲರೂ ಮಾನವರಷ್ಟೆ!

ಸ್ವಾಮಿ! ಶ್ರೀಮಂತರಿಗೆ ಉಸಿರಾಡುವುದನ್ನು ಹೇಳಿ ಕೊಟ್ಟರೆ ಸಾಲದು. ಅದು ಅವರಿಗೆ ಕೇವಲ ವಿನೋದ ವಾಗಿದೆ ಅಷ್ಟೆ. ಆತ್ಮಸಾಕ್ಷಿ ಸತ್ತವರ ನಟನೆಗಳು ಅವು. ಅದು ನಯವಂಚನೆ. ಇದಕ್ಕೆ ಇಂಗ್ಲಿಷಿನಲ್ಲಿ ಬಳಸುವ ಪದ 'ಹೋಕ್ಸ್'. ನಮಸ್ಕಾರ !

---


**ಕನ್ನಡಕ್ಕೆ : ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭



# ಗಣಕದಲ್ಲಿ ಕನ್ನಡ

## (ಆಗಿರುವುದು - ಆಗಬೇಕಾದದ್ದು)

ಇತ್ತೀಚಿನ ದಿನಗಳಲ್ಲಿ ಗಣಕ ತಾಂತ್ರಿಕತೆಯು ನಮ್ಮ ಎಲ್ಲ ಬಗೆಯ ವ್ಯವಹಾರಗಳಿಗೆ ಅನಿವಾರ್ಯವೆನಿಸುವಂತೆ ಆಗಿಬಿಟ್ಟಿದೆ. ಜೀವನದ ಎಲ್ಲ ಕ್ಷೇತ್ರಗಳ ಚಟುವಟಿಕೆಗಳಲ್ಲಿ ಬಹಳಷ್ಟು ಸಂದರ್ಭಗಳಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಗಣಕಗಳ ಬಳಕೆಯಾಗುತ್ತಿದೆ. ನಮ್ಮ ಜೀವನದ ವಿವಿಧ ರೀತಿಯ ಚಟುವಟಿಕೆಗಳ ಅಗಾಧವಾದ ಹಾಗೂ ವೈವಿಧ್ಯಮಯವಾದ ಮಾಹಿತಿ ಭಂಡಾರಗಳನ್ನು ಗಣಕದ ನೆನಪಿನ ಕೋಶಗಳಲ್ಲಿ ಸಂಗ್ರಹಿಸಿ ಇಟ್ಟುಕೊಳ್ಳುವುದು, ನಮ್ಮ ಬೇಡಿಕೆಗಳಿಗೆ ಅನುಗುಣವಾಗಿ ಅವುಗಳಲ್ಲಿ ಸೂಕ್ತವಾದವುಗಳನ್ನು ಆಯ್ದುಕೊಂಡು ಅಗತ್ಯವಾದ ರೀತಿಯಲ್ಲಿ ಸಂಸ್ಕರಿಸಿ ಮಾಹಿತಿಗಳನ್ನು ಪಡೆಯುವ ತಾಂತ್ರಿಕ ಸಾಧನೆಯೇ ಗಣಕದ ಈ ಮಹಾನ್ ಬೆಳವಣಿಗೆ ಹಾಗೂ ಬಳಕೆಗೆ ಕಾರಣವಾಗಿದೆ. ಗಣಕದಲ್ಲಿ ಅಂಕಿ ಸಂಖ್ಯೆಗಳ ಮಾಹಿತಿಗಳೇ ಅಲ್ಲದೆ ಪಠ್ಯಮಾಹಿತಿಗಳು, ಧ್ವನಿ ಹಾಗೂ ದೃಶ್ಯ ಮಾಹಿತಿಗಳೂ ಮುಂತಾಗಿ ಎಲ್ಲ ಬಗೆಯ ಮಾಹಿತಿಗಳನ್ನೂ ಶೇಖರಿಸಿಟ್ಟು ಅವುಗಳನ್ನು ಅಗತ್ಯವಾದ ರೀತಿಯಲ್ಲಿ ಬಳಸಿಕೊಳ್ಳಲು ಈಗ ಸಾಧ್ಯವಾಗಿದೆ. ನಿಸ್ತಂತು ತಾಂತ್ರಿಕತೆಯ ಬಳಕೆಯಿಂದ ಚರದೂರವಾಣಿಗಳಲ್ಲೂ ಗಣಕ ಸಂಬಂಧಿ ವ್ಯವಹಾರಗಳನ್ನು ನಡೆಸಬಹುದಾಗಿದೆ.

ನಾವು ಬಹುಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ, ಗಣಕದ ಭಾಷೆ ಕೇವಲ ದ್ವಿಮಾನಾಂಕ ಸಂಖ್ಯೆಗಳಾಗಿವೆ. ಅಂದರೆ, ಗಣಕಕ್ಕೆ ಅರ್ಥವಾಗುವುದು ಕೇವಲ ೦ ಮತ್ತು ೧ ಎರಡು ಸಂಖ್ಯೆಗಳು ಮಾತ್ರ. ಗಣಕದ ಸ್ಮರಣಕೋಶಗಳಲ್ಲಿ ಮಾಹಿತಿಗಳ ದಾಖಲಾತಿ, ಅವುಗಳಲ್ಲಿ ಅಗತ್ಯವಾದವುಗಳನ್ನು ಆಯ್ದುಕೊಂಡು ನಮಗೆ ಬೇಕಾದ ರೀತಿಯಲ್ಲಿ ಸಂಸ್ಕರಣೆ ಮಾಡಿ ಉತ್ತರಗಳನ್ನು ನೀಡುವುದು ಮುಂತಾದ ಕ್ರಿಯೆಗಳೆಲ್ಲವೂ ಈ ಸಂಖ್ಯೆಗಳ ಬಳಕೆಯಿಂದ ಮಾತ್ರ.

ಅಂದರೆ ಗಣಕದಲ್ಲಿನ ಮಾಹಿತಿಗಳು ಯಾವುದೇ ಭಾಷೆಗೆ ಸೀಮಿತವಲ್ಲ. ಆದ್ದರಿಂದಲೇ ಗಣಕಗಳಲ್ಲಿ ಎಲ್ಲ ಬಗೆಯ ಭಾಷಾ ಮಾಹಿತಿಗಳ ಅಳವಡಿಕೆ, ಅವುಗಳ ಸಂಸ್ಕರಣೆ ಮತ್ತು ವೈವಿಧ್ಯಮಯ ಸಂವಹನೆ ಮುಂತಾದುವುಗಳು ಅತ್ಯಂತ ಆಕರ್ಷಕವಾಗಿ ಪರಿಣಮಿಸಿವೆ. ಕೋಟಿಗಟ್ಟಲೆ ಮಾಹಿತಿಗಳನ್ನು ಕೈಹಿಡಿತಕ್ಕೆ ಸಿಕ್ಕುವಷ್ಟು ಪುಟ್ಟದಾದ ಕಾಂತೀಯ ಸಾಧನಗಳಲ್ಲಿ ಸಂಗ್ರಹಿಸಿಡಬಹುದಾಗಿರುವುದೂ ಅವುಗಳೊಡನೆ ಮೈಕ್ರೋ ಸೆಕೆಂಡುಗಳಲ್ಲಿ ವ್ಯವಹರಿಸಬಹುದಾದಷ್ಟು ಪರಿಣತಿಯನ್ನು ಗಳಿಸಿರುವುದೂ ಗಣಕದ ಇಂತಹ ಸರ್ವವ್ಯಾಪಿ ಬಳಕೆಗೆ ಕಾರಣವಾಗಿದೆ.

ಈ ಹಿನ್ನೆಲೆಯಲ್ಲಿ ಚಿಂತಿಸಿದಾಗ, ನಮ್ಮ ಭಾರತೀಯ ಭಾಷೆಗಳಲ್ಲಿ ಪ್ರಮುಖವಾದುದೂ ಅತ್ಯಂತ ವೈಜ್ಞಾನಿಕವೂ, ಸುಸಂಬದ್ಧವೂ, ಧ್ವನ್ಯಾತ್ಮಕವೂ ಆಗಿದ್ದು ಒಂದು ಭಾಷೆಗಿರಬೇಕಾದ ಎಲ್ಲ ಗುಣಗಳನ್ನೂ ಹೊಂದಿರುವ ಕನ್ನಡ ಭಾಷೆಯು ಗಣಕಕ್ಷೇತ್ರದಲ್ಲಿ ಸಹಜವಾಗಿಯೇ ವಿಜೃಂಭಿಸಲು ಸಾಧ್ಯ. ಇದರಿಂದಾಗಿ, ನಮ್ಮ ಸಾಮಾಜಿಕ, ಶೈಕ್ಷಣಿಕ, ವ್ಯಾವಹಾರಿಕ ಮುಂತಾದ ಎಲ್ಲ ಚಟುವಟಿಕೆಗಳು ಗಣಕೀಕರಣಗೊಳ್ಳುತ್ತಿರುವಾಗ ಸಂಬಂಧಪಟ್ಟ ಮಾಹಿತಿಗಳೆಲ್ಲವೂ ಕನ್ನಡದಲ್ಲೇ ದಾಖಲಿಸಲ್ಪಡಬೇಕು. ಇವುಗಳು ಅಗತ್ಯಾನುಸಾರವಾಗಿ ಸಂಸ್ಕರಿಸಲ್ಪಟ್ಟು ಪ್ರಸ್ತುತವೂ ಲೋಕೋಪಕಾರಿಯೂ ಆಗುವಂತೆ ಮಾಹಿತಿಗಳನ್ನು ಕನ್ನಡದಲ್ಲೇ ಪಡೆಯುವ ವಾಸ್ತವ ಸಂಗತಿಗಳು ಬಹುಮುಖ್ಯವಾಗುತ್ತವೆ. ಅಲ್ಲದೆ ಅತಿ ಪ್ರಾಚೀನ ಕಾಲದಿಂದಲೂ ಕನ್ನಡ ವಾಙ್ಮಯದಲ್ಲೇ ಬೆಳೆದುಬಂದಿರುವ ಮಹತ್ತಮವೂ ಅಗಾಧವೂ ಆಗಿರುವ ಸಾಹಿತ್ಯ ಹಾಗೂ ತರ್ಕಬದ್ಧ ವಿಚಾರಗಳನ್ನು ಗಣಕಗಳಲ್ಲಿ ವೈವಿಧ್ಯಮಯ ರೀತಿಯಲ್ಲಿ ಅಳವಡಿಸಿ ನಮಗೆ ಅಗತ್ಯವಾದ ವಿವಿಧ ರೀತಿಯ ಅಂಶಗಳನ್ನು ಗಣಕದಿಂದ ಆಯ್ದು ಪಡೆಯುವುದು ಮತ್ತು ಗಣಕದ ಸಹಾಯದಿಂದಲೇ ಸಾಹಿತ್ಯ ಕ್ಷೇತ್ರದಲ್ಲಿನ ಎಲ್ಲ ರೀತಿಯ ಅಧ್ಯಯನ, ಸಂಶೋಧನೆ ಮುಂತಾದ ವ್ಯವಹಾರಗಳನ್ನು ನಡೆಸುವುದು ಸಾಧ್ಯವಾಗುತ್ತದೆ.

ಚಿ. ವಿ. ಶ್ರೀನಾಥಶಾಸ್ತ್ರೀ

ಒಟ್ಟಿನಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕನ್ನಡದ ಬಳಕೆಯು ಅರ್ಥಪೂರ್ಣವೂ, ವ್ಯಾಪಕವೂ ಹಾಗೂ ಯಶಸ್ವಿಯೂ ಆಗಬೇಕಾದರೆ ಕನ್ನಡ-ಕನ್ನಡಿಗ-ಕರ್ನಾಟಕ ಸಂಬಂಧದ ಎಲ್ಲ ಕ್ಷೇತ್ರಗಳ ವ್ಯವಹಾರಗಳನ್ನು ಕನ್ನಡದಲ್ಲೇ ಗಣಕೀಕರಿಸಬೇಕು.

**ಗಣಕಗಳಲ್ಲಿ ಕನ್ನಡದ ಯಶಸ್ವೀ ಬಳಕೆಗಾಗಿ ಕನಿಷ್ಠ ಅಗತ್ಯಗಳು**

ಗಣಕಗಳಲ್ಲಿ ಮಾಹಿತಿಗಳ ಶೇಖರಣೆ, ಸಂಸ್ಕರಣೆ ಮತ್ತು ಅವುಗಳನ್ನು ಪರದೆಯ ಮೇಲೆ ಮೂಡಿಸುವುದು ಪ್ರಧಾನ ಅಂಶಗಳು. ಅಕ್ಷರಗಳು, ಅಂಕಿಗಳೂ ಮತ್ತು ಚಿಹ್ನೆಗಳ (+, =, ', ; ?... ಇತ್ಯಾದಿ) ರೂಪದ ಈ ಮಾಹಿತಿಗಳು ಗಣಕದ ನೆನಪಿನ ಕೋಶದಲ್ಲಿ ಸಂಖ್ಯೆಗಳಾಗಿ ಶೇಖರವಾಗಿರುತ್ತವೆ. ನಮ್ಮ ಅಪೇಕ್ಷೆಯಂತೆ ಈ ಸಂಖ್ಯೆಗಳಿಗೆ ನಿಗದಿಗೊಳಿಸಲ್ಪಟ್ಟ ಅಕ್ಷರಗಳು ಮತ್ತು ಅಂಕಿಗಳು ಗಣಕದ ಪರದೆಯ ಮೇಲೆ ಮೂಡುತ್ತವೆ. ಈ ರೀತಿಯಲ್ಲಿ ಗಣಕದ ನೆನಪಿನಕೋಶದಲ್ಲಿ ಶೇಖರವಾಗುವ ಸಂಖ್ಯೆಗಳು ಅಂತರರಾಷ್ಟ್ರೀಯ ಮಾನಕ ಸಂಖ್ಯಾ ಪದ್ಧತಿಗಳಾಗಿರುತ್ತವೆ. ಯಾವುದೇ ಭಾಷೆಯ ಅಕ್ಷರಗಳು ಅಥವಾ ಅಕ್ಷರಭಾಗಗಳು ಅಥವಾ ಚಿಹ್ನೆಗಳನ್ನು ಗಣಕ ಸ್ಮರಣಕೋಶಗಳಲ್ಲಿ ದ್ವಿಮಾನಾಂಕ ಸಂಖ್ಯೆಗಳನ್ನಾಗಿ ಶೇಖರಿಸಿಡಲಾಗುತ್ತದೆ (ಅಂದರೆ ೦ ಮತ್ತು ೧ ಎರಡೇ ಸಂಕೇತಗಳನ್ನು ಬಳಸುವ ಸಂಖ್ಯೆಗಳು). ಸ್ಮರಣಕೋಶದ ರಚನೆಯಲ್ಲಿ ಅನುಸರಿಸಿರುವ ಶಿಷ್ಟತೆಯಂತೆ ಅಕ್ಷರಗಳು ಮತ್ತು ಚಿಹ್ನೆಗಳನ್ನು ಪ್ರತಿನಿಧಿಸಲು ೨೫೬ ಅವಕಾಶಗಳು ಮಾತ್ರ ದೊರಕುತ್ತವೆ. ಅಂದರೆ ಪ್ರತಿ ಅಕ್ಷರವನ್ನೂ ಸ್ಮರಣಕೋಶವೊಂದರಲ್ಲಿ ೦ಯಿಂದ ೨೫೫ರವರೆಗೆ ಯಾವುದೇ ಒಂದು ಸಂಖ್ಯೆಯಿಂದ ಪ್ರತಿನಿಧಿಸಲು ಸಾಧ್ಯ. ಇದನ್ನೇ ಆಸ್ಕಿ (ASCII-American Standard Code for Information Interchange) ಎಂಬ ಹೆಸರಿನಿಂದ ಕರೆಯುತ್ತಾರೆ. ಯಾವುದೇ ಭಾಷೆಗೆ ಸಂಬಂಧಿಸಿದಂತೆ ಆ ಭಾಷೆಯ ಪ್ರತಿಯೊಂದು ಅಕ್ಷರ ಹಾಗೂ ಅಂಕಿಗೆ ಒಂದು ಆಸ್ಕಿ ಸಂಖ್ಯೆಯನ್ನು ಗೊತ್ತುಪಡಿಸಲಾಗಿರುತ್ತದೆ. ಇಂಗ್ಲಿಷ್‌ನಲ್ಲಿ Aಯಿಂದ Zವರೆಗೆ ಮತ್ತು aಯಿಂದ zವರೆಗೆ ಮಾತ್ರ ಅಕ್ಷರಗಳಿರುವುದರಿಂದ ಇಂಗ್ಲಿಷ್‌ಗಾಗಿ ಗಣಕದಲ್ಲಿ ಒಟ್ಟು ೫೨ ಅವಕಾಶಗಳು ಮಾತ್ರ ಸಾಕು. ಈ ೫೨ ಅಗತ್ಯಗಳಿಗಾಗಿ ೫೨ ಸಂಖ್ಯೆಗಳನ್ನು ಗೊತ್ತುಪಡಿಸಲಾಗಿದೆ. ಇಂಗ್ಲಿಷ್ ಅಕ್ಷರಗಳನ್ನು ಕ್ರಮವಾಗಿ ೬೫ರಿಂದ ೧೨೨ವರೆಗಿನ ಸಂಖ್ಯೆಗಳನ್ನಾಗಿ (ಅಂದರೆ A=೬೫, B=೬೬, a=೯೭, x=೧೨೦, y=೧೨೧ ಇತ್ಯಾದಿ ಶಿಷ್ಟತೆಗೊಳಪಡಿಸಿ) ಗುರುತಿಸಿದ್ದು, ಇದನ್ನು ಅಂತರರಾಷ್ಟ್ರೀಯ ಶಿಷ್ಟತೆಯನ್ನಾಗಿ ಒಪ್ಪಿಕೊಳ್ಳಲಾಗಿದೆ. ಕೀಲಿಮಣೆಯ ಒಂದು ಕೀಲಿಯನ್ನು ಒತ್ತಿದಾಗ ಅದರ ಮೇಲೆ ಗುರುತಿಸಿರುವ ಅಕ್ಷರಕ್ಕೆ ಅಥವಾ ಅಂಕಿಗೆ ಚಿಹ್ನೆಗೆ ನಿಗದಿಪಡಿಸಲ್ಪಟ್ಟ ಆಸ್ಕಿ ಸಂಖ್ಯೆಯನ್ನು ಗಣಕದ ಒಂದು ನೆನಪಿನ ಕೋಶದಲ್ಲಿ ಮೊದಲು ಶೇಖರಿಸಲಾಗುತ್ತದೆ. ಕ್ಷಣಮಾತ್ರದಲ್ಲಿ ಗಣಕದ ಆ ನೆನಪಿನ ಕೋಶದ ಸಂಖ್ಯೆಯನ್ನು ಆರಿಸಿ ಗಣಕದಲ್ಲಿ ಚಿತ್ರರೂಪದಲ್ಲಿ ದಾಖಲಿಸಿರುವ ಅದಕ್ಕೆ ಸಂಬಂಧಿಸಿದ ಅಕ್ಷರ – ಅಂಕಿ – ಚಿಹ್ನೆಯನ್ನು ಗಣಕದ ಪರದೆಯ ಮೇಲೆ ಮೂಡಿಸಲಾಗುತ್ತದೆ ಅಥವಾ ಕಾಗದದ ಮೇಲೆ ಮುದ್ರಿಸಲಾಗುತ್ತದೆ.

ಆದ್ದರಿಂದ ಮೂಲಭೂತವಾಗಿ ಗಣಕದಲ್ಲಿ ಕನ್ನಡದ ಅಕ್ಷರಗಳನ್ನು ಮೂಡಿಸುವಂತಹ ಸೌಲಭ್ಯವನ್ನು ಮೊದಲಿಗೆ ಒದಗಿಸಬೇಕು. ಕನ್ನಡ ಭಾಷೆಯಲ್ಲಾದರೋ ಸ್ವರಗಳು, ವ್ಯಂಜನಗಳು ಹಾಗೂ ವಿಶೇಷ ಚಿಹ್ನೆಗಳು ಸೇರಿ ೫೨ ಮೂಲಭೂತ ಅಕ್ಷರಗಳಿವೆ. ಇವುಗಳಲ್ಲದೆ ವ್ಯಂಜನಗಳೊಡನೆ ಸ್ವರಗಳು ಸೇರಿದ ಗುಣಿತಾಕ್ಷರಗಳನ್ನು ಮತ್ತು ಒಂದಕ್ಕಿಂತ ಹೆಚ್ಚು ವ್ಯಂಜನಗಳು ಸೇರಿದ ಸಂಯುಕ್ತಾಕ್ಷರಗಳನ್ನು ಪಡೆಯಲು ಅಗತ್ಯವಾದ ಸ್ವರ

ಚಿಹ್ನೆಗಳು, ಒತ್ತಕ್ಷರಗಳು ಮುಂತಾದವುಗಳು ಬಳಕೆಯಲ್ಲಿವೆ. ಆಸ್ಕಿಯ ೨೫೬ ಸಂಖ್ಯೆಗಳ ಪೈಕಿ ಕೆಲವು ಸಂಖ್ಯೆಗಳನ್ನು ಕೀಲಿಮಣೆಯಲ್ಲಿರುವ ಚಿಹ್ನೆಗಳಿಗೆ ಮತ್ತು ಹಲವು ನಿರ್ದಿಷ್ಟ ಉದ್ದೇಶಗಳಿಗೆ ಬಳಸಿಕೊಳ್ಳಲಾಗಿದೆ. ಉಳಿದಂತೆ ಸುಮಾರು ೧೨೦ ಸಂಖ್ಯೆಗಳು ಇರುವುದರಿಂದ ಕನ್ನಡದ ಯಾವುದೇ ಲಿಪ್ಯಂಗವನ್ನು ಈ ಉಳಿದ ೧೨೦ ಸಂಖ್ಯೆಗಳ ಪೈಕಿ ಒಂದು ಸಂಖ್ಯೆಯಿಂದ ಪ್ರತಿನಿಧಿಸುವ ಅವಕಾಶ ಇದೆ. ಈ ಕಾರಣದಿಂದ ಕನ್ನಡದ ಎಲ್ಲ ಲಿಪ್ಯಂಗಗಳನ್ನೂ ಆಸ್ಕಿ ಸಂಖ್ಯೆಗಳ ಮೂಲಕ ಪ್ರತಿನಿಧಿಸಿ ಇವುಗಳ ಸೂಕ್ತ ಸಂಯೋಜನೆಗಳಿಂದ ಎಲ್ಲ ಮೂಲಾಕ್ಷರಗಳಲ್ಲದೆ ಗುಣಿತಾಕ್ಷರಗಳು ಮತ್ತು ಸಂಯುಕ್ತಾಕ್ಷರಗಳನ್ನು ಪಡೆಯಬಹುದು.

ಅಂದರೆ ಗಣಕದ ಆಂತರಿಕ ಅಂಶಗಳಾದ ಆಸ್ಕಿ ಸಂಖ್ಯೆಗಳನ್ನು ಕನ್ನಡದ ಈ ಅಕ್ಷರಭಾಗಗಳಿಗೆ ಗೊತ್ತುಪಡಿಸಿ ಬಳಸುವುದೇ ಗಣಕಗಳಲ್ಲಿ ಕನ್ನಡವನ್ನು ಮೂಡಿಸುವ ಮೂಲಭೂತ ತಾಂತ್ರಿಕತೆ ಆಗಿದೆ. ಅಂದರೆ ಕನ್ನಡ ಅಕ್ಷರಭಾಗಗಳು ಗಣಕದೊಳಗೆ ಶೇಖರವಾಗುವ ಈ ಸಂಖ್ಯೆಗಳನ್ನು ನಿರ್ದಿಷ್ಟಗೊಳಿಸುವುದು ಬಹುಮುಖ್ಯ ಕ್ರಿಯೆ ಆಗಿದೆ.

ಉದಾಹರಣೆಗೆ, ಒಂದು ಮೀಟರ್ ಎಂದರೆ ಎಷ್ಟು ಉದ್ದ (ಅಳತೆ) ಇರಬೇಕು ಎಂದು ಒಮ್ಮೆ ನಿಶ್ಚಿತವಾಗಿದ್ದು, ಆ ಅಳತೆಯನ್ನು ವಿಶ್ವಾದ್ಯಂತ ಎಲ್ಲರೂ ಒಪ್ಪಿಕೊಂಡಿದ್ದಾರೆ; ಯಾರೂ ಯಾವ ಕಾಲದಲ್ಲೂ ಬದಲಾಯಿಸುವುದಿಲ್ಲ. ಅಂತೆಯೇ ಇಂಗ್ಲಿಷ್‌ಗೆ ಆಸ್ಕಿ ಸಂಖ್ಯೆಗಳು ಮತ್ತು ಕೀಲಿಮಣೆ ವಿನ್ಯಾಸ ಇವುಗಳನ್ನು ನಿರ್ದಿಷ್ಟಗೊಳಿಸಲಾಗಿದೆ ಮತ್ತು ವಿಶ್ವಾದ್ಯಂತ ಎಲ್ಲ ಗಣಕ ಬಳಕೆದಾರರೂ ಅವುಗಳನ್ನೇ ಒಪ್ಪಿಕೊಂಡಿರುವುದು ಗಣಕಗಳಲ್ಲಿ ಇಂಗ್ಲಿಷ್ ವಿಜೃಂಭಿಸುವುದಕ್ಕೆ ಕಾರಣವಾಗಿದೆ. ಕನ್ನಡಕ್ಕೆ ಸಂಬಂಧಿಸಿದಂತೆಯೂ ಗಣಕದ ಒಳಗಡೆ ಕನ್ನಡದ ಲಿಪ್ಯಂಗಗಳಿಗೆ ನಿರ್ದಿಷ್ಟ ಅಂಕಿಗಳನ್ನು ನಿಶ್ಚಯಿಸಿ ಬಳಸಿದರೆ ಮಾತ್ರ ಗಣಕಗಳಲ್ಲಿ ಕನ್ನಡದ ಬಳಕೆಯು ವ್ಯಾಪಕವೂ ಯಶಸ್ವಿಯೂ ಆಗಲು ಸಾಧ್ಯ.

ಆದರೆ ಗಣಕದಲ್ಲಿ ಕನ್ನಡವನ್ನು ಮೂಡಿಸುವ ಕಾರ್ಯ ಆರಂಭವಾದಾಗ ಕನ್ನಡದ ಲಿಪ್ಯಂಗಗಳಿಗೆ ಆಸ್ಕಿ ಸಂಖ್ಯೆಗಳನ್ನು ನಿರ್ಧರಿಸುವ ಸಮಸ್ಯೆಗಳು ಎದುರಾಗುತ್ತಿದ್ದವು. ಇವುಗಳನ್ನು ಗಮನಿಸಿದ ಕರ್ನಾಟಕ ಸರ್ಕಾರವು ಈ ಬಗ್ಗೆ ಅತ್ಯಂತ ಸೂಕ್ತ ತೀರ್ಮಾನಗಳನ್ನು ತೆಗೆದುಕೊಂಡಿತು. ಈ ದಿಸೆಯಲ್ಲಿ ಇತರ ಭಾರತೀಯ ಭಾಷೆಗಳಿಗೆ ಮಾದರಿಯಾಗಿ :

- ಕನ್ನಡವು ಗಣಕದ ಆಂತರ್ಯದಲ್ಲಿ ದಾಖಲಾಗುವ ಆಸ್ಕಿ ಸಂಖ್ಯಾ ಸಂಕೇತಗಳು ಹಾಗೂ
- ಕನ್ನಡ ಭಾಷೆಯ ವೈಜ್ಞಾನಿಕತೆ ಹಾಗೂ ಧ್ವನ್ಯಾತ್ಮಕತೆಯನ್ನು ಅವಲಂಬಿಸಿದ ಏಕರೂಪ ಕೀಲಿಮಣೆ ವಿನ್ಯಾಸ

– ಇವುಗಳನ್ನು ಗೊತ್ತುಪಡಿಸಿದ್ದು ಕರ್ನಾಟಕ ಸರ್ಕಾರದ ಹೆಗ್ಗಳಿಕೆ ಆಗಿದೆ.

ಈ ನಿಯಮಗಳಿಗೆ ಅನುಸಾರವಾಗಿ ಗಣಕದಲ್ಲಿ ಕನ್ನಡವನ್ನು ಮೂಡಿಸುವ 'ನುಡಿ' ಎಂಬ ಹೆಸರಿನ ತಂತ್ರಾಂಶವನ್ನು ಕರ್ನಾಟಕ ಸರ್ಕಾರವು ಅಭಿವೃದ್ಧಿಗೊಳಿಸಿತು.

**ಯೂನಿಕೋಡ್**

ಆಸ್ಕಿ ಸಂಕೇತೀಕರಣದಲ್ಲಿ ಎಲ್ಲಾ ಭಾಷೆಗಳಿಗೂ ಕೇವಲ ೨೫೬ ಸ್ಥಾನಗಳುಳ್ಳ ಒಂದೇ ಒಂದು ನೆನಪಿನ ಕೋಶ ಅಥವಾ ಸಂಕೇತಾಂಕಣವಿರುತ್ತದೆ. ಅಂದರೆ ಒಂದು ಭಾಷೆಗೆ ಬಳಸುವ ಸಂಖ್ಯಾ ಸಂಕೇತಗಳನ್ನೇ ಬೇರೊಂದು ಭಾಷೆಗೂ ಬಳಸಬೇಕು. ಆದ್ದರಿಂದ ಗಣಕದಲ್ಲಿ ಒಂದು ಭಾಷೆಯನ್ನು ಬಳಸುವ ಕ್ರಿಯೆಯು ಚಾಲ್ತಿಯಲ್ಲಿರುವಾಗ ಬೇರೊಂದು ಭಾಷೆಯನ್ನು ಬಳಸಲು ಆಗುವುದಿಲ್ಲ. ಈ ಪರಿಸ್ಥಿತಿಯಿಂದಾಗಿ ಒಂದೇ ವಾಕ್ಯದಲ್ಲಿ ವಿವಿಧ ಭಾಷಾ ಲಿಪಿಗಳನ್ನು ಬಳಸಲು ತೊಡಕುಗಳುಂಟಾಗುತ್ತವೆ. ಈ ಸಮಸ್ಯೆಯನ್ನು ಪರಿಹರಿಸುವ ಉದ್ದೇಶದಿಂದ ಹೊಸದಾಗಿ ರೂಪಿತವಾಗಿರುವ ೧೬ ಅಂಕಿ ಸ್ಥಾನಗಳುಳ್ಳ ಯೂನಿಕೋಡ್ ಪದ್ಧತಿಯಲ್ಲಿ ಪ್ರತಿ ನೆನಪಿನ ಕೋಶವೂ ತಲಾ ಎಂಟು ಅಂಕಿಗಳ ಎರಡು ಸಂಕೇತಾಂಕಣಗಳನ್ನು ಹೊಂದಿರುತ್ತದೆ. ಹೀಗಿರುವ ಪ್ರತಿ ನೆನಪಿನ ಕೋಶದ ಎರಡು ಭಾಗಗಳ ಪೈಕಿ ಮೊದಲ ಭಾಗವು ಭಾಷಾ ಸೂಚ್ಯಾಂಕಣ ಮತ್ತು ಎರಡನೆಯ ಭಾಗವು ಆಸ್ಕಿ ಸಂಕೇತಾಂಕಣ ಆಗಿರುತ್ತದೆ. ಈ ನೂತನ ವ್ಯವಸ್ಥೆಯಲ್ಲಿ ಪ್ರತಿಭಾಷೆಗೆ ಸಂಬಂಧಿಸಿದಂತೆ ಅದರ ಲಿಪ್ಯಂಗಗಳಿಗೆ ೨೫೬ ಸಂಖ್ಯೆಗಳ ಪೈಕಿ ಬೇಕಾದವನ್ನು ನಿರ್ದಿಷ್ಟಗೊಳಿಸುವ ಅವಕಾಶವಿದೆ. ಹೀಗೆ ಗಣಕಕ್ಕೆ ಊಡಿಸುವ ಎಲ್ಲ ಮಾಹಿತಿಗಳನ್ನೂ ಯೂನಿಕೋಡ್ ಸಂಕೇತಗಳನ್ನಾಗಿಯೇ ಗಣಕಗಳಲ್ಲಿ ಶೇಖರಿಸಿಡುವ ಅವಕಾಶ ಒದಗಿಬಂದಿದೆ.




ಯೂನಿಕೋಡ್‌ನ ಶಿಷ್ಟತೆಗಳಲ್ಲಿ ಪ್ರತಿಭಾಷೆಗೂ ಸಂಬಂಧಿಸಿದ ಅಕ್ಷರಗಳು ಮತ್ತು ಸಂಕೇತಗಳನ್ನು ಅಂಗೀಕರಿಸಿ ಭಾರತೀಯ ಭಾಷೆಗಳೂ ಸೇರಿದಂತೆ ವಿಶ್ವದ ಎಲ್ಲ ಭಾಷೆಗಳಿಗಾಗಿ ಯೂನಿಕೋಡ್‌ನ ಆವೃತ್ತಿಗಳನ್ನು ಅಧಿಕೃತವಾಗಿ ಪ್ರಕಟಿಸಿದವರು 'ಯೂನಿಕೋಡ್ ಕನ್ಸೋರ್ಟಿಯಮ್' ಎಂಬ ಅಂತರರಾಷ್ಟ್ರೀಯ ಒಕ್ಕೂಟ. ಭಾರತೀಯ ಭಾಷೆಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಮಾಹಿತಿ ತಂತ್ರಜ್ಞಾನ ಇಲಾಖೆಯು ಭಾರತೀಯ ಭಾಷಾಪ್ರತಿನಿಧಿಗಳೊಡನೆ ನಡೆಸಿದ ವಿಚಾರ ವಿನಿಮಯಗಳ ಪರಿಣಾಮವಾಗಿ ಭಾರತೀಯ ಭಾಷೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಯೂನಿಕೋಡ್ ದಾಖಲೆಗಳನ್ನು ಸಿದ್ಧಪಡಿಸಿ ಯೂನಿಕೋಡ್ ಕನ್ಸೋರ್ಟಿಯಮ್ ಸಂಸ್ಥೆಗೆ ಕಳುಹಿಸಲಾಯಿತು. ಈಗ ಯೂನಿಕೋಡ್ ಬಳಕೆ ಹೆಚ್ಚುತ್ತಾ ಹೋಗುತ್ತಿದೆ.

ಇದರಿಂದಾಗಿ,

೧. ಗಣಕಗಳಲ್ಲಿ ಬಹುಭಾಷಾ ಬಳಕೆಗೆ ಅನಿರ್ಬಂಧಿತ ಅವಕಾಶಗಳು ದೊರಕುತ್ತವೆ. ಬಹುಮುಖ್ಯವಾಗಿ ಗಣಕಗಳಲ್ಲಿ ಬಹುಭಾಷಾ ಬಳಕೆಯು ಸುಲಭವಾಗುತ್ತದೆ. ಅಂದರೆ ಒಂದೇ ದಾಖಲೆಯಲ್ಲಿ ಬೇರೆ ಬೇರೆ ಭಾಷಾ ವಿಭಾಗಗಳಿರಲು ಸಾಧ್ಯ. ಆದ್ದರಿಂದ ಒಂದೇ ವಾಕ್ಯದಲ್ಲಿ ನಮಗೆ ಬೇಕಾದ ವಿವಿಧ ಭಾಷಾ ಮಾಧ್ಯಮಗಳಲ್ಲಿ ಮಾಹಿತಿಗಳನ್ನು ಕೀಲಿಸುವಂತಹ ವ್ಯವಸ್ಥೆಯನ್ನು ರೂಪಿಸಬಹುದು; ಎಲ್ಲ ಭಾಷೆಗಳಿಗೆ ಆಗುವಂತೆ ಅನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿ ಸಾರ್ವತ್ರೀಕರಿಸಬಹುದು.

೨. ಅಂತರಜಾಲ, ವಿದ್ಯುನ್ಮಾನ ಅಂಚೆ ಸೌಲಭ್ಯಗಳೂ ಬಹುಭಾಷಾ ಮಾಧ್ಯಮದಲ್ಲಿರುವಂತೆ ಮಾಡಬಹುದು. ಒಟ್ಟಿನಲ್ಲಿ ಯೂನಿಕೋಡ್‌ನಿಂದ ಗಣಕಗಳು ಎಲ್ಲ ಭಾಷಾಬಾಂಧವರ ಆಶೋತ್ತರಗಳಿಗೆ ಸುಲಭವಾಗಿ ಸ್ಪಂದಿಸುತ್ತವೆ.

ಹಿಂದಿನ ಆಸ್ಕಿ ಪದ್ಧತಿ ಮತ್ತು ಇತ್ತೀಚಿನ ಯೂನಿಕೋಡ್ ಪದ್ಧತಿಗಳೆರಡೂ ಈಗ ಚಾಲ್ತಿಗೆ ಬಂದಿರುವುದರಿಂದ ಕೆಲವಾರು ಸಮಸ್ಯೆಗಳೂ ಉಂಟಾಗಿರುವುದು ಸಹಜ. ಆದರೆ ಈ ಎರಡೂ ಸಂಖ್ಯಾ ಪದ್ಧತಿಗಳ ನಡುವೆ ಬದಲಾವಣೆಯ ಸೌಲಭ್ಯಗಳು ಇದ್ದರೆ ಇವುಗಳಲ್ಲಿ ಒಂದು ಪದ್ಧತಿಯ ಪರಿಸರದಿಂದ ಇನ್ನೊಂದು ಪದ್ಧತಿಯ ಪರಿಸರಕ್ಕೆ ಬದಲಾಗಲು ಸಾಧ್ಯವಾಗುತ್ತದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕನ್ನಡದ ಬಳಕೆಯು ಅರ್ಥಪೂರ್ಣವೂ, ವ್ಯಾಪಕವೂ, ಯಶಸ್ವಿಯೂ ಆಗಬೇಕೆಂದರೆ ನಮಗೆ ಬೇಕಾದ ಎಲ್ಲ ಕಾರ್ಯಗಳನ್ನೂ ಗಣಕಗಳ ಸಹಾಯದಿಂದ ನಿರ್ವಹಿಸುವ ಚಟುವಟಿಕೆಗಳಾದ ಪದಸಂಸ್ಕರಣೆ (Word processing), ದತ್ತಸಂಸ್ಕರಣೆ (Data processing), ಅಂತರಜಾಲ (Internet), ಬಹುಮಾಧ್ಯಮ (Multimedia) ಮುಂತಾದ ಎಲ್ಲ ಅನ್ವಯ ವಿಭಾಗಗಳಲ್ಲೂ ಕನ್ನಡವನ್ನು ವ್ಯಾಪಕವಾಗಿ ಬಳಸಬೇಕು.

- ಪದಸಂಸ್ಕರಣೆ ಎಂದರೆ ಎಲ್ಲ ರೀತಿಯ ಬರವಣಿಗೆ, ಮುದ್ರಣ ಇತ್ಯಾದಿ.
- ದತ್ತಸಂಸ್ಕರಣೆ ಎಂದರೆ ಅಗತ್ಯ ಮಾಹಿತಿಗಳನ್ನು ಗಣಕದಲ್ಲಿ ಸಂಗ್ರಹಿಸಿ ಅವುಗಳಿಂದ ಅನೇಕ ಫಲಿತಗಳನ್ನು ಪಡೆಯುವುದು. ಅಂದರೆ ಕಚೇರಿಗಳ, ವಾಣಿಜ್ಯ ಮುಂತಾದ ಎಲ್ಲ ರೀತಿಯ ಸಂಸ್ಥೆಗಳ ವಿವಿಧ ಚಟುವಟಿಕೆಗಳ ಗಣಕೀಕೃತ ವ್ಯವಹಾರಗಳು ಇತ್ಯಾದಿ. ಇದಕ್ಕಾಗಿ ವಿಶೇಷವಾಗಿ ಅಭಿವೃದ್ಧಿಪಡಿಸುವ ತಂತ್ರಾಂಶಗಳೇ **ಅನ್ವಯಿಕ ತಂತ್ರಾಂಶಗಳು** (Application software).
- ಬಹುಮಾಧ್ಯಮ, ಅಂತರಜಾಲ ಮುಂತಾದ ಕ್ಷೇತ್ರಗಳಲ್ಲೂ ಸಹ ಅನ್ವಯಿಕ ತಂತ್ರಾಂಶಗಳ ಅವಶ್ಯಕತೆ ಇರುತ್ತದೆ.
- ಆಸ್ಕಿ ಮಾಹಿತಿಗಳು ಮತ್ತು ಯೂನಿಕೋಡ್ ಮಾಹಿತಿಗಳ ನಡುವೆ ಬದಲಾವಣಾ ಸೌಲಭ್ಯ ದೊರಕಬೇಕು.

ವಿಶ್ವಾದ್ಯಂತ ವಿದ್ಯಾಭ್ಯಾಸ, ಸಾಂಸ್ಕೃತಿಕ, ವಿಜ್ಞಾನ, ವ್ಯವಹಾರ ಮತ್ತಿತರ ಎಲ್ಲಾ ಕ್ಷೇತ್ರಗಳಲ್ಲಿನ ವಿವಿಧ ಬಗೆಯ ಅಗತ್ಯಗಳಿಗೆ ಅನುಗುಣವಾಗಿ ಅನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸುವುದರಲ್ಲೇ ಎಲ್ಲ ಗಣಕತಜ್ಞರೂ ತೊಡಗಿದ್ದಾರೆ. ಆದ್ದರಿಂದ ಗಣಕೀಕೃತ ವ್ಯವಹಾರಗಳು ಕನ್ನಡ ಭಾಷೆಯಲ್ಲಿಯೇ ಇರಬೇಕೆಂದರೆ ನಮ್ಮಲ್ಲಿ ಇಂತಹ

ಆನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸುವಾಗ ಅವುಗಳಿಗೆ ಊಡಿಸುವ ಮತ್ತು ಅವುಗಳಿಂದ ಪಡೆಯುವ ಮಾಹಿತಿಗಳು ಕನ್ನಡದಲ್ಲೇ ಇರುವಂತೆ ಯೋಜಿಸಬೇಕು. ಇದಕ್ಕಾಗಿ ಗಣಕದ ಒಳಗಡೆ ಕನ್ನಡಕ್ಕೆ ಸಂಬಂಧಿಸಿದ ಸಂಸ್ಕರಣಾ ವ್ಯವಹಾರಗಳನ್ನೂ ನಡೆಸಲು ಸಾಧ್ಯವಾಗಬೇಕು.

ಒಟ್ಟಿನಲ್ಲಿ ಕನ್ನಡ ಮಾಹಿತಿಗಳನ್ನು ಸಂಸ್ಕರಿಸಬಲ್ಲ ಇಂತಹ ಆನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಲು ಕನ್ನಡಕ್ಕೇ ವಿಶಿಷ್ಟವಾದ ತಂತ್ರಾಂಶ ಅಭಿವೃದ್ಧಿ ಸಲಕರಣೆಗಳ ಅಗತ್ಯವಿದೆ. ಅಂದರೆ ಬಹುಮುಖ್ಯವಾಗಿ ಕನ್ನಡದ ಮಾಹಿತಿಗಳ ಅಕಾರಾದಿ ವಿಂಗಡಣೆ, ಹುಡುಕು, ಹುಡುಕು-ಬದಲಿಸು, ಮಾಹಿತಿಗಳನ್ನು ಕೀಲಿಸುವಾಗ ಬದಲಿಸು, ಮುಂತಾದ ಅನೇಕ ಸೌಲಭ್ಯಗಳು ಇರಬೇಕು. ಗಣಕಗಳ ಮೂಲಕ ಈ ಕ್ರಿಯೆಗಳನ್ನು ನಿರ್ವಹಿಸಲು ಕನ್ನಡ ಭಾಷಾಸಂಬಂಧಿ ಸಂಸ್ಕರಣೆಯ ಈ ಸೌಲಭ್ಯಗಳು ಬಳಕೆದಾರರಿಗೆ ಮತ್ತು ಗಣಕ ತಂತ್ರಜ್ಞರಿಗೆ ಮುಕ್ತವಾಗಿ ದೊರಕಬೇಕು. ಇದರಿಂದ ಕನ್ನಡದಲ್ಲಿನ ಗಣಕೀಕೃತ ವ್ಯವಹಾರಗಳನ್ನು ನಡೆಸಲು ಸಾಧ್ಯವಾಗುತ್ತದೆ.

ಇವೆಲ್ಲ ಸೌಕರ್ಯಗಳನ್ನು 'ನುಡಿ' ಕನ್ನಡ ಲಿಪಿ ತಂತ್ರಾಂಶದಲ್ಲಿ ನೀಡಲಾಗಿದೆ. ಜೊತೆಗೆ ಆಸ್ಕಿ ಮಾಹಿತಿಗಳು ಮತ್ತು ಯೂನಿಕೋಡ್ ಮಾಹಿತಿಗಳ ನಡುವೆ ಬದಲಾವಣಾ ಸೌಲಭ್ಯವನ್ನು 'ನುಡಿ' ತಂತ್ರಾಂಶದೊಡನೆ ಕೊಡಲಾಗಿದೆ.

ಹೀಗೆ ಆನ್ವಯಿಕ ತಂತ್ರಾಂಶಗಳಲ್ಲಿ ಕನ್ನಡವನ್ನು ಇಂಗ್ಲಿಷ್‌ನಷ್ಟೇ ಸರಾಗವಾಗಿ ಮತ್ತು ಯಶಸ್ವಿಯಾಗಿ ಬಳಸಲು ಸಾಧ್ಯವಾಗುವಂತಹ ತಾಂತ್ರಿಕತೆಯಲ್ಲಿ ಕನ್ನಡದಲ್ಲಿ ಹೆಚ್ಚಿನ ಅಭಿವೃದ್ಧಿಯನ್ನು ಸಾಧಿಸಲಾಗಿರುವುದನ್ನು ಗಮನಿಸಬೇಕು. ಇತರ ಭಾರತೀಯ ಭಾಷೆಗಳಿಗೆ ಹೋಲಿಸಿದರೆ ಇದು ದೊಡ್ಡ ಸಾಧನೆ.

**ಕನ್ನಡ – ಗಣಕ ಕ್ಷೇತ್ರದಲ್ಲಿನ ಸಾಧನೆಯ ಕೆಲವು ಉದಾಹರಣೆಗಳು**

- ಕರ್ನಾಟಕ ಸರ್ಕಾರದ ಸಚಿವಾಲಯ ಮತ್ತು ಹೆಚ್ಚು ಕಡಮೆ ಎಲ್ಲಾ ಇಲಾಖೆಗಳಲ್ಲಿ ಸರ್ಕಾರದ್ದೇ ಆದ 'ನುಡಿ' ಕನ್ನಡ ಲಿಪಿ ತಂತ್ರಾಂಶವನ್ನು ಬಳಸಲಾಗುತ್ತಿದೆ. ಇದರಿಂದಾಗಿ ವಿವಿಧ ಕಚೇರಿಗಳು ಹಾಗೂ ಸ್ಥಳಗಳಲ್ಲಿರುವ ಗಣಕಗಳ ಮೂಲಕ ಕನ್ನಡದ ಮಾಹಿತಿಗಳ ಸಂವಹನವು ಯಾವುದೇ ಅಡೆತಡೆಗಳಿಲ್ಲದೆ ಬಳಸಿಕೊಳ್ಳಲು ಸಾಧ್ಯವಾಗಿದೆ. ಸರ್ಕಾರವು ಈ ಕನ್ನಡ ಲಿಪಿ ತಂತ್ರಾಂಶವನ್ನು ಕನ್ನಡಿಗರಿಗೆ ಉಚಿತವಾಗಿ ನೀಡುತ್ತಿದೆ. ಆದ್ದರಿಂದ ಸರ್ಕಾರ, ಸಂಘಸಂಸ್ಥೆಗಳು ಹಾಗೂ ಜನಸಾಮಾನ್ಯರ ನಡುವೆ ಮಾಹಿತಿ ಸಂವಹನೆಯು ನೇರ, ಅತಿ ಸುಲಭ ಹಾಗೂ ಶೀಘ್ರವಾಗುತ್ತಿದೆ.
- ಕನ್ನಡ ಸಾಹಿತ್ಯ ಪರಿಷತ್ತಿನ ದೈನಂದಿನ ಬಳಕೆ ಮತ್ತು ಪ್ರಕಟನೆಗಳಲ್ಲಿ, ಕರ್ನಾಟಕದಾದ್ಯಂತ ಅನೇಕ ಪ್ರಕಟನೆ ಸಂಸ್ಥೆಗಳಲ್ಲಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪ್ರಕಟನೆಗಳಲ್ಲಿ, ಮೈಸೂರಿನ ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು ವಿಶ್ವವಿದ್ಯಾನಿಲಯ ಮುಂತಾದ ಸಂಸ್ಥೆಗಳಲ್ಲಿ, ಸಂಯುಕ್ತ ಕರ್ನಾಟಕ ಮುಂತಾದ ಅನೇಕ ಪತ್ರಿಕೆಗಳಲ್ಲಿ ನುಡಿ ತಂತ್ರಾಂಶವನ್ನು ಬಳಸಲಾಗುತ್ತಿದೆ.
- ನುಡಿಯನ್ನು ಬಳಸಿಕೊಂಡು ವಿದ್ಯುನ್ಮಾನ ಆಡಳಿತ ಇಲಾಖೆ, ಎನ್‌ಐಸಿ ಮುಂತಾದ ಸಂಸ್ಥೆಗಳು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಬಳಸಲು ಮಾಹಿತಿ ಊಡಿಕೆ ನೀಡಿಕೆಗಳು ಕನ್ನಡದಲ್ಲೇ ಇರುವಂತಹ ಅನೇಕ ಆನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿದ್ದು, ಅವುಗಳನ್ನು ಸರ್ಕಾರದಲ್ಲಿ ಬಳಸಲಾಗುತ್ತಿದೆ.
- ಅನೇಕ ಖಾಸಗಿ ಸಂಸ್ಥೆಗಳು ಕನ್ನಡದಲ್ಲಿ ಕೆಲವಾರು ಆನ್ವಯಿಕ ತಂತ್ರಾಂಶಗಳನ್ನು ಸಿದ್ಧಪಡಿಸಿದ್ದು ಅವುಗಳೂ ಯಶಸ್ವಿಯಾಗಿ ಬಳಕೆಯಾಗುತ್ತಿವೆ.
- ಮೈಸೂರು ವಿಶ್ವವಿದ್ಯಾನಿಲಯದ ಹಣಕಾಸು ವಿಭಾಗ ಮುಂತಾದ ವಿಭಾಗಗಳಲ್ಲಿ ಅಲ್ಲಿನ ಅಗತ್ಯಗಳಿಗೆ ಬೇಕಾಗುವ ಕನ್ನಡ ಬಳಕೆಯ ಆನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿಕೊಂಡು ಬಳಸುತ್ತಿದ್ದಾರೆ.
- ಶಿವಮೊಗ್ಗ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳ ಕೆಲವು ಉತ್ಸಾಹಿ ತಂತ್ರಾಂಶ ತಯಾರಿಕಾ ಕಂಪನಿಗಳು ೧೭ಕ್ಕೂ ಹೆಚ್ಚಿನ ಸಹಕಾರಿ ಬ್ಯಾಂಕ್‌ಗಳ ವ್ಯವಹಾರಗಳನ್ನು ಸಂಪೂರ್ಣವಾಗಿ ಕನ್ನಡದಲ್ಲೇ ಗಣಕೀಕರಣ ಮಾಡಿವೆ.
- ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟನ್ನು ಅಡಕ ಮುದ್ರಿಕೆಗೆ ಅಳವಡಿಸಲಾಗಿದೆ.
- ಇ-ಪುಸ್ತಕಕ್ಕೆ ಮಾದರಿಯಾಗಿ ಪಂಪಭಾರತ ಹಾಗೂ ಆದಿಪುರಾಣಗಳನ್ನು, ನಿಸಾರ್ ಅಹಮದ್ ಅವರ ಸಮಗ್ರ ಕಾವ್ಯ ಹಾಗೂ ಗದ್ಯವನ್ನು ಬಹುಮಾಧ್ಯಮ ಮಾದರಿಯಲ್ಲಿ ರೂಪಿಸಲಾಗಿದೆ.
- ಈವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಅನೇಕ ಪುಸ್ತಕಗಳ ಕುರಿತಾದ ಮಾಹಿತಿಗಳು ಅಂತರಜಾಲದಲ್ಲಿ ಉಚಿತವಾಗಿ ದೊರೆಯುವ ಗ್ರಂಥಸಂಪದವೆಂಬ ಕನ್ನಡದ ಮೊಟ್ಟ ಮೊದಲ ಸಂವಾದಾತ್ಮಕ ಜಾಲತಾಣವನ್ನು ಅಭಿವೃದ್ಧಿಗೊಳಿಸಲಾಗಿದೆ.
- ಯಾರು ಬೇಕಾದರೂ ತಮ್ಮದೇ ಆದ ನಿಘಂಟನ್ನು ತಯಾರಿಸಿಕೊಳ್ಳಲು ಅನುವಾಗುವ ಆನ್ವಯಿಕ ತಂತ್ರಾಂಶ ಸಾರ್ವಜನಿಕರಿಗೆ ಲಭ್ಯವಿದೆ.
- ಮೈಸೂರು ವಿಶ್ವವಿದ್ಯಾನಿಲಯದ ೧೪ ಸಂಪುಟಗಳ ಕನ್ನಡ ವಿಶ್ವಕೋಶವು ಬಹುಮಾಧ್ಯಮ ಸಿ.ಡಿ. ರೂಪದಲ್ಲಿ ಹೊರಬಂದಿದೆ.

## ಶಾಂತಿ ಪ್ರಶಸ್ತಿ



ಕಪ್ಪ ಕಾಣಿಕೆಗಳ ಸಲ್ಲಿಸಿ ಶರಣಾಗತರಾಗಿ
ಇಲ್ಲವೆ ಯುದ್ಧಕ್ಕೆ ಸಿದ್ಧರಾಗಿ ಎಂಬ ಆಜ್ಞೆಯನ್ನು
ಹಣೆಫಲಕಕ್ಕಂಟಿಸಿ ಅಶ್ವಮೇಧ ಯಾಗದ
ಕುದುರೆಯನ್ನು ಧರೆಗೆ ಹರಿಯಬಿಟ್ಟ ಧಣಿಗಳ
ಸಂತತಿಯ ಪಟ್ಟದರಸನಿಗೆ ಶಾಂತಿ ಪ್ರಶಸ್ತಿ!

ಯಾಗದ ಕುದುರೆಯನ್ನು ಕಟ್ಟಿಹಾಕಿ ಸೆಡ್ಡೊಡೆದು
ಸ್ವಾಭಿಮಾನ ಪಣಕ್ಕಿಟ್ಟು ಹೋರಾಡಿದ ಪುಟ್ಟಪುಟ್ಟ
ರಾಜ್ಯಗಳ ಮೇಲೆ ಮಿಸ್ಸೈಲ್‌ಗಳ ಮಳೆಸುರಿಸಿ
ಮಾರಣಹೋಮ ಗೈದ ಮಹಾಪ್ರಭುಗಳ
ಸಂತತಿಯ ಪಟ್ಟದರಸನಿಗೆ ಶಾಂತಿ ಪ್ರಶಸ್ತಿ!

ಸಂಪದ್ಭರಿತ ರಾಷ್ಟ್ರಗಳ ಮೇಲೆ ಕಣ್ಣಿಟ್ಟು
ಧರ್ಮ ಧರ್ಮಗಳ ಮಧ್ಯೆ ಮತಾಂಧತೆಯ
ಕಿಚ್ಚು ಹಚ್ಚಿ ಆ ಜ್ವಾಲೆಯಿಂದಲೇ ಮುಖ
ಸುಡಿಸಿಕೊಂಡು ಬೆವರಿಳಿಸಿಕೊಂಡ ದೊರೆಗಳ
ಸಂತತಿಯ ಪಟ್ಟದರಸನಿಗೆ ಶಾಂತಿ ಪ್ರಶಸ್ತಿ!

ಪೂರ್ವಜರ ತಳಿಯಾದ ಜಗದೇಕ ಮಲ್ಲನು
ಪಟ್ಟವೇರಿದ ವಸಂತದೊಳಗೆ ವಿಶ್ವಶಾಂತಿ ಪುರಸ್ಕಾರ
ಪಡೆದಿದ್ದನ್ನು ಕಂಡು ಜಗಕೆ ಶಾಂತಿ ಸಾರಿದ
ಮಹಾಪುರುಷರು ಜಗಮೆಚ್ಚಿದ ಮಗನ ಮೇಲೆ
ಸ್ವರ್ಗದಿಂದಲೇ ಹೂಮಳೆ ಸುರಿಸಿದ್ದು ಸುಳ್ಳಿರಲಿಕ್ಕಿಲ್ಲ.

**ಈಶ್ವರ ಕಟ್ಟಿಮನಿ**
ಮನೆ ನಂ. ೪೮, ಸಾಯಿರಾಮನಗರ, ರಾಘವೇಂದ್ರ ಲೇಔಟ
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ, ಜೇವರ್ಗಿ ರಸ್ತೆ, ಕಲಬುರ್ಗಿ

- ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಂತರಜಾಲ ತಾಣವು ಪೂರ್ಣವಾಗಿ ಕನ್ನಡದಲ್ಲಿದೆ. ಅದರಲ್ಲಿ ಅನೇಕಾನೇಕ ಪಠ್ಯ, ಕಾವ್ಯ ಹಾಗೂ ಪ್ರಖ್ಯಾತ ಕವಿಗಳ ಸ್ವಂತ ವಾಚನದ ಶ್ರಾವ್ಯ ಮಾಹಿತಿಗಳಿವೆ.
- ಜಾನಪದಲೋಕದ ಅಂತರಜಾಲ ತಾಣವು ಕರ್ನಾಟಕದ ಕೊಡುಗೆಯೇ ಆದ ಜಾನಪದ ಲೋಕದ ಜಗತ್ತನ್ನೇ ನೋಡುಗರ ಮುಂದೆ ಕನ್ನಡದಲ್ಲಿ ಇರಿಸುತ್ತದೆ. ಇದು ಒಂದು ತಾಂತ್ರಿಕ ಸಾಧನೆ; ಇದರಲ್ಲಿ ಚಿತ್ರಗಳು, ಹಾಡುಗಳು ಹಾಗೂ ಲೇಖನಗಳಿವೆ.
- ಇಂದಿನ ದಿನಗಳಲ್ಲಿ ಎಲ್ಲ ಚಟುವಟಿಕೆಗಳೂ ಅಂತರಜಾಲ ತಾಣಗಳ ಮೂಲಕ ನಡೆಯುವಾಗ, ನೇಮಕಾತಿ ಪ್ರಕ್ರಿಯೆಯೂ ಹೊರಗುಳಿದಿಲ್ಲ. ದೇಶದ ಅತಿದೊಡ್ಡ ರಸ್ತೆ ಸಾರಿಗೆ ಸಂಪರ್ಕ ವ್ಯವಸ್ಥೆಗಳಲ್ಲಿ ಒಂದಾದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಇಂತಹ ಒಂದು ಸಂಪೂರ್ಣ ಕನ್ನಡಮಯವಾದ ಜಾಲ ತಾಣವನ್ನು ಅಭಿವೃದ್ಧಿಪಡಿಸಿದೆ. ಈಗ ಸಾರಿಗೆ ಸಂಸ್ಥೆಯ ಕೆಲಸಕ್ಕಾಗಿ ಅರ್ಜಿಗಳು ಹಳ್ಳಿ ಹಳ್ಳಿಗಳಿಂದ ಗಣಕಗಳ ಮೂಲಕ ಕನ್ನಡದಲ್ಲೇ ಹರಿದುಬರುತ್ತಿವೆ.
- ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಅಂತರಜಾಲ ತಾಣವು ಕನ್ನಡದ ಸುಂದರ ಅಂತರಜಾಲ ತಾಣಗಳಲ್ಲಿ ಒಂದಾಗಿದೆ. ಶಿಲ್ಪಕಲೆಯ ಅನೇಕ ಮಜಲುಗಳನ್ನು ಇದು ತೋರಿಸುತ್ತದೆ.

**ಬಳಕೆ, ಬೇಡಿಕೆಗಳ ಮಹತ್ವ**

- ಗಣಕಗಳಲ್ಲಿ ಕನ್ನಡದ ಮೂಡಿಕೆ ಮುಗಿದ ಅಧ್ಯಾಯ. ಇದನ್ನು ಬಳಸಿಕೊಂಡು ಗಣಕಗಳಲ್ಲಿ ಎಲ್ಲ ರೀತಿಯ ವ್ಯವಹಾರಗಳನ್ನು ಕನ್ನಡದಲ್ಲಿ ಮಾಡುವುದೇ ಈಗ ಆಗಬೇಕಾದ ಕಾರ್ಯ.
- ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕನ್ನಡದ ಬಳಕೆಯು ಅರ್ಥಪೂರ್ಣವೂ, ವ್ಯಾಪಕವೂ ಹಾಗೂ ಯಶಸ್ವಿಯೂ ಆಗಬೇಕಾದರೆ ಗಣಕವನ್ನು ಕೇವಲ ಪುಸ್ತಕಗಳು ಮತ್ತು ಪತ್ರಿಕೆಗಳ ಪ್ರಕಟನೆ ಹಾಗೂ ವೈಯಕ್ತಿಕ/ಕಚೇರಿಗಳ ಪತ್ರವ್ಯವಹಾರಗಳು ಮುಂತಾದವುಗಳಿಗಾಗಿ ಮಾತ್ರ ಬಳಸಿದರೆ ಸಾಲದು.
- ಎಲ್ಲ ಬಗೆಯ ವಾಣಿಜ್ಯ ವ್ಯವಹಾರಗಳು, ಕಚೇರಿ ವ್ಯವಹಾರಗಳು ಮುಂತಾದುವುಗಳಲ್ಲಿ ಗಣಕವನ್ನು ಬಳಸುವುದನ್ನು ನಾವು ಕಂಡಿದ್ದೇವೆ. ಈ ವ್ಯವಹಾರಗಳ ಮಾಧ್ಯಮ ಸಾಮಾನ್ಯವಾಗಿ ಇಂಗ್ಲಿಷ್ ಮಾತ್ರವೇ ಆಗಿರುತ್ತದೆ. ಇಂತಹ ವ್ಯವಹಾರಗಳು ಕನ್ನಡದಲ್ಲೇ ಇರಲು ಸೂಕ್ತವಾದ ಅನ್ವಯಿಕ ತಂತ್ರಾಂಶಗಳು ಸಿದ್ಧವಾಗಬೇಕು. ಇದು ಸಾಧ್ಯ ಎಂಬುದು ಈಗಾಗಲೇ ಸಾಬೀತಾಗಿದೆ. ಇಂತಹ ಅನ್ವಯಿಕ ತಂತ್ರಾಂಶಗಳನ್ನು ತಂತ್ರಾಂಶ ತಯಾರಿಕಾ ಸಂಸ್ಥೆಗಳು ಮತ್ತು ತಜ್ಞರು ಅಭಿವೃದ್ಧಿಪಡಿಸಬೇಕು.
- ಹೀಗೆ ಎಲ್ಲ ಬಗೆಯ ಅನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಗೊಳಿಸುವಾಗ ಎದುರಾಗುವ ಕನ್ನಡ ಭಾಷೆಗೆ ಸಂಬಂಧಿಸಿದ ಸಂಸ್ಕರಣೆಗಳನ್ನು ಸಾಧಿಸಲು ಅಗತ್ಯವಾದ ತಂತ್ರಾಂಶ ಅಭಿವೃದ್ಧಿ ಸಲಕರಣೆಗಳನ್ನು ನುಡಿ ತಂತ್ರಾಂಶದೊಡನೆ ಉಚಿತವಾಗಿ ನೀಡಲಾಗಿದೆ.




ಇವುಗಳನ್ನು ಎಲ್ಲ ರೀತಿಯಲ್ಲೂ ಬಳಸಿರುವ ಅನೇಕ ಉದಾಹರಣೆಗಳಿವೆ.

- ಸರ್ಕಾರದ ಗಣಕಗಳಲ್ಲಿ ಕನ್ನಡವನ್ನು ಬಳಸುವಾಗ ವಿವಿಧ ಇಲಾಖೆಗಳಲ್ಲಿ ಅನೇಕ ಅನ್ವಯಿಕ ತಂತ್ರಾಂಶಗಳ ಅವಶ್ಯಕತೆಗಳಿವೆ. ಸರ್ಕಾರದ ಪ್ರತಿಯೊಂದು ಇಲಾಖೆಯ ಅನೇಕ ಕಾರ್ಯ ವ್ಯವಹಾರಗಳು ಮತ್ತೊಂದು ಇಲಾಖೆಗಿಂತ ಭಿನ್ನವಾಗಿರುತ್ತವೆ. ಆ ವಿಶಿಷ್ಟ ಕಾರ್ಯಗಳಿಗೆ ಪ್ರತ್ಯೇಕ ಅನ್ವಯಿಕ ತಂತ್ರಾಂಶಗಳನ್ನು ಸಿದ್ಧಪಡಿಸುವ ಅನೇಕ ಸಂದರ್ಭಗಳಿರುತ್ತವೆ. ಇವುಗಳತ್ತ ಸರ್ಕಾರವು ಗಮನಹರಿಸಿ ಕನ್ನಡ ಮಾಧ್ಯಮದ ಅನ್ವಯಿಕ ತಂತ್ರಾಂಶಗಳ ಅಭಿವೃದ್ಧಿಗೆ ಸಾಕಷ್ಟು ಗಮನ ಕೊಡಬೇಕು. ಅಂದರೆ ಸರ್ಕಾರವು ಆಂತರಿಕವಾಗಿ ಮತ್ತು ಸಾರ್ವಜನಿಕರೊಡನೆ ನಡೆಸುವ ಎಲ್ಲ ವ್ಯವಹಾರಗಳನ್ನೂ ವಿದ್ಯುನ್ಮಾನ ಆಡಳಿತಕ್ಕೆ ಒಳಪಡಿಸ ಬೇಕು. ಸರ್ಕಾರದ ಈ ಎಲ್ಲ ಗಣಕೀಕೃತ ವ್ಯವಹಾರಗಳೂ ಕನ್ನಡದಲ್ಲಿರಬೇಕು. ಇದಕ್ಕೆ ಅಗತ್ಯವಾದ ಅನ್ವಯಿಕ ತಂತ್ರಾಂಶಗಳು ಸಿದ್ಧವಾಗಬೇಕು. ಸರ್ಕಾರದ ಎಲ್ಲ ಇಲಾಖೆಗಳ ಅಂತರಜಾಲ ತಾಣಗಳೂ ಕನ್ನಡದಲ್ಲಿ ಇರಬೇಕು.
- ಆದರೆ ಸಾರ್ವಜನಿಕ ಒತ್ತಾಯಗಳಿಲ್ಲದ ಕಾರಣ ಗಣಕ ವ್ಯವಹಾರಗಳಲ್ಲಿ ಕನ್ನಡದ ಬಳಕೆಯು ಹೆಚ್ಚು ಪ್ರಗತಿಯನ್ನು ಸಾಧಿಸಿಲ್ಲ.
- ಆದ್ದರಿಂದ ಕರ್ನಾಟಕ ಸರ್ಕಾರದ ಎಲ್ಲ ಅನ್ವಯಿಕ ತಂತ್ರಾಂಶಗಳೂ ಕನ್ನಡದಲ್ಲೇ ಇರುವಂತೆ ಜನತೆಯು ಒತ್ತಾಯ ಮಾಡಬೇಕು.
- ಭಾಷಾ ಪಂಡಿತರು, ಸಾಹಿತ್ಯಾಸಕ್ತರು, ವಿದ್ಯಾರ್ಥಿಗಳು, ಅಧ್ಯಯನಶೀಲರು, ಸಾಮಾನ್ಯ ಜನತೆ ಮುಂತಾಗಿ ಎಲ್ಲರೂ ತಮ್ಮ ಆಸಕ್ತಿಯ ಮಾಹಿತಿಗಳನ್ನು ಗಣಕಗಳ ಮೂಲಕ ಕನ್ನಡದಲ್ಲೇ ಪಡೆಯುವಂತಾಗಬೇಕು.
- ವ್ಯಾಪಾರಿ ಸಂಸ್ಥೆಗಳ ಗಣಕೀಕೃತ ವ್ಯವಹಾರಗಳು ಕನ್ನಡದಲ್ಲೇ ಆಗಬೇಕು. ಸುಮಾರು ಇಪ್ಪತ್ತು ಸಾವಿರಕ್ಕೂ ಮೇಲ್ಪಟ್ಟು ಇರುವ ಸಹಕಾರಿ ಸಂಸ್ಥೆಗಳ ಆರ್ಥಿಕ ಚಟುವಟಿಕೆಗಳ ಗಣಕೀಕರಣ ಕನ್ನಡದಲ್ಲೇ ಆಗಬೇಕು.
- ಮಕ್ಕಳಿಗೆ ಆಕರ್ಷಕವಾದ ಬಹುಮಾಧ್ಯಮ ಆಟಗಳು ಹಾಗೂ ಜ್ಞಾನಸಾಧನಗಳು ಕನ್ನಡದ ಮೂಲಕ ದೊರಕಬೇಕು.
- ಅಂತರಜಾಲದ ಹಾಗೂ ಜಾಲ ತಾಣಗಳ ವ್ಯವಹಾರ ಮಾಧ್ಯಮ ಕನ್ನಡವಾಗಿರಬೇಕು. ಇವುಗಳಿಗಾಗಿ ಸಿದ್ಧಪಡಿಸುವ ವೈವಿಧ್ಯಮಯ ಅನ್ವಯಿಕ ತಂತ್ರಾಂಶಗಳನ್ನು ಕೊಂಡು ಬಳಸುವ ಪ್ರವೃತ್ತಿ ಕನ್ನಡಿಗರದ್ದಾಗಬೇಕು.
- ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕಂಪ್ಯೂಟರ್ ಕನ್ನಡ ಪದವಿವರಣಕೋಶವನ್ನು ಪ್ರಕಟಿಸಿದೆ. ಕರ್ನಾಟಕ ಸರ್ಕಾರವು ಡಿಪ್ಲೊಮಾ ಮುಂತಾದ ಪರೀಕ್ಷೆಗಳಿಗಾಗಿ ಅಗತ್ಯವಾದ ಕನ್ನಡ ಗಣಕ ಪಠ್ಯವನ್ನು ಸಿದ್ಧಪಡಿಸಿ ಬಳಸುತ್ತಿದೆ. ಇಸಿಐಎಲ್ ಸಂಸ್ಥೆಯು ನಡೆಸುವ ಗಣಕ ಶಿಕ್ಷಣಕ್ಕಾಗಿ ಗಣಕ ಪಠ್ಯವನ್ನು ಕನ್ನಡದಲ್ಲಿ ಸಿದ್ಧಪಡಿಸಿ ಬಳಸುತ್ತಿದೆ. ಕುವೆಂಪು ವಿಶ್ವವಿದ್ಯಾನಿಲಯದ ಬಾಹ್ಯ ಶಿಕ್ಷಣದ ಗಣಕ ಪಠ್ಯವನ್ನು ಕನ್ನಡದಲ್ಲಿ ಸಿದ್ಧಪಡಿಸಿ ಬಳಸುತ್ತಿದೆ. ವಿಂಡೋಸ್ ಕಾರ್ಯಾಚರಣ ವ್ಯವಸ್ಥೆಯ ವಿವಿಧ ತಂತ್ರಾಂಶಗಳು, ಓಪನ್ ಆಫೀಸ್ ಮುಂತಾದ ತಂತ್ರಾಂಶಗಳ ಕನ್ನಡದ ಆವೃತ್ತಿಗಳಿಗೆ ಅಗತ್ಯವಾದ ಹದಿನೈದು ಸಾವಿರಕ್ಕೂ ಮೇಲ್ಪಟ್ಟ ಗಣಕ ಪದಗಳ ಕನ್ನಡ ಅನುವಾದ ಸಿದ್ಧವಾಗಿದ್ದು, ಅವುಗಳಲ್ಲಿ ಬಹಳಷ್ಟು ಬಳಕೆಗೆ ಬಂದಿವೆ.
- ಈ ಹಿನ್ನೆಲೆಯಲ್ಲಿ ಆಡಳಿತ, ವಾಣಿಜ್ಯ, ಶಿಕ್ಷಣ, ಆರ್ಥಿಕ, ಮನೋರಂಜನೆ ಮುಂತಾದ ಸಮಾಜದ ಎಲ್ಲ ಕ್ಷೇತ್ರಗಳ ವ್ಯವಹಾರಗಳನ್ನು ಗಣಕೀಕರಣ ಗೊಳಿಸುವಾಗ ಕನ್ನಡದ ಬಳಕೆ ಆಗಲೇಬೇಕಾಗಿದೆ. ಕನ್ನಡಿಗರು ಈ ಕುರಿತು ಒತ್ತಾಯ ಮಾಡಬೇಕಿದೆ.

**ಮುಖ್ಯವಾಗಿ ಗಮನಿಸಬೇಕಾದ ವಿಷಯಗಳು**

- ಈ ರೀತಿ ಎಲ್ಲ ಕ್ಷೇತ್ರಗಳ ವ್ಯವಹಾರಗಳ ಗಣಕೀಕರಣವು ಕನ್ನಡದಲ್ಲೇ ಆಗಬೇಕೆಂಬ ಬೇಡಿಕೆಗಳಿಗೆ ಅಗತ್ಯವಾದ ಅನೇಕಾನೇಕ ಅನ್ವಯಿಕ ತಂತ್ರಾಂಶಗಳನ್ನು ತಂತ್ರಾಂಶ ತಯಾರಿಕಾ ಸಂಸ್ಥೆಗಳು ಮತ್ತು ಗಣಕತಜ್ಞರು ಅಭಿವೃದ್ಧಿಪಡಿಸುವುದೇ ಈಗ ಆಗಬೇಕಾದ ಕಾರ್ಯ.
- ಇಲ್ಲಿ ನಾವು ಗಮನಿಸಬೇಕಾದ ಬಹುಮುಖ್ಯವಾದ ಸಂಗತಿ ಎಂದರೆ ಈ ರೀತಿಯ ಅನ್ವಯಿಕ ತಂತ್ರಾಂಶಗಳ ಅಭಿವೃದ್ಧಿ ಮತ್ತು ಬೇಡಿಕೆಗಳು ಪರಸ್ಪರ ಅವಲಂಬಿತವಾಗಿರುತ್ತವೆ. ಆದ್ದರಿಂದಲೇ ಈಗಾಗಲೇ ನುಡಿ ತಂತ್ರಾಂಶದೊಡನೆ ಉಚಿತವಾಗಿ ದೊರಕುತ್ತಿರುವ ಅನ್ವಯಿಕ ತಂತ್ರಾಂಶ ಅಭಿವೃದ್ಧಿ ಸಲಕರಣೆಗಳನ್ನು ಬಳಸಿಕೊಂಡು ವೈವಿಧ್ಯಮಯ, ಆಕರ್ಷಕ ಹಾಗೂ ಉಪಯುಕ್ತ ಅನ್ವಯಿಕ ತಂತ್ರಾಂಶಗಳನ್ನು ಸಿದ್ಧಪಡಿಸಿ ಜನತೆಗೆ ನೀಡುವ ಜವಾಬ್ದಾರಿ ತಂತ್ರಾಂಶ ಅಭಿವೃದ್ಧಿ ಸಂಸ್ಥೆಗಳ ಹಾಗೂ ತಂತ್ರಾಂಶ ತಜ್ಞರದ್ದಾಗಿದೆ. ಅವರುಗಳು ಈ ಬಗ್ಗೆ ಗಮನಹರಿಸಬೇಕು. ಗಣಕದಲ್ಲಿ ಕನ್ನಡ ಅಕ್ಷರಗಳನ್ನು ಮೂಡಿಸುವ ಬಗ್ಗೆ ಈಗ ಯಾರೂ ತಮ್ಮ ಗಮನವನ್ನು ಹರಿಸಬೇಕಿಲ್ಲ. ಇಂತಹ ಕನ್ನಡ ಅನ್ವಯಿಕ ತಂತ್ರಾಂಶಗಳ ಅಭಿವೃದ್ಧಿಗೆ ಪ್ರೋತ್ಸಾಹ, ಬಳಸುವ ಆಸೆ ಮತ್ತು ಇವುಗಳಿಗೆ ಹಣ ನೀಡಿ, ಕೊಂಡು ಬಳಸುವ ಪ್ರವೃತ್ತಿ ಸರಕಾರ ಹಾಗೂ ಕನ್ನಡ ಜನತೆಯಲ್ಲಿ ಬೆಳೆಯಬೇಕು.

• ಹಿಂದಿ, ತಮಿಳು ಮುಂತಾದ ಭಾಷಾ ಬಾಂಧವರಿಗೆ ಇರುವ ಇಂತಹ ತುಡಿತಗಳು ಕನ್ನಡಿಗರಲ್ಲೂ ಉಂಟಾಗ ಬೇಕು. ಹೀಗಾದಲ್ಲಿ ಮಾತ್ರ ಸಮಾಜದಲ್ಲಿ ಈಗಿರುವ ಡಿಜಿಟಲ್ ಡಿವೈಡ್ ಕ್ರಮೇಣ ಕಡಿಮೆಯಾಗುತ್ತದೆ.

**ಯೂನಿಕೋಡ್ ಬಳಕೆಯಲ್ಲಿನ ಸಮಸ್ಯೆಗಳು**

• ಅಂತರಜಾಲದ ಬಳಕೆ, ಪದಸಂಸ್ಕರಣೆ, ಜಾಲತಾಣಗಳು ಮುಂತಾದ ಸಂದರ್ಭಗಳಲ್ಲಿ ಈಗಾಗಲೇ ಯೂನಿಕೋಡನ್ನು ಬಳಸುವ ಅಭ್ಯಾಸ ಉಂಟಾಗುತ್ತಿದೆ. ಆದರೆ ಇವು ಹೆಚ್ಚು ಆಕರ್ಷಕವೂ ವೈವಿಧ್ಯಮಯವೂ ಆಗಬೇಕಾದಲ್ಲಿ ಈಗಿರುವ ಒಂದೇ ಒಂದು ಅಕ್ಷರಶೈಲಿಯ ಜೊತೆಗೆ ಹತ್ತಾರು ಆಕರ್ಷಕ ಅಕ್ಷರಶೈಲಿಗಳು ಸಿದ್ಧವಾಗಿ ಬಳಕೆಗೆ ಬರಬೇಕು.

• ಯೂನಿಕೋಡ್ ಬಳಕೆಯ ಸಂದರ್ಭಗಳಲ್ಲಿ ಯೂನಿಕೋಡ್ ಅಂಕಿಗಳಿಗೆ ಸಂಬಂಧಿಸಿದ ಕನ್ನಡ ಅಕ್ಷರಗಳನ್ನು ಆಯ್ದು ಅವುಗಳನ್ನು ಪರದೆಯ ಮೇಲೆ ಅಥವಾ ಕಾಗದದ ಮೇಲೆ ಮೂಡಿಸುವ ಪ್ರಕ್ರಿಯೆಯಲ್ಲಿ ಕನ್ನಡದ ಮೂಡಿಕೆ ಕುರಿತಂತೆ ಕೆಲವು ತಪ್ಪುಗಳಿವೆ. ಇವುಗಳತ್ತ ಮೈಕ್ರೋಸಾಫ್ಟ್ ಕಂಪನಿ, ಕರ್ನಾಟಕ ಸರ್ಕಾರ, ತಂತ್ರಜ್ಞರು ಮುಂತಾಗಿ ಎಲ್ಲಾ ಆಸಕ್ತರೂ ಗಮನ ಹರಿಸಿ ತಪ್ಪುಗಳನ್ನು ಸರಿಪಡಿಸಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಕೆಲವು ತಪ್ಪುಗಳನ್ನು ವಿಂಡೋಸ್ ಕಾರ್ಯನಿರ್ವಹಣಾವ್ಯವಸ್ಥೆಯ ಕೆಲವು ಆವೃತ್ತಿಗಳಲ್ಲಿ ಸರಿಪಡಿಸಲಾಗಿದೆ. ಈ ಸರಿಪಡಿಸುವಿಕೆಯು ಎಲ್ಲಾ ಕಾರ್ಯನಿರ್ವಹಣಾ ವ್ಯವಸ್ಥೆಗಳ ಎಲ್ಲಾ ಆವೃತ್ತಿಗಳಲ್ಲೂ ಆಗಬೇಕಿದೆ.

• ಯೂನಿಕೋಡ್ ಪರಿಸರದಲ್ಲಿ ಒಂದು ಆನ್ವಯಿಕ ತಂತ್ರಾಂಶವನ್ನು ಅಭಿವೃದ್ಧಿಪಡಿಸಿ ಅದೇ ಆನ್ವಯಿಕ ತಂತ್ರಾಂಶವನ್ನು ಆಸ್ಕಿ ಪರಿಸರದಲ್ಲಿ ಬಳಸಲು ತೊಡಗಿದರೆ ಪರದೆಯ ಮೇಲೆ ಮೂಡುವ ಮಾಹಿತಿಗಳ ಪಟ್ಟಿಗಳು, ಕಾಲಂಗಳು ಮುಂತಾದುವುಗಳಲ್ಲಿ ಗೊಂದಲಗಳಾಗಿಬಿಡುವ ಸಂದರ್ಭಗಳು ಹೆಚ್ಚಾಗಿವೆ. ಇವುಗಳನ್ನು ಸರಿಪಡಿಸುವ ದಿಸೆಯಲ್ಲಿ ಸ್ವಲ್ಪಮಟ್ಟಿನ ಅಭಿವೃದ್ಧಿ ಕಾರ್ಯಗಳೂ ನಡೆಯಬೇಕು. ಮುಖ್ಯವಾಗಿ, ತಂತ್ರಾಂಶದ ವಿಭಾಗವೊಂದು ಆಸ್ಕಿ ಅಥವಾ ಯೂನಿಕೋಡ್ ಪರಿಸರವನ್ನು ಗುರುತಿಸಿ ಆ ಪರಿಸರದಲ್ಲೇ ಕಾರ್ಯ ನಿರ್ವಹಿಸುವ ತಂತ್ರಾಂಶ ವಿಭಾಗಕ್ಕೆ ಬದಲಿಸಿಕೊಂಡು ಮೊದಲೇ ನಿಶ್ಚಯಿಸಲ್ಪಟ್ಟ ಆ ವಿಭಾಗದ ನಿರ್ದೇಶನಗಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸಬೇಕು. ಇದು ಮೇಲಿನ ಸಮಸ್ಯೆಗಳನ್ನು ನೀಗುತ್ತದೆ. ಈ ವಿಶಿಷ್ಟ ತಂತ್ರಾಂಶ ಸಲಕರಣೆಯನ್ನು ಸಿದ್ಧಪಡಿಸಿದರೆ ಅದು ಬಹು ಉಪಯುಕ್ತ ತಂತ್ರಾಂಶ ಪರಿಕರವಾಗುತ್ತದೆ.

**ಅಕ್ಷರಜಾಣ ತಂತ್ರಾಂಶ**

• ಕನ್ನಡಕ್ಕೆ ಒಂದು ಅಕ್ಷರಜಾಣ ತಂತ್ರಾಂಶವನ್ನು ಅಭಿವೃದ್ಧಿಪಡಿಸಬೇಕಾಗಿದೆ. ನಿಸ್ಸಂಶಯವಾಗಿ ಇದೊಂದು ಅತ್ಯುಪಯುಕ್ತ ಹಾಗೂ ಅತ್ಯಂತ ಜನಪ್ರಿಯವಾಗಬಲ್ಲ ತಂತ್ರಾಂಶವಾಗುತ್ತದೆ. ಇದರಿಂದಾಗಿ ನಾವು ಸಾಮಾನ್ಯವಾಗಿ ಕಾಗದದ ಮೇಲೆ ಬರೆಯುವಂತೆ ಗಣಕಕ್ಕೆ ಸಂಪರ್ಕಿಸಿದ ಒಂದು ಪ್ಯಾಡಿನ ಮೇಲೆ ವಿಶೇಷ ಪೆನ್ನಿನಿಂದ ಬರೆಯುತ್ತಾ ಹೋದಂತೆ ಆ ಮಾಹಿತಿಗಳೆಲ್ಲವೂ ಗಣಕದೊಳಗೆ ಪಠ್ಯ ರೂಪದಲ್ಲಿ ದಾಖಲಾಗಿ ಸುಂದರ ಲಿಪಿಯಲ್ಲಿ ಗಣಕದ ತೆರೆಯ ಮೇಲೆ ಮೂಡುತ್ತವೆ. ಯಾವುದೇ ಮಾಹಿತಿಯನ್ನಾದರೂ ಮೊದಲು ಬರೆದು ನಂತರ ಕೀಲಿ ಮಾಡಬೇಕಾದ ಕಾಲ, ಧನ ಹಾಗೂ ಶ್ರಮ ವ್ಯಯದ ಪರಿಸ್ಥಿತಿಯು ಇದರಿಂದ ನಿವಾರಣೆಯಾಗುತ್ತದೆ.




ಅಲ್ಲದೆ ಈಗಾಗಲೇ ಮುದ್ರಿತವಾಗಿರುವ, ಕೈಬರಹದಲ್ಲಿರುವ, ಓಲೆಗರಿಗಳಲ್ಲಿರುವ, ಮಾಹಿತಿಗಳನ್ನು ಸ್ಕ್ಯಾನ್ ಮಾಡಿ ಅಕ್ಷರಗಳನ್ನು ಗುರುತಿಸಿ ಎಲ್ಲವನ್ನೂ ಗಣಕಗಳ ನೆನಪಿನ ಕೋಶಗಳಲ್ಲಿ ದಾಖಲುಮಾಡುವ ಮತ್ತೊಂದು ಪಠ್ಯನಿರೂಪಣಾ ತಂತ್ರಾಂಶ ವ್ಯವಸ್ಥೆಯೂ ಕನ್ನಡಕ್ಕೆ ಬಹುಮುಖ್ಯವಾಗಿದೆ. ಕನ್ನಡದ ಬರವಣಿಗೆಯಲ್ಲಿನ ಎಲ್ಲ ವೈವಿಧ್ಯತೆಗಳನ್ನು ಮತ್ತು ಕನ್ನಡದ ಎಲ್ಲ ರೀತಿಯ ಗುಣಿತಾಕ್ಷರಗಳು ಮತ್ತು ಸಂಯುಕ್ತಾಕ್ಷರಗಳನ್ನು ಗುರುತಿಸುವ ಸಾಮರ್ಥ್ಯವನ್ನು ಅಕ್ಷರಜಾಣ ಎಂದು ಕರೆಯಲಾಗುವ ಈ ತಂತ್ರಾಂಶವು ಹೊಂದಿರಬೇಕಾಗಿರುತ್ತದೆ. ಭಾರತೀಯ ಭಾಷೆಗಳೆಲ್ಲವೂ ಅತ್ಯಂತ ವೈಜ್ಞಾನಿಕವಾಗಿರುವುದರಿಂದ ಕನ್ನಡ ಭಾಷೆಯ ವೈಜ್ಞಾನಿಕತೆ ಮತ್ತು ವೈಶಿಷ್ಟ್ಯತೆಗಳನ್ನು ಅತ್ಯಂತ ಯಶಸ್ವಿಯಾಗಿ ಈ ಗಣಕ ತಾಂತ್ರಿಕತೆಗೆ ಅಳವಡಿಸಬಹುದಾಗಿದೆ. ಪರಸ್ಪರ ಪೂರಕವಾದ ಈ ಎರಡೂ ಸೌಲಭ್ಯಗಳನ್ನೊಳಗೊಂಡ ವ್ಯವಸ್ಥೆಯು ಕನ್ನಡಕ್ಕೆ ಮಹತ್ತರ ಕೊಡುಗೆಯಾಗುತ್ತದೆ. ಈ ದಿಸೆಯಲ್ಲಿ ಹಲವು ಮಹನೀಯರು ಸಾಕಷ್ಟು ಶ್ರಮವಹಿಸಿ ಕೆಲವು ಅಭಿವೃದ್ಧಿ ಹಂತಗಳನ್ನು ತಲುಪಿದ್ದಾರೆ. ಇದು ಪೂರ್ಣವಾಗಿ ಕಾರ್ಯಗತವಾಗಲು ಎಲ್ಲ ಕನ್ನಡಾಭಿಮಾನಿಗಳ ಕೋರಿಕೆ, ಬೇಡಿಕೆ, ಸೂಕ್ತ ಪ್ರೋತ್ಸಾಹ ಅಗತ್ಯವಾಗಿವೆ.

**ನುಡಿಜಾಣ ತಂತ್ರಾಂಶ**

• ಶೀಘ್ರಲಿಪಿ ತಜ್ಞರು ನಮ್ಮ ಮಾತುಗಳನ್ನು ಶೀಘ್ರಲಿಪಿಯಲ್ಲಿ ದಾಖಲಿಸಿ, ಎಲ್ಲರ ಬಳಕೆಯ ಲಿಪಿಯಲ್ಲಿ ಬರೆದು ಅಥವಾ ಟೈಪು ಮಾಡಿ ಬಳಸುವುದು ಹಿಂದಿನಿಂದ ಬಂದಿರುವ ಪದ್ಧತಿ. ಟೇಪ್ ರೆಕಾರ್ಡರುಗಳನ್ನು ಬಳಸಿ ಮೊದಲು ದಾಖಲು ಮಾಡಿದ ಮಾತುಗಳನ್ನು ಕಾಲಕ್ರಮದಲ್ಲಿ ನಿಧಾನಗತಿಯಲ್ಲಿ ಕೇಳುತ್ತಾ ಬರವಣಿಗೆಯ ದಾಖಲೆಯನ್ನಾಗಿ ಪರಿವರ್ತಿಸುವುದೂ ನಡೆದು ಬಂದಿದೆ. ಆದರೆ ಈಗ ಇಂಗ್ಲಿಷ್ ಭಾಷೆಗಾಗಿ ಅಭಿವೃದ್ಧಿಗೊಂಡು ಬಳಕೆಯಲ್ಲಿರುವ ನುಡಿಜಾಣ ತಂತ್ರಾಂಶವು ಚಾಲ್ತಿಯಲ್ಲಿರುವಾಗ ಗಣಕದ ವಿಶೇಷ ಗ್ರಹಣಸಾಧನವು ಗಣಕದ ಮುಂದೆ ಆಡುವ ಇಂಗ್ಲಿಷ್ ಭಾಷಾ ಶಬ್ದಗಳನ್ನು ಗ್ರಹಿಸಿ ಅವಕ್ಕೆ ಸಮಾನವಾದ ಪಠ್ಯವನ್ನು ಗಣಕದೊಳಗೆ ದಾಖಲಿಸು ತ್ತದೆ. ಆದರೆ ಇಂಗ್ಲಿಷ್ ಅವೈಜ್ಞಾನಿಕ, ಅಸಂದಿಗ್ಧ ಹಾಗೂ ಧ್ವನ್ಯಾತ್ಮಕವಲ್ಲದ ಭಾಷೆಯಾದ್ದರಿಂದ ಅನೇಕ ಸಮಸ್ಯೆಗಳು ಉಂಟಾಗುತ್ತವೆ. ಕನ್ನಡ ಭಾಷೆಯು ಅತ್ಯಂತ ವೈಜ್ಞಾನಿಕ, ಅಸಂದಿಗ್ಧ, ಸುಸಂಬದ್ಧ ಹಾಗೂ ಬಹುಮುಖ್ಯವಾಗಿ ಧ್ವನ್ಯಾತ್ಮಕ ಗುಣಗಳನ್ನು ಹೊಂದಿರುವುದರಿಂದ ಕನ್ನಡಕ್ಕಾಗಿ ಅಭಿವೃದ್ಧಿಗೊಳಿಸುವ ಈ ರೀತಿಯ 'ನುಡಿಜಾಣ' ತಂತ್ರಾಂಶದಿಂದ ಮಾತುಗಳನ್ನು ನಿಶ್ಚಿತವಾದ, ತಪ್ಪಿಲ್ಲದ ಕನ್ನಡದ ಲಿಖಿತ ಪಠ್ಯವನ್ನಾಗಿ ಪರಿವರ್ತಿಸಲು ಸಾಧ್ಯ. ಜೊತೆಗೆ ಮಾತುಗಳಲ್ಲಿ ಆಕಸ್ಮಾತ್ತಾಗಿ ನುಸುಳ ಬಹುದಾದ ತಪ್ಪುಗಳನ್ನೂ ಉಚ್ಚಾರಣಾ ದೋಷಗಳನ್ನೂ ಸರಿಪಡಿಸಿಕೊಳ್ಳುವ ಧ್ವನಿಸಂಶ್ಲೇಷಣ ತಾಂತ್ರಿಕತೆಯನ್ನು ಇದರಲ್ಲಿ ಅಳವಡಿಸಬಹುದು.

ಕನ್ನಡಕ್ಕಾಗಿ ಅಕ್ಷರಜಾಣ ಮತ್ತು ನುಡಿಜಾಣ ತಂತ್ರಾಂಶಗಳನ್ನು ಅಭಿವೃದ್ಧಿಗೊಳಿಸಿದರೆ ಅವು ಅತ್ಯಮೂಲ್ಯ ಪರಿಕರಗಳಾಗುತ್ತವೆ. ಹೀಗೆ ಸಿದ್ಧವಾಗುವ ತಂತ್ರಾಂಶಗಳು 'ನುಡಿ' ತಂತ್ರಾಂಶದಂತೆಯೇ ಎಲ್ಲರಿಗೂ ಉಚಿತವಾದ ಬಳಕೆಗೆ ದೊರಕುವಂತಾಗಬೇಕು.

ಒಟ್ಟಿನಲ್ಲಿ,

(೧) ಯೂನಿಕೋಡ್ ವಾತಾವರಣದಲ್ಲಿ ಕನ್ನಡವನ್ನು ಸುಲಲಿತವಾಗಿ, ಸರಿಯಾಗಿ ಹಾಗೂ ಯಶಸ್ವಿಯಾಗಿ ಬಳಸಲು ಅನುವಾಗುವಂತಹ ತಂತ್ರಾಂಶ ಪರಿಕರಗಳು ಹಾಗೂ ಅಕ್ಷರಶೈಲಿಗಳ ಸಿದ್ಧತೆ

ಮತ್ತು

(೨) ಕನ್ನಡಕ್ಕಾಗಿ ಅಕ್ಷರಜಾಣ ಹಾಗೂ ನುಡಿಜಾಣ ತಂತ್ರಾಂಶಗಳ ಅಭಿವೃದ್ಧಿ – ಇವುಗಳು ಕನ್ನಡ ಗಣಕ ಕ್ಷೇತ್ರಕ್ಕೆ ಅತ್ಯಮೂಲ್ಯ, ಮಹತ್ತಮ ಹಾಗೂ ಸರ್ವೋಪಯೋಗಿ ಕೊಡುಗೆಗಳಾಗುತ್ತವೆ.

**ನಿಜವಾದ ಕನ್ನಡಿಗರಾಗಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಪ್ರಜ್ವಲಿಸುತ್ತಿರುವ ಮಹಾನ್ ವ್ಯಕ್ತಿಗಳು, ತಮ್ಮ ಬುದ್ಧಿ ಹಾಗೂ ಕುಶಲತೆಗಳಿಂದ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕಾರ್ಯಗಳಲ್ಲಿ ಪರಿಣತೆಯನ್ನು ಗಳಿಸಿರುವ ಕನ್ನಡಿಗರಾದ ಗಣಕ ತಂತ್ರಜ್ಞರು ಮುಂತಾದವರು ಕನ್ನಡಕ್ಕೆ ಸಂಬಂಧಿಸಿದ ಉಪಯುಕ್ತ ಮಾಹಿತಿ ತಂತ್ರಜ್ಞಾನ ಪರಿಕರಗಳನ್ನು ಅದರಲ್ಲೂ ಮುಖ್ಯವಾಗಿ ಅಕ್ಷರಜಾಣ ಮತ್ತು ಧ್ವನಿಜಾಣ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿ ಕನ್ನಡಿಗರಿಗೆ ನೀಡಿದರೆ ಅವರ ಕೊಡುಗೆಗಳು ಅಜರಾಮರವಾಗುತ್ತವೆ.**

ಜಿ. ವಿ. ಶ್ರೀನಾಥಶಾಸ್ತ್ರಿ
ನಂ. ೧೨೩/೧, 'ಅನುಗ್ರಹ', ನೇತಾಜಿ ರಸ್ತೆ, ೪ನೇ ಅಡ್ಡರಸ್ತೆ
೪ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಪಾಕೀಸ್ತಾನ : ಇತ್ತ ದರಿ, ಅತ್ತ ಹುಲಿ

**ಪಾ**ಕೀಸ್ತಾನ ಇಂದು ಅಡಕತ್ತ್ರಿಯಲ್ಲಿ ಸಿಕ್ಕಿಕೊಂಡಿದೆ. ಎತ್ತ ಹೊರಳಿದರೂ ಆಪತ್ತೆ. ಅಮೆರಿಕದ ಒತ್ತಡ ಒಂದು ಕಡೆಯಾದರೆ ಉಗ್ರಗಾಮಿಗಳ, ಮುಖ್ಯವಾಗಿ ತಾಲಿಬಾನ್‌ಗಳ ಹಾವಳಿ ಇನ್ನೊಂದು ಕಡೆ. ಈ ಎರಡೂ ಕೂಡ ಒಂದು ಕಾಲದಲ್ಲಿ ಆ ದೇಶಕ್ಕೆ ಆಶ್ರಯವಾಗಿದ್ದುವು, ಈಗಲೂ ಅಷ್ಟೆ, ಯಾರನ್ನು ಕೈಬಿಟ್ಟರೂ ಆಪತ್ತು. ಈಗ ಇಬ್ಬರಿಂದಲೂ ಉಪಟಳ. ಹಾಗಾಗಿ ಜನಸಾಮಾನ್ಯರ ಬಾಳು ಅಸ್ಥಿರ, ಅಸ್ತವ್ಯಸ್ತ. ಸ್ವಾತಂತ್ರ್ಯ, ಸಾರ್ವಭೌಮತ್ವಗಳು ಅಮೆರಿಕಾಗೆ ಒತ್ತೆಯಾಗಿದ್ದು ಸ್ವತಂತ್ರ ಅಸ್ತಿತ್ವವನ್ನೇ ಕಳೆದುಕೊಂಡು ದೇಶ ತತ್ತರಿಸುತ್ತಿದೆ. ತಾಲಿಬಾನ್ ಉಗ್ರರನ್ನು ಹತ್ಯೆಗೈಯ್ಯಲು ಅಮೆರಿಕದ ಕ್ಷಿಪಣಿ ದಾಳಿ ಸಾರ್ವಜನಿಕರಿಗೆ ಹಿಂಸೆಯಾಗಿದ್ದು ಸಾವು-ನೋವುಗಳು ಸಂಭವಿಸುತ್ತಿದ್ದರೆ, ಉಗ್ರರು ಹೆಚ್ಚು ಕಡಿಮೆ ಪ್ರತಿದಿನ ನಡೆಸುತ್ತಿರುವ ನಾನಾ ಬಗೆಯ ದಾಳಿಗಳು ಅಮಾಯಕ ಜನರನ್ನು ಆಹುತಿ ತೆಗೆದುಕೊಳ್ಳುತ್ತಿವೆ. ಹೀಗಾಗಿ ಜನ ಭಯದಿಂದಲೇ ಬಾಳು ಸಾಗಿಸಬೇಕಾಗಿದೆ. ಇಂಥ ಪರಿಸ್ಥಿತಿಯಲ್ಲಿ ಪಾಕೀಸ್ತಾನ ಒಂದು ರಾಷ್ಟ್ರವಾಗಿ ಉಳಿಯುವುದೇ ಸಂದೇಹಕ್ಕೆಡೆಯಾಗಿದೆ. ಪಾಕೀಸ್ತಾನದ ಗೂಢಚರ್ಯೆ ಸಂಸ್ಥೆ 'ಐಎಸ್‌ಐ' ಒಳಗಿಂದಲೇ ಕಿರುಕುಳ ಕೊಡುತ್ತಿದ್ದರೆ, ಅಧಿಕಾರದ ರುಚಿ ಬಹುಕಾಲ ಅನುಭವಿಸಿರುವ ಸೇನೆ ಮತ್ತೆ ಅಧಿಕಾರ ಕಸಿಯಲು ಹೊಂಚುಹಾಕುತ್ತಿದೆ. ಒಳಗೆ ಹೊರಗೆ ಎಲ್ಲ ಕಡೆಯಿಂದ ಒತ್ತಡ ಅನುಭವಿಸುತ್ತಿರುವ ಚುನಾಯಿತ ಜರ್ದಾರಿ-ಗಿಲಾನಿ ಸರಕಾರ ಮುಂದುವರಿಯುತ್ತಿರುವುದೇ ಒಂದು ಪವಾಡ.

ಪಾಕೀಸ್ತಾನ ಒಂದು ಸ್ವತಂತ್ರ ರಾಷ್ಟ್ರವಾಗಿ ಅಸ್ತಿತ್ವಕ್ಕೆ ಬಂದದ್ದೆ ಅಸಹಜವಾಗಿ. ಮೊದಲ ದಿನಗಳಲ್ಲಿ ಅನುಭವಿಸಿದ್ದೇ ರಕ್ತಪಾತ. ಒಂದು ನೆಲೆ ಕಂಡುಕೊಳ್ಳುವಷ್ಟರಲ್ಲೇ ದೊರೆತ ಆಸರೆ ಅಮೆರಿಕದ ಸಖ್ಯ, ಈಗ ಅದೇ ಉರುಳಾಗಿದೆ. ಅಸ್ತಿತ್ವಕ್ಕೆ ಬಂದ ಏಳನೇ ವರ್ಷದಲ್ಲೆ (೧೯೫೪) ಪಾಕೀಸ್ತಾನ ಅಮೆರಿಕದೊಂದಿಗೆ ರಕ್ಷಣಾ ಒಪ್ಪಂದಕ್ಕೆ ಸಹಿ ಹಾಕಿತು. ಆಗಿನಿಂದ ರೋಗಿಗೆ ಆಕ್ಸಿಜನ್ ನೀಡುವಂತೆ ಪಾಕೀಸ್ತಾನಕ್ಕೆ ಆರ್ಥಿಕ ನೆರವಾಗಿ ಮಿಲಿಯಗಟ್ಟಲೆ ಡಾಲರುಗಳು ಹರಿಯತೊಡಗಿತು. ದೊಡ್ಡ ಪ್ರಮಾಣದಲ್ಲಿ ಶಸ್ತ್ರಾಸ್ತ್ರಗಳ ಸರಬರಾಜೂ ಆಯಿತು. ಆಗ ಅಮೆರಿಕದ ಹಿತಾಸಕ್ತಿಗೆ ಈ ಭೂಭಾಗದಲ್ಲಿ ಸೋವಿಯೆತ್ ಒಕ್ಕೂಟ ಮತ್ತು ಚೀಣೀ ಗಣರಾಜ್ಯಗಳ ವಿರುದ್ಧ ನಿಗಾ ಇರಿಸಲು ಒಂದು ನಂಬಿಕಾರ್ಹವಾದ ಮಿತ್ರನ ಅವಶ್ಯಕತೆ ಇತ್ತು. ಪಾಕೀಸ್ತಾನ ಅದಕ್ಕೆ ಸಿದ್ಧವಾಗಿತ್ತು. ಅಸ್ತಿತ್ವಕ್ಕೆ ಬಂದ ಆರೂವರೆ ದಶಕಗಳಲ್ಲಿ ಪಾಕೀಸ್ತಾನದಲ್ಲಿ ಮುಕ್ಕಾಲು ವಾಸಿ ಮಿಲಿಟರಿ ಸರ್ವಾಧಿಕಾರಿ ಆಡಳಿತವೇ. ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಮಂತ್ರ ಜಪಿಸುವ ಅಮೆರಿಕಾಗೆ ಅದೇ ಆಪ್ಯಾಯಮಾನವಾಗಿತ್ತು, ಹಿತವಾಗಿತ್ತು. ಈ ಆಪ್ತಸಂಬಂಧದ ಫಲಾನುಭವಿಗಳು ಮಿಲಿಟರಿ ಅಧಿಕಾರಿಗಳು, ಭ್ರಷ್ಟ ರಾಜಕಾರಣಿಗಳು. ಜನಸಾಮಾನ್ಯರ ಪಾಲಿಗೆ ಬಡತನ. ಜನತೆಯ ಅತೃಪ್ತಿಯನ್ನು ತಣಿಸಲಾಗದೆ, ಅವರ ಗಮನವನ್ನು ಬೇರೆಡೆಗೆ ಹರಿಸಲು ಸುಲಭೋಪಾಯ ಭಾರತದ ಮೇಲೆ ಹಗೆತನದ ಸಾಧನೆ, ಉಪಖಂಡದಲ್ಲಿ ಈ ಎರಡೂ ದೇಶಗಳ ನಡುವೆ ಬೆಳೆದಿರುವುದು ವೈಮನಸ್ಯ. ಕಾಶ್ಮೀರ ವಿವಾದದಿಂದ ಆರಂಭವಾದ ಸಶಸ್ತ್ರ ಘರ್ಷಣೆ, ದ್ವೇಷ ಇಂದಿಗೂ ಬಗೆಹರಿಯದೆ ಇದೆ. ಮೂರು ಯುದ್ಧಗಳಾದರೂ ಸಮಸ್ಯೆ ಯಥಾಸ್ಥಿತಿಯಲ್ಲಿದೆ. ಇಂದೂ ಕೂಡ ಮಾತುಕತೆಗಳು ನಡೆಯುತ್ತಿದ್ದರೂ ದಿಕ್ಕುದೆಸೆ ಕಾಣದೆ ಇದೆ. ಎರಡೂ ದೇಶಗಳು ಮಾತುಕತೆಯಲ್ಲಿ ತೊಡಗಿರುವುದೇ ಗುಣಾತ್ಮಕ ಬೆಳವಣಿಗೆ; ಒತ್ತಡ ಯಾವ ಕಡೆಯಿಂದಲೇ ಬಂದಿರಲಿ.

ಸೇನಾಡಳಿತೆ, ಐಎಸ್‌ಐ ಪ್ರಾಬಲ್ಯ, ಮೂಲಭೂತವಾದಿ ಉಗ್ರರ ಏಳಿಗೆ ಇವುಗಳೆಲ್ಲದರ ಮಧ್ಯೆ ಪಾಕೀಸ್ತಾನ ಒಂದು ರಾಷ್ಟ್ರವಾಗಿ ಉಳಿದುಕೊಳ್ಳಲು ತೊಳಲಾಡುತ್ತಿದೆ. ಮೊದಲಿನಿಂದಲೂ ಪಂಜಾಬಿ, ಸಿಂಧಿ ಪ್ರಾಬಲ್ಯ ಪೂರ್ವ ಪಾಕೀಸ್ತಾನ (ಪೂರ್ವ ಬಂಗಾಳ)ಕ್ಕೆ ನುಂಗಲಾರದ ತುತ್ತಾಗಿತ್ತು. ಹಾಗಾಗಿ ೧೯೭೧ರಲ್ಲಿ ಅದು ಪ್ರತ್ಯೇಕಗೊಂಡು ಸ್ವತಂತ್ರ ಬಾಂಗ್ಲಾದೇಶವಾದ ಮೇಲೆ ಪಾಕೀಸ್ತಾನ ಇನ್ನಷ್ಟು ದುರ್ಬಲವಾಯಿತು. ಬಲೂಚಿಸ್ತಾನ ಯಾವತ್ತೂ ಅದಕ್ಕೆ ದೊಡ್ಡ ತಲೆನೋವೆ. ಈಗಂತೂ ಈ ಭಾಗ ಹೆಚ್ಚು ಕಡಿಮೆ ತಾಲಿಬಾನ್‌ಗಳ ವಶದಲ್ಲಿದೆ. ಇವೆಲ್ಲ ಅವಾಂತರಗಳ ಮಧ್ಯೆ ಪಾಕೀಸ್ತಾನ ನ್ಯೂಕ್ಲಿಯರ್ ಅಸ್ತ್ರವನ್ನೂ ತಯಾರಿಸಿಕೊಂಡಿದೆ. ಉತ್ತರ ಕೊರಿಯ, ಇರಾನ್ ಮುಂತಾದ ದೇಶಗಳ ನ್ಯೂಕ್ಲಿಯರ್ ಕಾರ್ಯಕ್ರಮದ ಬಗ್ಗೆ ತೀವ್ರ ವಿರೋಧ ವ್ಯಕ್ತಗೊಳಿಸುವ ಅಮೆರಿಕ ಪಾಕೀಸ್ತಾನದ ಮಟ್ಟಿಗೆ ಸಹನೆ ತೋರಿದೆ, ಇಸ್ರೇಲಿಗೆ ತೋರಿಸಿರುವ ಹಾಗೆ. ಪಾಕೀಸ್ತಾನದ ಬಳಿ ಇರುವ ನ್ಯೂಕ್ಲಿಯರ್ ಅಸ್ತ್ರ ಭಯೋತ್ಪಾದಕರ ಕೈಗೆ ಬೀಳುವ ಭೀತಿ ಈಚಿನ ದಿನಗಳಲ್ಲಿ ಹೆಚ್ಚಾಗಿದೆ. ಭಾರತದ ಮಟ್ಟಿಗೆ ಇದು ನಿಜಕ್ಕೂ ಆತಂಕಕಾರಿ.

ಪಾಕೀಸ್ತಾನಕ್ಕೆ ಇಂದು ಕಂಟಕವಾಗಿರುವ ತಾಲಿಬಾನ್‌ಗಳು, ಉಗ್ರಗಾಮಿಗಳು ಭಯೋತ್ಪಾದಕರುಗಳ ಬೆಳವಣಿಗೆಗೆ ಮೂಲ ಅಮೆರಿಕವೆ. ಕಳೆದ ಶತಮಾನದ ಎಂಭತ್ತರ ದಶಕದಲ್ಲಿ ಆಫ್ಘಾನಿಸ್ತಾನದಲ್ಲಿ ಸೋವಿಯೆತ್ ಸೇನೆಯನ್ನು ಎದುರಿಸಲು ಪಾಕೀಸ್ತಾನದ ಗೂಢಚರ್ಯೆ ಸಂಸ್ಥೆ ಐಎಸ್‌ಐ ನೆರವಿನಿಂದ ಅಮೆರಿಕದ ಸಿಐಎ ಸಂಘಟಿಸಿದ, ಎತ್ತಿ ಕಟ್ಟಿದ ಸಂಸ್ಥೆಗಳೇ ಅಲ್‌ಖೈದಾ, ತಾಲಿಬಾನ್‌ಗಳು, ಒಸಮಾ ಬಿನ್ ಲಾಡೆನ್, ಹಿಕ್ಮತ್ಯಾರ್, ಮುಲ್ಲ ಉಮರ್ ವ್ಯಕ್ತಿಗಳು. ಪಾಕೀಸ್ತಾನ ಸರಕಾರ ಮತ್ತು ಸೇನೆ ಈ ಸಂಘಟನೆಗಳು ಮತ್ತು ವ್ಯಕ್ತಿಗಳನ್ನು ತನ್ನ ಹಿತಾಸಕ್ತಿಗೂ ಬಳಸಿಕೊಂಡಿತು. ಭಾರತದ ವಿರುದ್ಧವಾಗಿ ಭಯೋತ್ಪಾದಕ ಕೃತ್ಯಗಳನ್ನು ನಡೆಸಲು ಅವುಗಳಿಗೆ ಕುಮ್ಮಕ್ಕು ನೀಡಿತು. ಹೀಗೆ ಬೆಳೆದ ಶಕ್ತಿಗಳು ಈಗ ಈ ಭೂಭಾಗದಲ್ಲಷ್ಟೇ ಅಲ್ಲದೆ ವಿಶ್ವದಾದ್ಯಂತ ಆತಂಕ ಮೂಡಿಸಿವೆ. ಒಸಾಮಾ ಬಿನ್ ಲಾಡೆನ್ ಪಾಕೀಸ್ತಾನದ ರಾಜಧಾನಿಗೆ ಸಮೀಪದಲ್ಲೇ, ಅಧಿಕವಾಗಿ ಮಿಲಿಟರಿ ಅಧಿಕಾರಿಗಳು ವಾಸಿಸುವ ಜಾಗದಲ್ಲಿ ಬೃಹತ್ ಬಂಗಲೆ ಕಟ್ಟಿಕೊಂಡು ಐಷಾರಾಮಿ ಜೀವನ ನಡೆಸುತ್ತಿದ್ದ ಐದು ವರ್ಷಗಳಿಂದ. ಅಮೆರಿಕ ಇದನ್ನು ಪತ್ತೆ ಹಚ್ಚಿ ತನ್ನ ಸೇನೆ ನುಗ್ಗಿಸಿ ಕಾರ್ಯಾಚರಣೆ ನಡೆಸಿ ಆತನನ್ನು ಕೊಲೆಗೈದಿತು. ಪಾಕೀಸ್ತಾನ ಸರಕಾರಕ್ಕೆ ಈ ದಾಳಿಯ ಸುಳಿವೇ ಇರಲಿಲ್ಲ, ಅಂದರೆ ಅಮೆರಿಕ ಸೇನೆ ಯಾವಾಗ ಬೇಕಾದರೂ ಎಲ್ಲಿ ಬೇಕಾದರೂ ಪಾಕೀಸ್ತಾನದಲ್ಲಿ ಪ್ರವೇಶಿಸಬಹುದು ಎಂದಾಯಿತು. ಹಾಗಿರುವಾಗ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವದ ಉಲ್ಲಂಘನೆಗೆ ಬೆಲೆಯೇ ಇಲ್ಲ. ಇದುವರೆಗೆ ಪಾಕೀಸ್ತಾನ ಸರಕಾರ ಈ ಬಗ್ಗೆ ಸೇನೆಯ ಅಧಿಕಾರಿಗಳನ್ನು ಪ್ರಶ್ನಿಸುವ ಗೊಡವೆಗೆ ಹೋಗಿಲ್ಲ. ಹೀಗಿದೆ ಪ್ರಜಾಪ್ರಭುತ್ವ ಸರಕಾರ ಮತ್ತು ಸೇನೆ ನಡುವಿನ ಸಂಬಂಧ. ತಾಲಿಬಾನ್ ಉಗ್ರರನ್ನು ಸದೆಬಡಿಯಲು ಪಾಕೀಸ್ತಾನದ ಗಡಿಯಮೇಲೆ ದಿನನಿತ್ಯ ಅಮೆರಿಕದ ಡ್ರೋನ್ ಕ್ಷಿಪಣಿಗಳು ದಾಳಿ ನಡೆಸುತ್ತಿವೆ. ಇದುವರೆಗೆ ಉಗ್ರರಿಗಿಂತ ಸಾರ್ವಜನಿಕರ ಸಾವು-ನೋವುಗಳೇ ಹೆಚ್ಚು. ಪಾಕೀಸ್ತಾನ ಸರಕಾರಕ್ಕೆ ಈ ಬಗ್ಗೆ ಪ್ರತಿಭಟನೆ ಮಾಡಲೂ ಸಹ ತ್ರಾಣವಿಲ್ಲ. ಈಚೆಗೆ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಹಿಲರಿ ಕ್ಲಿಂಟನ್ ಪಾಕೀಸ್ತಾನದಲ್ಲಿ ಹೆಚ್ಚುತ್ತಿರುವ ಅಮೆರಿಕ ವಿರೋಧಿ ಪ್ರತಿಭಟನೆಗಳ ಕುರಿತು ಸರಕಾರದ ಗಮನಸೆಳೆದಿದ್ದಾರೆ. ಉಗ್ರರನ್ನು ಸದೆಬಡಿಯಲು ಪಾಕ್ ಸರಕಾರದ ಕ್ರಮಗಳ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿರುವ ಅವರು ಪರಿಸ್ಥಿತಿ ಹೀಗೇ ಮುಂದುವರಿದರೆ ಅಮೆರಿಕದ ಸೇನೆ ನೇರಕ್ರಮ ಕೈಗೊಳ್ಳಬೇಕಾದೀತು ಎಂದು ಎಚ್ಚರಿಕೆ ನೀಡಿದ್ದಾರೆ. ಪಾಕೀಸ್ತಾನ ಸರಕಾರ ಈ ಎಲ್ಲವನ್ನೂ ನುಂಗಿಕೊಳ್ಳಬೇಕಾದ ಅಸಹಾಯಕ ಪರಿಸ್ಥಿತಿಯಲ್ಲಿದೆ. ವಸ್ತುಶಃ ಅಮೆರಿಕದ ಬೆದರಿಕೆಯ ನೆರಳಿನಲ್ಲಿಯೇ ಇದೆ.

ಒಟ್ಟಿನಲ್ಲಿ ಇನ್ನೂ ನೆಲೆ ಕಾಣದ ಪಾಕೀಸ್ತಾನದ ಪ್ರಜಾಪ್ರಭುತ್ವ ಸರಕಾರ ಎಷ್ಟು ಕಾಲ ಉಳಿದೀತೊ ಊಹಿಸುವುದು ಕಷ್ಟ. ಒಳಗೆ, ಹೊರಗೆ ಎರಡೂ ಕಡೆ ಒತ್ತಡಗಳ ಸುಳಿಯಲ್ಲಿ ಸಿಕ್ಕಿರುವ ಪಾಕ್ ಸರಕಾರದೊಂದಿಗೆ ಭಾರತ ಸರಕಾರ ವ್ಯವಹರಿಸಬೇಕಾಗಿದೆ. ಈಚೆಗೆ ಸಿಯಾಚಿನ್ ಕುರಿತ ಮಾತುಕತೆಗಳೂ ಮತ್ತೆ ವಿಫಲಗೊಂಡಿವೆ. ಸಂಬಂಧಗಳ ಸುಧಾರಣೆಯ ಬಗ್ಗೆ ಮಾತುಕತೆಗಳು ನಡೆಯುತ್ತಿವೆಯಾದರೂ ದಿಕ್ಕು ದೆಶೆ ಇಲ್ಲವಾಗಿದೆ. ಮಾತುಕತೆಗಳು ಮುರಿದು ಬೀಳದೆ ಮುಂದುವರಿಯುತ್ತಿರುವುದೇ ಸಮಾಧಾನಕರ ಸಂಗತಿ. ಏಕೆಂದರೆ ಅದು ಬಿಟ್ಟರೆ ಅನ್ಯಮಾರ್ಗವಿಲ್ಲ. ಅಸ್ಥಿರ ಪಾಕೀಸ್ತಾನ ಯಾವತ್ತೂ ಆತಂಕಕಾರಿ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

**ಕೆ. ಎಲ್. ಗೋಪಾಲಕೃಷ್ಣ ರಾವ್**

# ಮಧುಮೇಹ ಮೆಟ್ಟಿನಿಂತ ಬ್ಯಾಲೆ ನರ್ತಕಿ




**ನಾ**ನು ಈಚೆಗೆ ಅಮೆರಿಕಕ್ಕೆ ಹೋಗಿದ್ದಾಗ ಅಲ್ಲಿ ಪಿಟ್ಸ್‌ಬರ್ಗ್ ನಗರದಲ್ಲಿ ಮಧುಮೇಹ - ತಜ್ಞೆಯಾಗಿ ವೈದ್ಯವೃತ್ತಿಯಲ್ಲಿ ತೊಡಗಿರುವ ನನ್ನ ಮಗಳು ಡಾ॥ ಪೂರ್ಣಿಮ ರಾವ್ ತಾನು ಕೆಲಸ ಮಾಡುತ್ತಿದ್ದ ಆಸ್ಪತ್ರೆಯನ್ನು ತೋರಿಸಲು ನನ್ನನ್ನು ಅಲ್ಲಿಗೆ ಕರೆದೊಯ್ದಿದ್ದಳು. ಅಮೆರಿಕದಲ್ಲೂ ಮಧುಮೇಹ ರೋಗವು ಜನರನ್ನು ವ್ಯಾಪಕವಾಗಿ ಕಾಡುತ್ತಿರುವ ರೋಗ-ಸಮಸ್ಯೆಯಾಗಿದೆ. ಹಾಗಾಗಿ ಈ ರೋಗಕ್ಕೆ ಸಂಬಂಧಿಸಿದ ಆಸ್ಪತ್ರೆ ಚಿಕಿತ್ಸಾಲಯಗಳನ್ನು ವಿಶೇಷ ಸೌಕರ್ಯ-ಸೌಲಭ್ಯಗಳೊಂದಿಗೆ ಎಚ್ಚರಿಕೆ ವಹಿಸಿ ನಿರ್ಮಿಸಲಾಗಿದೆ.

ನನ್ನ ಮಗಳು ನನ್ನನ್ನು ಕರೆದೊಯ್ದ ಈ ಆಸ್ಪತ್ರೆಯೂ ವಿಶಾಲ ನಿವೇಶನದ ಮಧ್ಯೆ ಸುಸಜ್ಜಿತವಾಗಿ ನಿರ್ಮಿತವಾಗಿದ್ದಿತು. ಮತ್ತೆ ಅಮೆರಿಕದಲ್ಲಿ ಎಲ್ಲೆಡೆ ಕಂಡುಬರುವಂತೆ ಇಲ್ಲಿಯೂ ಸ್ವಚ್ಛತೆಗೆ ಹೆಚ್ಚಿನ ಗಮನ ನೀಡಲಾಗಿದ್ದಿತು.

ಆಸ್ಪತ್ರೆಯ ಒಳ ಪ್ರವೇಶಿಸಿದಂತೆ ವಿಶಾಲ ಸಭಾಂಗಣ ಕಂಡುಬಂದಿತು. ಅದು ಚಿಕಿತ್ಸೆಗಾಗಿ ಬಂದ ರೋಗಿಗಳು ತಮ್ಮ ಸರದಿಗಾಗಿ ಕಾದು ಕುಳಿತಿರಬೇಕಾದ ಸ್ಥಳ. ಕೆಲವೇ ಕ್ಷಣಗಳಲ್ಲಿ ಹಿಂದಿರುಗಿ ಬರುವುದಾಗಿ ಹೇಳಿ ನನ್ನ ಮಗಳು ನನ್ನನ್ನು ಅಲ್ಲಿ ಕುಳಿತುಕೊಳ್ಳಲು ಹೇಳಿ ಒಳ ಹೋದಳು.

ನಾನು ಕುಳಿತಾಗ ಎದುರುಗಡೆಯ ಗೋಡೆಯ ಮೇಲೆ ನನಗೆ ಒಂದು ವಿಸ್ಮಯಕರ ನೋಟ ಕಂಡಿತು. ಆ ಗೋಡೆ ತುಂಬ ಅನೇಕ ದೊಡ್ಡ ಆಕೃತಿಯ ವ್ಯಕ್ತಿಗಳ ಭಾವಚಿತ್ರಗಳನ್ನು ತೂಗುಹಾಕಲಾಗಿದ್ದಿತು. ದೇಶವಿದೇಶಗಳ ಹೆಸರಾಂತ ರಾಜಕಾರಣಿಗಳು, ಕ್ರೀಡಾಪಟುಗಳು, ಸಾಹಿತಿಗಳು, ಕಲಾವಿದರು, ನೃತ್ಯಪಟುಗಳು ಇವರೆಲ್ಲರ ಭಾವಚಿತ್ರಗಳು ಅಲ್ಲಿದ್ದವು. ಸುಪ್ರಸಿದ್ಧ ಸಾಹಿತಿ ಜೇನ್ ಆಸ್ಟಿನ್, ಅಮೆರಿಕದ ರಾಷ್ಟ್ರಾಧ್ಯಕ್ಷರಾಗಿದ್ದ ಜಾನ್ ಫಿಟ್ಜೆರಾಲ್ಡ್ ಕೆನಿಡಿ, ಜಾರ್ಜ್ ಡಬ್ಲ್ಯು ಬುಷ್, ರಷ್ಯದ ಕಮ್ಯುನಿಸ್ಟ್ ನಾಯಕ ಮಿಖಾಯಿಲ್ ಗರ್ಬಾಚೆವ್, ಪೋಲೆಂಡಿನ ಕಾರ್ಮಿಕ ನಾಯಕ ಲೆಹ್ ವಲೇಸಾ, ಸಂಗೀತಗಾರ ಫಿಟ್ಜೆರಾಲ್ಡ್, ವಿಜ್ಞಾನ ಲೇಖಕ ಐಸಾಕ್ ಅಸಿಮೋವ್, ನರ್ತಕ ಡೇರಿಯನ್ ಗ್ರೆಗೊರಿ, ಖ್ಯಾತಿ ನರ್ತಕಿ ಜಿಪ್ಪೋರಾ ಕಾರ್ಜ್, ಹಾಕಿ ಆಟಗಾರ ಬಾಬಿ ಕ್ಲಾರ್ಕ್... ಹೀಗೇ ಅನೇಕಾನೇಕ ಕ್ರೀಡಾಪಟುಗಳ, ನರ್ತಕ-ನರ್ತಕಿಯರ ಭಾವಚಿತ್ರಗಳು ಅಲ್ಲಿದ್ದವು.

ನನಗೆ ಆಶ್ಚರ್ಯವಾಗಿ, ನನ್ನ ಮಗಳು ಹಿಂದಿರುಗಿದಾಗ ಅವಳನ್ನು ಕೇಳಿದೆ: ''ಇದೇನು, ನಾನಾ ದೇಶಗಳ ಇಷ್ಟೊಂದು ರಾಜಕಾರಣಿಗಳ, ಲೇಖಕರ, ಕಲಾವಿದರ, ಕ್ರೀಡಾಪಟುಗಳ ಭಾವಚಿತ್ರಗಳನ್ನೇಕೆ ಇಲ್ಲಿ ತೂಗುಹಾಕಿದ್ದಾರೆ ?''

''ಇವರೆಲ್ಲ ಮಧುಮೇಹ ಮತ್ತು ಅಂತಹುದೇ ಕಾಯಿಲೆಗಳಿಗೆ ಒಳಗಾದವರೇ... ಈ ಆಸ್ಪತ್ರೆಗೆ ಚಿಕಿತ್ಸೆಗೆ ಬರುವ ರೋಗಿಗಳಲ್ಲಿ ಆತ್ಮಸ್ಥೈರ್ಯದ ಭಾವನೆ ತುಂಬಲು ಇವನ್ನು ಇಲ್ಲಿ ಹೀಗೆ ತೂಗುಹಾಕಲಾಗಿದೆ'' ಎಂದು ಹೇಳಿ ಅಲ್ಲಿಯೇ ಮೇಜಿನ ಮೇಲಿದ್ದ ಒಂದು ಗ್ರಂಥವನ್ನು ನನ್ನ ಕೈಗಿತ್ತಳು. ಅದರಲ್ಲಿ ಈ ಎಲ್ಲ ವ್ಯಕ್ತಿಗಳ ಸ್ಥೂಲ ಜೀವನ ಚಿತ್ರಣಗಳಿದ್ದು, ಅವರೆಲ್ಲ ಹೇಗೆ ಈ ಮಧುಮೇಹ ಸಮಸ್ಯೆಯನ್ನು ನಿಭಾಯಿಸಿದರು ಎಂಬ ವಿವರಣೆ ಇದ್ದಿತು. ಒಂದೊಂದೂ ಸಣ್ಣ ಕಥೆಯಂತೆ ಓದಿಸಿಕೊಂಡು ಹೋಗುತ್ತಿದ್ದಿತು.

ಜಿಪ್ಪೋರಾ ಕಾರ್ಜ್ ಎಂಬ ಬ್ಯಾಲೆ ನರ್ತಕಿಯ ಬಗೆಗೆ ಇದ್ದ ಲೇಖನ ಸ್ವಾರಸ್ಯಕರವಾಗಿದ್ದಿತು. ಈಕೆ ಡಯಾಬಿಟಿಸ್ ಮೆಲಿಟಸ್ ಟೈಪ್-೧ಕ್ಕೆ ತುತ್ತಾಗಿದ್ದಳು.

ಜಿಪ್ಪೋರಾ ಕಾರ್ಜ್ ಹುಟ್ಟಿದ್ದು ೧೯೬೫ರ ಜೂನ್ ತಿಂಗಳಲ್ಲಿ, ದಕ್ಷಿಣ ಕ್ಯಾಲಿಫೋರ್ನಿಯದಲ್ಲಿ. ೧೫ನೆಯ ವಯಸ್ಸಿನಲ್ಲೇ ಮನೆ ಬಿಟ್ಟು ಹೊರ ಹೋದವಳು ೧೮ನೆಯ ವಯಸ್ಸಿನಲ್ಲಿ 'ನ್ಯೂಯಾರ್ಕ್ ಸಿಟಿ ಬ್ಯಾಲೆ'ಯ ಸದಸ್ಯೆಯಾದಳು. ಇಪ್ಪತ್ತನೆಯ ವಯಸ್ಸಿನಲ್ಲಿ 'ನಟ್ ಕ್ರ್ಯಾಕರ್ ಬ್ಯಾಲೆ'ಯಲ್ಲಿ 'ಷುಗರ್ ಪ್ಲಮ್ ಫೈರಿ'ಯಾಗಿ ನರ್ತಿಸಿದಳು. ಮುಂದಿನ ವರ್ಷ ಪೀಟರ್ ಮಾರ್ಟಿನ್‌ರ ಹೊಸ ಬ್ಯಾಲೆ 'ಲೆ ಪೆತೀತ್ ರೇಯ್ನ್ಸ್'ನಲ್ಲಿ ಪ್ರಮುಖ ನರ್ತಕಿಯಾಗಿ ಕಾಣಿಸಿಕೊಂಡಳು.

ತನ್ನ ಬಾಳಿನಲ್ಲಿ ತನಗೆ ಡಯಾಬಿಟಿಸ್ (ಸಿಹಿಮೂತ್ರ ರೋಗ-ಮಧುಮೇಹ ರೋಗ) ತಗುಲಿದುದನ್ನು ನೆನಪಿಸಿಕೊಳ್ಳುತ್ತ ಆಕೆ ಹೇಳುತ್ತಾರೆ: ''ಅದೊಂದು ನನಗೆ ಅತ್ಯಂತ ಉತ್ಸುಕವಾದ, ಅದೇ ಹೊತ್ತಿನಲ್ಲಿ ತುಂಬ ಕಷ್ಟಕರವಾದ, ಕಾಲವಾಗಿದ್ದಿತು. ನನ್ನ ಶರೀರದಲ್ಲಿ ವಿಚಿತ್ರ ಕ್ರಿಯೆಗಳು ಜರುಗತೊಡಗಿದ್ದವು... ಆಗಾಗ್ಗೆ ನನಗೆ ತಲೆ ಸುತ್ತುವಂತಾಗುತ್ತಿತ್ತು. ನಾನು ನರ್ತಿಸುತ್ತಿದ್ದಾಗ ನನ್ನ ಕೈ-ಕಾಲ ತುದಿಗಳು, ಅದರಲ್ಲೂ ಕಾಲಿನ ಹೆಬ್ಬೆರಳುಗಳು, ಜಡ್ಡುಗಟ್ಟಿದಂತಾದ ಭಾವನೆ ನನಗೆ ಆಗುತ್ತಿತ್ತು. ವಿನಾ ಕಾರಣ ನಾನು ಆಗಾಗ್ಗೆ ಹೆಜ್ಜೆ ತಪ್ಪುತ್ತಿದ್ದುದನ್ನು ಕಂಡು ಬ್ಯಾಲೆ - ಮಾಸ್ಟರ್ ಪೀಟರ್ ಕೋಪಗೊಳ್ಳುತ್ತಿದ್ದರು. ನನ್ನ ಬಾಳಿನಲ್ಲೇ ಅತ್ಯಂತ ಮುಖ್ಯವಾಗಿದ್ದ ಆ ಸಮಯದಲ್ಲಿ ನನ್ನ ಶರೀರ ನನಗೆ ಕೈಕೊಡುತ್ತಿದ್ದುದನ್ನು ಕಂಡು ನಾನು ತುಂಬ ಕೋಪಗೊಳ್ಳುತ್ತಿದ್ದೆ. ನನ್ನ ತೂಕ ಕಮ್ಮಿಯಾಗತೊಡಗಿತ್ತು. ಸದಾ ಕಾಲವೂ ಬಾಯಾರುತ್ತಿತ್ತು, ಹಸಿವೆಯಾಗುತ್ತಿತ್ತು. ಆಗಾಗ್ಗೆ ಮೂತ್ರ ವಿಸರ್ಜನೆಯಾಗುತ್ತಿತ್ತು. ನನ್ನ ಶರೀರದಲ್ಲಿ ಏನೋ ಏರುಪೇರಾಗಿದೆ ಎಂದು ನನಗೆ ಅನಿಸಲೇ ಇಲ್ಲ. ತುಂಬ ಸುಸ್ತಾಗಿದೆ, ಶರೀರಕ್ಕೆ ಶ್ರಮ ಹೆಚ್ಚಾಯಿತೇನೋ, ಎಂದೇ ನಾನಂದುಕೊಂಡೆ...

''...೨೧ನೆಯ ವಯಸ್ಸಿನಲ್ಲಿ ನನಗೆ ಡಯಾಬಿಟೀಸ್ ಟೈಪ್-೧ ಆಗಿದೆ ಎಂದು ವೈದ್ಯರು ಹೇಳಿದಾಗ ನನ್ನ ಜಂಘಾಬಲ ಉಡುಗಿಹೋಯಿತು. ನನ್ನ ಬಾಳಿನಲ್ಲಿ ನಾನು ನರ್ತನ ಕಲೆಗೆ ಅಂಟಿಕೊಂಡೇ ಇರಲು ಹಂಗು ತೊರೆದು ಯತ್ನಿಸುತ್ತಿದ್ದೆ. ಆದರೆ ನನ್ನ ಶರೀರ ಅದಕ್ಕೆ ವಿರೋಧವಿದ್ದಿತು. ನನ್ನ ಮನಸ್ಸು ನಾನಾ ರೀತಿಯ ಚಿಂತನೆಗೆ ಸಿಲುಕಿತ್ತು. ಒಂದು- ಡಯಾಬಿಟೀಸ್‌ಗೆ ಸಂಬಂಧಿಸಿದ್ದು: ಆಗಾಗ್ಗೆ ಇನ್ಸುಲಿನ್ ತೆಗೆದುಕೊಳ್ಳುವುದು, ರಕ್ತದಲ್ಲಿ ಸಕ್ಕರೆ ಪ್ರಮಾಣ ನಿರ್ವಹಣೆ, ಪಥ್ಯಾಹಾರ, ಅಂಗಸಾಧನೆ ಮತ್ತು ರೋಗವಿದೆಯೆಂಬ ಮಾನಸಿಕ ವೇದನೆಯಿಂದ ಮುಕ್ತಗೊಳ್ಳುವುದು. ಇನ್ನೊಂದು – ನನ್ನ ವೃತ್ತಿಯಲ್ಲಿ ಯಶಸ್ಸು ಸಾಧಿಸುವುದು. ತನಿ-ನರ್ತಕಿಯಾಗಿ ಖ್ಯಾತಿ ಗಳಿಸುವುದು; ೧೬ ವರ್ಷಗಳ ಕಾಲ 'ನ್ಯೂಯಾರ್ಕ್ ಸಿಟಿ

ಬ್ಯಾಲೆ'ಯಲ್ಲಿ ಪ್ರದರ್ಶನ ನೀಡುವುದು, ಅನಂತರ ನರ್ತನ - ಶಿಕ್ಷಕಿ ಬೋಧಕಿ ಯಾಗುವುದು, 'ಜಾರ್ಜ್ ಬಲಂಚೈನ್ ಟ್ರಸ್ಟ್'ನ ಬ್ಯಾಲೆ ಮೇಲ್ವಿಚಾರಕಿಯಾಗುವುದು...''

ಕೊಪೆನ್‌ಹೇಗನ್‌ನಲ್ಲಿ ಪ್ರವಾಸ ಕೈಗೊಂಡಿದ್ದಾಗ, ಸುಪ್ರಸಿದ್ಧ ಮನರಂಜನಾ ಉದ್ಯಾನ ತಿವೋಲಿಯಲ್ಲಿ ನರ್ತನ ನೀಡುವಾಗ ತನಗಾದ ಒಂದು ಘಾತುಕ ಅನುಭವವನ್ನು ಆಕೆ ಮನಕರಗುವ ರೀತಿಯಲ್ಲಿ ವರ್ಣಿಸುತ್ತಾರೆ : ''ಅಂದು ಸಂಜೆ ನಾನು ಎರಡು ಬ್ಯಾಲೆಗಳಲ್ಲಿ ಭಾಗವಹಿಸುತ್ತಿದ್ದೆ – ಒಂದು, ಬಾಲಂಚೈನ್‌ರ 'ಡೈವರ್ಟಿಮೆಂಟೋ ನಂ. ೧೫'ರಲ್ಲಿ ನಾಯಕಿ ಪಾತ್ರ; ಇನ್ನೊಂದು, ರಾಬಿನ್‌ರ 'ಗ್ಲಾಸ್ ಪೀಸಸ್'ನಲ್ಲಿ ಪ್ರಧಾನ ಪಾತ್ರ. ಮೊದಲ 'ಡೈವರ್ಟಿಮೆಂಟೋ'ನಲ್ಲಿ ನನ್ನ ನರ್ತನ ನಾನಂದುಕೊಂಡಷ್ಟು ಚೆನ್ನಾಗಿ ಆಗಲಿಲ್ಲ. ನನ್ನ ತಲೆ ತಿರುಗುವಂತಾಗುತ್ತಿತ್ತು, ಕಾಲುಗಳೂ ಅದುರುತ್ತಿದ್ದವು. ಅದು ನನ್ನ ನರದೌರ್ಬಲ್ಯ ವಿರಬೇಕು ಎಂದುಕೊಂಡೆ. ಆದರೆ ರಕ್ತದಲ್ಲಿ ಸಕ್ಕರೆ ಪ್ರಮಾಣ ತನಿಖೆ ಮಾಡಿದಾಗ ಅದು ಅತಿ ಹೆಚ್ಚಾಗಿದ್ದುದು ಕಂಡುಬಂದಿತು. ಅದರ ಫಲವಾಗಿ ನನ್ನ ನರ್ತನಕ್ಕೆ ಧಕ್ಕೆಯುಂಟಾಯಿತು. ನನಗೆ ತುಂಬ ಖೇದವಾಯಿತು. ಈ ಸಮಸ್ಯೆ ತಂದುದಕ್ಕಾಗಿ ನನ್ನ ದೇಹದ ಮೇಲೆ ನನಗೆ ವಿಪರೀತ ಕೋಪ ಬಂದಿತು. ಇನ್ಸುಲಿನ್ ಮತ್ತು ಚುಚ್ಚು ಸೂಜಿಯೊಂದಿಗೆ ಬಚ್ಚಲು ಮನೆಗೆ ಹೋದೆ, ''ಗ್ಲಾಸ್ ಪೀಸಸ್'' ಶುರುವಾಗಲು ಹತ್ತು ನಿಮಿಷ ಇದೆ ಎಂದು ರಂಗ-ನಿರ್ದೇಶಕ ಕೂಗಿ ಹೇಳಿದರು. ನಾನು ಆ ಪ್ರದರ್ಶನಕ್ಕಾಗಿ ಉಡುಪು ತೊಡಲು ಎರಡು ಮಹಡಿ ಕೆಳಗಿಳಿದುಹೋದೆ. ಐದು ನಿಮಿಷವಿದ್ದಾಗ ನನ್ನ ಶರೀರ ಭೀತಿಯಿಂದ ಕಂಪಿಸತೊಡಗಿತು. ಯಾವುದೇ ಘಳಿಗೆಯಲ್ಲಿ ನನ್ನ ಮನೋನಿಯಂತ್ರಣ ತಪ್ಪುವುದೆಂದು ಭಾಸವಾಯಿತು. ಇನ್ಸುಲಿನ್‌ನ ಪ್ರಭಾವ ದೇಹದಲ್ಲಿ ಕಾಣಿಸಿಕೊಳ್ಳುವುದಕ್ಕೆ ಮುನ್ನವೇ ನಾನು ಬೇಗ ಬೇಗ ನರ್ತಿಸಿಬಿಡಬೇಕು ಎಂಬುದು ಗೊತ್ತಿತ್ತು.

''ನಾನು ಓಡೋಡುತ್ತ ಮೆಟ್ಟಲು ಹತ್ತಿ ಮೇಲೆ ಬಂದು ನನ್ನ ಕೈಚೀಲದಲ್ಲಿದ್ದ ಮಾನಿಟರ್ ಅನ್ನು ಹೊರತೆಗೆದೆ, ನನ್ನ ಬೆರಳಿನಿಂದ ಒಂದು ಹನಿ ರಕ್ತ ತೆಗೆದು ಮಾನಿಟರ್‌ಗೆ ಹಚ್ಚಿ ರಕ್ತದಲ್ಲಿ ಸಕ್ಕರೆಯ ಅಂಶ ಎಷ್ಟಿದೆ ಎಂಬುದನ್ನು ತಿಳಿಯಬೇಕಿತ್ತು. ಆದರೆ ನನ್ನ ಕೈ ಎಷ್ಟು ಜೋರಾಗಿ ಅದುರುತ್ತಿದ್ದಿತೆಂದರೆ ರಕ್ತದ ಹನಿ ತೆಗೆಯುವುದೂ ಕಷ್ಟಕರವಾಗಿತ್ತು. ನಾನು ಹೊರಹೋಗಿ ಮನರಂಜನಾ ಉದ್ಯಾನದಲ್ಲಿ ಜನ ರೋಲರ್ ಕೋಸ್ಟರ್‌ನಲ್ಲಿ ಕುಳಿತು ಅತ್ಯಾನಂದದಿಂದ ಕೇಕೆ ಹಾಕುತ್ತಿದ್ದುದನ್ನು ನೋಡುತ್ತ ನಾನೂ ನನ್ನದೇ ರೂಲರ್ ಕೋಸ್ಟರ್‌ನಲ್ಲಿ ಇದ್ದೇನೆಂಬ ಭಾವನೆ ಬೆಳೆಸಿಕೊಂಡೆ. ಆ ಭಾವನೆಯೊಂದಿಗೆ ಹೇಗೋ ಬೆರಳಿನಿಂದ ರಕ್ತ ತೆಗೆದು ಮಾನಿಟರ್‌ಗೆ ಹಚ್ಚಿದೆ. ಅದು ತೋರಿಸಿದ ಸೂಚ್ಯಂಕ ನನ್ನನ್ನು ಆಘಾತಗೊಳಿಸಿತು ! ರಕ್ತದಲ್ಲಿ ಸಕ್ಕರೆ ಅಂಶ ಎಷ್ಟು ಅಲ್ಪವಾಗಿದ್ದಿತೆಂದರೆ ನನ್ನಲ್ಲಿ ಪ್ರಜ್ಞೆ ಇನ್ನೂ ಇದ್ದುಕೊಂಡಿದೆಯೇ ಎಂದು ನಾನೇ ತಿಳಿಯದಾಗಿದ್ದೆ. ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿಸಲು ತಕ್ಷಣವೇ ಸಕ್ಕರೆ ಗುಳಿಗೆಗಳನ್ನು ತಿಂದೆ. ಆದರೆ ಎಲ್ಲವೂ ಸಹಜ ಸ್ಥಿತಿಗೆ ಬರಲು ಇನ್ನೂ ಎಷ್ಟು ಕಾಲ ಬೇಕಾಗುತ್ತದೋ ಎಂದು ತಿಳಿಯದಾಗಿದ್ದೆ. ಆ ಹೊತ್ತಿಗೆ ಸರಿಯಾಗಿ ರಂಗವೇದಿಕೆಯಿಂದ ಕರೆಗಂಟೆ ಕೇಳಿಬಂದಿತು.

''ಮತ್ತೆ ಓಡೋಡುತ್ತ ಮೆಟ್ಟಲು ಇಳಿದು ರಂಗ ವೇದಿಕೆಯ ಬಳಿ ಹೋದೆ. ನನ್ನ ತಂಗಿ ರೋಮಿ (ಇವಳೂ ಆ ಕಂಪನಿಯಲ್ಲಿದ್ದಳು) ರಂಗಸ್ಥಳದ ಪಾರ್ಶ್ವದಲ್ಲಿ ಪ್ರದರ್ಶನಕ್ಕೆ ಅಣಿಯಾಗಿ ನಿಂತಿದ್ದಳು. ನನ್ನನ್ನೊಮ್ಮೆ ನೋಡುತ್ತಲೇ ತುಂಬ ಗಾಬರಿಗೊಂಡು, ''ಏನಕ್ಕ, ಏನಾಯಿತು, ಯಾಕೆ ಹೀಗೆ ಇದ್ದೀಯ ?'' ಎಂದು ಕೇಳಿದಳು. ನನಗೆ ಮಾತೇ ಹೊರಡದಾಗಿದ್ದಿತು. ಆದರೂ ನನ್ನ ಸ್ಥಿತಿಯನ್ನು ತಿಳಿಯಹೇಳಿದೆ. ಅವಳು ತಕ್ಷಣವೇ ನನ್ನನ್ನು ಉಡುಪಿನ ಕೋಣೆಗೆ ಎಳೆದೊಯ್ದು, ''ನಿನ್ನ ನರ್ತನದ ಉಡುಪು ಕಳಚಿಹಾಕು. ನೀನು ಹೋಗಬೇಡ. ನಾನೇ ನಿನ್ನ ಪಾತ್ರವನ್ನು ನಿರ್ವಹಿಸುತ್ತೇನೆ'', ಎಂದು ಒತ್ತಾಯ ಮಾಡಿದಳು. ನನಗೆ ನೇರವಾಗಿ ಯೋಚನೆ ಮಾಡುವುದೇ ನಿಂತುಹೋಗಿದ್ದಿತು. ನನ್ನ ಉಡುಪನ್ನು ಕಳಚಿಹಾಕಿದೆ. ಅವಳು ಅದನ್ನು ಉಡುತ್ತಿದ್ದುದನ್ನೇ ದಿಟ್ಟಿಸಿ ನೋಡುತ್ತ ನಿಂತೆ. ''ಸರಿ'' ಎಂದು ಅವಳು ನಡುಗುತ್ತಾ ಕೇಳಿದಳು : ''ಈಗ ಹೇಳು, ನಾನು ಯಾವ ರೀತಿ ನರ್ತಿಸಬೇಕು ?'' ಒಂದು ಘಳಿಗೆ ನಾವಿಬ್ಬರೂ ಪರಸ್ಪರ ದಿಟ್ಟಿಸಿ ನೋಡುತ್ತ ನಿಂತೆವು. ಹೇಗೆ ನರ್ತಿಸಬೇಕು, ಎಷ್ಟು ಹೆಜ್ಜೆ ಹಾಕಬೇಕು, ಇಡೀ ಬ್ಯಾಲೆ ನರ್ತನದಲ್ಲಿ ಮುಂದಿನವರಿಗೆ ಹೇಗೆ ಕಾದಿರಬೇಕು – ಇವನ್ನೆಲ್ಲ ಕೇವಲ ಅರವತ್ತು ಸೆಕೆಂಡುಗಳಲ್ಲೇ ಅವಳಿಗೆ ಹೇಗೆ ತಿಳಿಯ ಹೇಳುವುದು ? ರೋಮಿ ಆಗಲೇ ಅಲ್ಲೇ ತಾನೇ ನರ್ತಿಸುತ್ತ, ಹೆಜ್ಜೆ ಹಾಕುತ್ತ ತಯಾರಿ ನಡೆಸಿದ್ದಳು. ಅವಳು ನನಗಾಗಿ ಏನು ಮಾಡಲೂ ಸಿದ್ಧವಿದ್ದಳು. ಆದರೆ ಅದು ಅಷ್ಟು ಸಮರ್ಪಕ ವಾಗಿರಲಿಲ್ಲ ಎಂದು ನನಗೆ ತಿಳಿಯಿತು. ರೋಮಿಯಂತೂ ಹೇಗೋ ನಿಭಾಯಿಸುವುದಾಗಿ ಹೇಳಿ ಅಭ್ಯಾಸ ಮುಂದುವರಿಸಿದ್ದಳು. ಆದರೆ ನಾನು ಮತ್ತೆ ನನ್ನ ನರ್ತನದ ಉಡುಪನ್ನು ಅವಳಿಂದ ಬಲವಂತವಾಗಿ ಕಸಿದುಕೊಂಡೆ. ನಾನೇ ತೊಟ್ಟುಕೊಂಡೆ.

''ಹೇಗಿದ್ದರೂ ಸಕ್ಕರೆ ಗುಳಿಗೆಗಳನ್ನು ತಿಂದಿದ್ದೇನೆ. ಅದು ಕೊನೆಗೆ ಎಲ್ಲವನ್ನೂ ಸರಿಪಡಿಸುವುದು, ಎಂದು ನನಗೆ ನಾನೇ ಹೇಳಿಕೊಂಡೆ. ನನ್ನ ನರ್ತನದ ಮೊದಲ ಭಂಗಿಯ ಬಗೆಗೆ ನನಗೆ ಅಷ್ಟಾಗಿ ನೆನಪಿಲ್ಲ, ಆದರೆ ಎರಡನೆಯ ಭಂಗಿ ಚೆನ್ನಾಗಿ ನೆನಪಿದೆ. ಆಗ ನನ್ನ ನಾಯಕತ್ವದಲ್ಲೇ ನರ್ತಕಿಯರ ಒಂದು ಗುಂಪು ತೆರೆಮರೆಯಿಂದ ರಂಗಸ್ಥಳದ ಮೇಲೆ ಬರಬೇಕಿದ್ದಿತು. ಪ್ರೇಕ್ಷಕರೆಲ್ಲ ನಮ್ಮತ್ತಲೇ ದೃಷ್ಟಿ ಕೇಂದ್ರೀಕರಿಸಿದ್ದರು. ನನ್ನ ಹೆಜ್ಜೆ ಸಂಖ್ಯೆ ನನ್ನ ಮನಸ್ಸಿನಲ್ಲಿ ಇರಲಿರುವುದೇ ಎಂದು ನನಗೆ ತಿಳಿದಿರಲಿಲ್ಲ, ಅದಕ್ಕೂ ಹೆಚ್ಚಾಗಿ ರಂಗದಿಂದ ಹೊರ ಹೊರಡುವುದೇ ನನಗೆ ತುಂಬ ಭಯ ಹುಟ್ಟಿಸಿತ್ತು. ತಪ್ಪಾಗುವುದನ್ನು ತಪ್ಪಿಸಲು ನಾನು ನನಗೇ ಹೇಳಿಕೊಳ್ಳುತ್ತಲಿದ್ದೆ: 'ನನ್ನ ಹೆಸರು ಜಿಪ್ಪೋರಾ, ಎಲ್ಲ ಸರಿಹೋಗುತ್ತೆ ...ನನ್ನ ಹೆಸರು ಜಿಪ್ಪೋರಾ. ಎಲ್ಲ ಸರಿಹೋಗುತ್ತೆ.'

''ಅದು ಹೇಗೋ, ಏನು ಮಾಡಬೇಕೆಂಬುದನ್ನು ನನ್ನ ಶರೀರ ನೆನಪಿನಲ್ಲಿಟ್ಟಿದ್ದಿತು. ನರ್ತನದ ಮೂರನೆಯ ಘಟ್ಟದಲ್ಲಿ ನಾನು ತುಂಬ ತೊಡಕಿನ ಹೆಜ್ಜೆಗಳನ್ನು ಹಾಕ ಬೇಕಿದ್ದಿತು. ಆ ಸಮಯಕ್ಕೆ ಸರಿಯಾಗಿ ಸಕ್ಕರೆಯು ರಕ್ತದಲ್ಲಿ ಲೀನವಾಗಿದ್ದಿತು. ನಾನು ಪ್ರಜ್ಞೆ ಕಳೆದು ಕೊಳ್ಳುವೆನೆಂಬ ಅಂಜಿಕೆ ಇನ್ನೆಷ್ಟು ಮಾತ್ರವೂ ಇರಲಿಲ್ಲ. ಆದರೂ ನನ್ನ ಶರೀರ ಮಾತ್ರ ಸಂಪೂರ್ಣವಾಗಿ ನಿಶ್ಶಕ್ತವಾದಂತೆ ಆಗಿದ್ದಿತು. ನನಗೆ ದಿಕ್ಕು ತೋಚದಂತಾಗಿದ್ದಿತು...''

ಜಿಪ್ಪೋರಾ ೧೯೯೯ರಲ್ಲಿ 'ನ್ಯೂಯಾರ್ಕ್ ಸಿಟಿ ಬ್ಯಾಲೆ'ಯಿಂದ ನಿವೃತ್ತರಾದರು. ಆಗ 'ಜಾರ್ಜ್ ಬಲಂಚೈನ್ ಟ್ರಸ್ಟ್'ನವರು ತಮ್ಮ ಬ್ಯಾಲೆ ಮೇಲ್ವಿಚಾರಕಿಯಾಗಬೇಕೆಂದು ಅವರನ್ನು ಕೇಳಿಕೊಂಡರು. ಈ ವೃತ್ತಿಯಲ್ಲಿ ಆಕೆ ಜಗತ್ತಿನಾದ್ಯಂತ ಪರ್ಯಟನೆ ಮಾಡಿದರು. ಅನೇಕಾನೇಕ ವೃತ್ತಿಪರ ನರ್ತಕಿಯರಿಗೆ ತಮ್ಮ ನರ್ತನದ ಹಿರಿಮೆಯ ತರಬೇತು ನೀಡಿ ಮಹೋನ್ನತ ಬ್ಯಾಲೆ ಕಾರ್ಯಕ್ರಮ ನೀಡುವುದರಲ್ಲಿ ನೆರವಾದರು. ೨೦೦೦ನೆಯ ವರ್ಷದಲ್ಲಿ ಅವರು 'ನ್ಯೂಯಾರ್ಕ್ ಸಿಟಿ ಬ್ಯಾಲೆ' ಸಂಸ್ಥೆಯ ಶಿಕ್ಷಣ ವಿಭಾಗದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ನರ್ತನಾಭ್ಯಾಸಿಗಳಿಗೆ ಸಂಗೀತ ಹಾಗೂ ನೃತ್ಯಕಲೆಗಳ ಇತಿಹಾಸ ಬೋಧನೆ ಮಾಡಿದರು. ಎಡಿನ್‌ಬರೊ, ಗ್ಲಾಸ್ಗೋ ಹಾಗೂ ಸ್ಕಾಟ್ಲೆಂಡಿನ ಸುತ್ತಮುತ್ತಲ ಪ್ರದೇಶಗಳ ನರ್ತನ ಶಾಲೆಗಳಲ್ಲಿ ಉಪನ್ಯಾಸಗಳನ್ನು ನೀಡಿದರು. ಈಗಲೂ ನ್ಯೂಯಾರ್ಕ್ ನಗರದಲ್ಲಿ ಆಯ್ದ ಪ್ರದರ್ಶನಗಳಲ್ಲಿ ಉಪನ್ಯಾಸಗಳನ್ನು ನೀಡುತ್ತಿದ್ದಾರೆ.

ಜನರು ಆರೋಗ್ಯವಂತರಾಗಿ ಕ್ರಿಯಾಶೀಲರಾಗಿ ಇರುವಂತೆ ಪ್ರೇರಿಸುವ ಕಾರ್ಯದಲ್ಲಿ ಜಿಪ್ಪೋರಾ ಈಗ ತೊಡಗಿಕೊಂಡಿದ್ದಾರೆ. ತಮ್ಮ ಬಾಳಿನ ಪ್ರಸಂಗ ಹಾಗೂ ಉದಾಹರಣೆಗಳನ್ನೇ ನಮೂದಿಸುತ್ತ ಜೀವನದಲ್ಲಿ ಎದುರಿಸಬೇಕಾಗಿ ಬರುವ ಅಡಚಣೆ - ಆತಂಕಗಳನ್ನು ಹೇಗೆ ನಿವಾರಿಸಿಕೊಳ್ಳಬೇಕೆಂದು ತಿಳಿಯಹೇಳುತ್ತಿದ್ದಾರೆ. ಅದರಲ್ಲೂ ಡಯಾಬಿಟೀಸ್‌ನಂಥ ಕಾಯಿಲೆಗಳಿಗೆ ತುತ್ತಾದವರು ಅದರ ವಿಪತ್ಕಾರಕ ಅನುಭವಗಳಿಂದ ಮುಕ್ತರಾಗುವುದಕ್ಕೆ ನೆರವಾಗುವಂಥ ನರ್ತನ ಭಂಗಿಗಳನ್ನು ತಿಳಿಸಿಕೊಡುತ್ತಿದ್ದಾರೆ. 'ಅಮೆರಿಕನ್ ಡಯಾಬಿಟೀಸ್ ಅಸೋಸಿಯೇಷನ್'ನ ಸಲಹಾ ಮಂಡಲಿಯ ಸದಸ್ಯರಾಗಿ ದೇಶದಾದ್ಯಂತ ಸುತ್ತಾಡುತ್ತ ಈ ರೋಗ ನಿವಾರಣೆಯ ಕುರಿತು ಉಪನ್ಯಾಸಗಳನ್ನು ನೀಡುತ್ತಿದ್ದಾರೆ.

ಜಿಪ್ಪೋರಾ ಅನೇಕ ಗ್ರಂಥಗಳನ್ನೂ ಲೇಖನಗಳನ್ನೂ ಬರೆದಿದ್ದಾರೆ. ೧೯೮೮ರಲ್ಲಿ 'ಡ್ಯಾನ್ಸಿಂಗ್ ವಿತ್ ಡಯಾಬಿಟೀಸ್' ಎಂಬ 'ಡ್ಯಾನ್ಸ್' ಪತ್ರಿಕೆಯಲ್ಲಿನ ಲೇಖನ, ಡಾ|| ಆನ್ ಪೀಟರ್‌ಸ್‌ರವರ 'ಡಯಾಬಿಟೀಸ್ ಮೇಲೆ ದಿಗ್ವಿಜಯ' ಎಂಬ ಗ್ರಂಥಕ್ಕೆ ಆರಂಭಿಕ ಅಧ್ಯಾಯ, ಇತ್ಯಾದಿ. ಜೀವನಶೈಲಿ, ಆರೋಗ್ಯಕರ ಆಹಾರ ಸೇವನೆ, ಅದರಲ್ಲೂ ಜೀವನದ ಆರಂಭ ಘಟ್ಟದಲ್ಲಿ, ಇವುಗಳಿಗೆ ಮೀಸಲಾದ ವೆಬ್‌ಸೈಟ್ www.tastybaby.comನಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ಲೇಖನಗಳನ್ನೂ ಜಿಪ್ಪೋರಾ ಬರೆಯುತ್ತಿದ್ದಾರೆ. 'ವಿಶ್ವ ಡಯಾಬಿಟೀಸ್ ದಿನ' ಹಾಗೂ ವಿಶ್ವಸಂಸ್ಥೆಯ ನಿರ್ಣಯದ ಗೌರವಾರ್ಥ ೨೦೦೭ರ ನವೆಂಬರ್ ೧೪ರಂದು ನ್ಯೂಯಾರ್ಕ್‌ನಲ್ಲಿ ಜಿಪ್ಪೋರಾರವರು ಬರೆದ 'ಬ್ಯಾಲೆರೀನಾಳ ಕನಸು' ಎಂಬ ಮಕ್ಕಳ ಕಥೆಯನ್ನು ಬಿಡುಗಡೆ ಮಾಡಲಾಯಿತು.

''ನಿಮ್ಮ ಬಾಳಿನಲ್ಲಿ ನೀವು ಒಂದು ತೀವ್ರಾಸಕ್ತಿಯನ್ನು ಬೆಳೆಸಿಕೊಳ್ಳಬೇಕು, ಅದು ನಿಮ್ಮ ಆರೋಗ್ಯದ ಕಡೆಗೆ ಎಚ್ಚರ ವಹಿಸುವಂತೆ ಪ್ರೇರಿಸಬೇಕು, ಎಂಬುದೇ ನಾನು ನೀಡಬಹುದಾದ ಒಂದು ಪ್ರಬಲ ಸಂದೇಶ, ಇದೇ ನನ್ನ ಚಿಂತನೆ. ನೀವು ಏನನ್ನು ಮಾಡಲು ಪ್ರೀತಿಸುತ್ತೀರೋ ಅದನ್ನು ಮಾಡುವುದಕ್ಕೆ ಡಯಾಬಿಟೀಸ್ ಒಂದು ದೊಡ್ಡ ಆತಂಕ ಎಂದು ಹೇಳಲು ಎಂದೂ ಯಾರಿಗೂ ಬಿಡಬೇಡಿ... ಆರೋಗ್ಯದಿಂದಿರಿ, ನಿಮ್ಮ ಹೃದಯದಲ್ಲೂ ಪಾದಗಳಲ್ಲೂ ಚಲಿಸುತ್ತಲೇ ಇರಿ'' – ಇದು ಜಿಪ್ಪೋರಾರವರ ಹಿತನುಡಿ.

**ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಸಾಂಸ್ಕೃತಿಕ ಸಹಿಷ್ಣುತೆಯ ಕಲಾವಿಮರ್ಶಕ ಈಶ್ವರಯ್ಯ

**ಡಾ॥ ಮಹಾಬಲೇಶ್ವರ ರಾವ್**

ಕರ್ನಾಟಕದ ಪ್ರಮುಖ ಕಲಾವಿಮರ್ಶಕ ಹಾಗೂ ಪತ್ರಿಕಾ ಸಂಪಾದಕ ಶ್ರೀ ಎ. ಈಶ್ವರಯ್ಯ ಅವರಿಗೆ ಎಪ್ಪತ್ತು ವರ್ಷಗಳು ತುಂಬಿ ಎಪ್ಪತ್ತೊಂದನೆಯ ವರ್ಷಕ್ಕೆ ಕಾಲಿಟ್ಟ ಸಂದರ್ಭದಲ್ಲಿ ಮಂಗಳೂರಿನಲ್ಲಿ ಶ್ರೀ ಕದ್ರಿ ಗೋಪಾಲನಾಥ ಅವರ ನೇತೃತ್ವದಲ್ಲಿ ಮತ್ತು ಉಡುಪಿಯಲ್ಲಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಸಾರಥ್ಯದಲ್ಲಿ ಅಭಿನಂದನ ಸಮಾರಂಭಗಳು ಏರ್ಪಟ್ಟವು. ಈ ಸಮಾರಂಭಗಳು ಹಾರ ತುರಾಯಿ, ಹಮ್ಮಿಣಿ ಅರ್ಪಿಸುವ, ಹಾಡಿ ಹೊಗಳುವ ಕಾರ್ಯಕ್ರಮಗಳಾಗದೆ ನಿಜಕ್ಕೂ ಶ್ರೀ ಈಶ್ವರಯ್ಯನವರ ಸಾಧನೆ, ಸಿದ್ಧಿಗಳನ್ನು ಬೆಲೆ ಕಟ್ಟುವ ವಿಮರ್ಶಾತ್ಮಕ ಕಾರ್ಯಕ್ರಮಗಳಾಗಿ ಮೂಡಿಬಂದದ್ದು ಚರಿತ್ರಾರ್ಹ ಸಂಗತಿ.

ಕುಂಬಳಸೀಮೆಯ ಅನಂತಪುರದ ಈಶ್ವರಯ್ಯನವರು ಉಡುಪಿಯಲ್ಲಿ ನೆಲೆನಿಂತು ನಾಲ್ಕು ದಶಕಗಳು ಸಂದಿವೆ. ಅವರೀಗ ಉಡುಪಿಯವರೇ ಆಗಿಬಿಟ್ಟಿದ್ದಾರೆ. ಇಷ್ಟೇ ಆಗಿದ್ದರೆ ಯಾರೂ ಅವರನ್ನು ಗಂಭೀರವಾಗಿ ಪರಿಗಣಿಸಬೇಕಾಗಿರಲಿಲ್ಲ. ತಮ್ಮ ಕಲಾವಿಮರ್ಶೆಯ ಮೂಲಕ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಅವರು ಅಚ್ಚಳಿಯದ ಸ್ಥಾನ ಗಳಿಸಿದ್ದಾರೆ.

ಈಶ್ವರಯ್ಯನವರು ಎಪ್ಪತ್ತರ ದಶಕದಲ್ಲಿ ಉದಯವಾಣಿ ಪತ್ರಿಕಾ ಸಂಪಾದಕರಾದದ್ದು ತೀರ ಆಕಸ್ಮಿಕವಾಗಿ. ಭೂಮಾಲಿಕ ವರ್ಗದಿಂದ ಬಂದ ಈಶ್ವರಯ್ಯನವರು ೧೯೭೪ರಲ್ಲಿ ಜಾರಿಗೆ ಬಂದ ಭೂಸುಧಾರಣೆ ಕಾಯ್ದೆಯಿಂದಾಗಿ ತಮ್ಮ ಪಿತ್ರಾರ್ಜಿತ ಜಮೀನನ್ನು ಕಳೆದುಕೊಂಡರು. ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಬಿ.ಎ. (ಸಸ್ಯಶಾಸ್ತ್ರ, ಗಣಿತ, ತರ್ಕಶಾಸ್ತ್ರ)ಗೆ ಸೇರಿಕೊಂಡು ವಿಷಯಗಳ ತಲೆಬುಡ ತಿಳಿಯದೆ ಒದ್ದಾಡುತ್ತ ಗ್ರಂಥಾಲಯದಲ್ಲಿ ಶೇಕ್ಸ್‌ಪಿಯರ್, ಡಿಕನ್ಸ್, ಸ್ಕಾಟ್ ಮುಂತಾದ ಸಾಹಿತಿಗಳ ಕೃತಿಗಳನ್ನು ಓದುತ್ತ ಚಡಪಡಿಸುತ್ತಿದ್ದ ಕಾಲದಲ್ಲಿ ಉಡುಪಿಯ ಎಂ ಜಿ ಎಂ ಕಾಲೇಜಿನಲ್ಲಿ ಬಿ.ಎ. (ಆಂಗ್ಲ ಸಾಹಿತ್ಯ) ತರಗತಿಗಳು ಆರಂಭವಾದುದನ್ನು ತಿಳಿದು ಸೇರಿಕೊಂಡರು. ಇಲ್ಲಿ ಈಶ್ವರಯ್ಯನವರ ಸಾಹಿತ್ಯ ಸಂವೇದನೆ, ಕಲಾ ಸಂವೇದನೆಗಳು ರೂಪುಗೊಂಡವು. ಪ್ರೊ॥ ಸುಂದರ ರಾಯರು, ಪ್ರೊ॥ ಕು.ಶಿ. ಹರಿದಾಸಭಟ್ಟರು ಹಾಗೂ ಪ್ರೊ॥ ಕೃಷ್ಣಪ್ಪ ಮುಂತಾದ ಪ್ರಾಧ್ಯಾಪಕರು ಈಶ್ವರಯ್ಯನವರ ಬರವಣಿಗೆಗೆ ಇಂಬು ನೀಡಿದರು.

ಬಿ.ಎ. ಪದವಿ ಪಡೆದ ಮೇಲೆ ತೀರ ಆಕಸ್ಮಿಕವಾಗಿ ಲೋಕೋಪಯೋಗಿ ಇಲಾಖೆಯಲ್ಲಿ ಸುಮಾರು ನಾಲ್ಕು ವರ್ಷಗಳ ಕಾಲ ಮುಖ್ಯ ಗುಮಾಸ್ತರಾಗಿ ಕೆಲಸ ಮಾಡಿದರು. ಇವರ ಸಾಹಿತ್ಯ ಸಂವೇದನೆಗೂ ಇಲಾಖೆಯ ಕಾಂಚಾಣ ಸಂಹಿತೆಗೂ ಒಗೆತನ ಕುದುರದೆ ಕೆಲಸ ಬಿಟ್ಟು ತಂದೆಯ ನಿಧನಾನಂತರ ಮನೆಗೆ ಮರಳಿ ಕುಟುಂಬದ ಜವಾಬ್ದಾರಿ ಹಾಗೂ ಕೃಷಿಯ ಮೇಲ್ವಿಚಾರಿಕೆ ನೋಡಿಕೊಂಡರು. ಕೃಷಿ ರಂಗದ ಅನುಭವವಿಲ್ಲದ ಈಶ್ವರಯ್ಯ ನೀರಿನಿಂದ ಹೊರತೆಗೆದ

ಈಶ್ವರಯ್ಯನವರ ಬಲು ದೊಡ್ಡ ಗುಣ 'ಸಾಂಸ್ಕೃತಿಕ ಸಹಿಷ್ಣುತೆ'. ನವ್ಯಸಾಹಿತ್ಯದ ಹಿನ್ನೆಲೆಯಿಂದ ಬಂದ ಅವರು ಪತ್ರಿಕಾ ಸಂಪಾದಕರಾದ ಕಾರಣ ಹಾಗೂ ಮೂಲ ಪ್ರವೃತ್ತಿಯ ದೆಸೆಯಿಂದಾಗಿ ಹಲವಾರು ಬಗೆಯ ಆಸಕ್ತಿಗಳನ್ನು ಬೆಳೆಸಿಕೊಂಡು ಯಾವುದೇ ಒಂದು ಪಂಥದ ಬಗೆಗೆ ವಿಶೇಷ ಒಲುಮೆ ತೋರದೆ ಸಕಲವನ್ನೂ 'ಒಳಗೊಳ್ಳುವ' ಪ್ರಯತ್ನ ಮಾಡಿದವರು. ತಮ್ಮ ವೈಯಕ್ತಿಕ ಅಭಿಪ್ರಾಯಗಳಿಗೆ ವ್ಯತಿರಿಕ್ತವಾದ ವಿಚಾರಗಳಿಗೂ ಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿದವರು, 'ಆಧುನಿಕ ಪ್ರಯೋಗ ಪ್ರಿಯತೆ' ಹಾಗೂ 'ಸಾಂಪ್ರದಾಯಿಕ ಸಭ್ಯತೆ' ಎರಡನ್ನೂ ಮೈಗೂಡಿಸಿಕೊಂಡವರು. ಅವರಿಗೆ ಶಾಸ್ತ್ರೀಯ ಸಂಗೀತ, ಲಘು ಸಂಗೀತ, ಯಕ್ಷ ಸಂಗೀತ, ಸಿನಿಮಾ ಸಂಗೀತ-ಸಾಂಪ್ರದಾಯಿಕ ಚಿತ್ರಕಲೆ, ನವ್ಯ, ಚಿಕಣಿ – ಇತ್ಯಾದಿ ಪರಿಭೇದಗಳಿಲ್ಲ.

ಮೀನಿನಂತಾದರು. ೧೯೭೨ರಲ್ಲಿ ಒಮ್ಮೆ ಉಡುಪಿಗೆ ಬಂದಾಗ ಹರಿದಾಸಭಟ್ಟರು ಉದಯವಾಣಿ ಪತ್ರಿಕೆಯ ಸಂಪಾದಕ ಬಳಗ ಸೇರಲು ಸಲಹೆ ನೀಡಿದರು. ಗುರುಗಳ ಸಲಹೆ ಮೇರೆಗೆ ಮಣಿಪಾಲದ ಉದಯವಾಣಿ ಬಳಗ ಸೇರಿಕೊಂಡ ಈಶ್ವರಯ್ಯನವರ ಜೀವನಗತಿಯೇ ಬದಲಾಯಿತು. ಸುಮಾರು ಮೂರೂವರೆ ದಶಕಗಳ ಕಾಲ ಅದೇ ಪತ್ರಿಕಾ ಬಳಗದಲ್ಲಿ ಮ್ಯಾಗಸೀನ್‌ನ ಸಂಪಾದಕರಾಗಿ ದುಡಿದರು. ೧೯೭೩ರಲ್ಲಿ 'ತುಷಾರ' ಪತ್ರಿಕೆ ಉದಯವಾದಾಗ ಈಶ್ವರಯ್ಯ ಅದರ ಸಂಪಾದಕರಾದರು. ಸಂಪಾದಕತ್ವದಲ್ಲಿ ತಮಗೆ ಗುರುಗಳಾದ ಪಾ. ವೆಂ. ಆಚಾರ್ಯರ ಹಾದಿಯಲ್ಲಿ ಮುನ್ನಡೆದು 'ತುಷಾರ' ಪತ್ರಿಕೆಯನ್ನು ಕನ್ನಡದ ಒಂದು ಪ್ರೌಢ ಪತ್ರಿಕೆಯನ್ನಾಗಿ ಬೆಳೆಸಿದರು.

ಈಶ್ವರಯ್ಯನವರ ಸಾಧನೆಗಳನ್ನು ಗುರುತಿಸುವಾಗ 'ತುಷಾರ' ಪತ್ರಿಕೆಗೆ ಅವರು ನೀಡಿದ 'ಅಸ್ಮಿತೆ' ದಾಖಲೆಗೆ ಅರ್ಹವಾಗಿದೆ. ಪಾ.ವೆಂ. ಆಚಾರ್ಯರ 'ಕಸ್ತೂರಿ' ಮಾಸಪತ್ರಿಕೆಯ ಆದರ್ಶವನ್ನು ಕಣ್ಣ ಮುಂದಿಟ್ಟುಕೊಂಡು ಅದಕ್ಕಿಂತ ಭಿನ್ನವಾದ ರೀತಿಯಲ್ಲಿ 'ತುಷಾರ'ವನ್ನು ಅವರು ರೂಪಿಸಿದರು. ಸಾಹಿತ್ಯ, ವಿವಾದಗಳು, ಪ್ರಚಲಿತ ವಿಷಯಗಳು, ಸಂಗೀತ, ನಾಟ್ಯ, ಛಾಯಾಚಿತ್ರಗ್ರಹಣ, ಚಿತ್ರಲೇಖನ, ವಿಚಾರಪತ್ರ, ಕವಿತೆಗಳು – ಹೀಗೆ ವಿಷಯ ವೈವಿಧ್ಯ, ಗಂಭೀರ ಚಿಂತನೆ, ಸಮಕಾಲೀನ ಸಾಹಿತ್ಯ ಹಾಗೂ ಕಲೆಗಳ ವಿಚಾರಧಾರೆಗಳು ಇತ್ಯಾದಿಗಳೆಲ್ಲವನ್ನು ಒಳಗೊಳ್ಳುವ ಸಾಂಸ್ಕೃತಿಕ ಬದುಕಿಗೆ ಕನ್ನಡಿ ಹಿಡಿಯುವ, ಅದೇ ವೇಳೆಗೆ ಓದುಗ ವರ್ಗವನ್ನು ನಿರ್ಮಾಣ ಮಾಡುವ ರೀತಿಯಲ್ಲಿ ಆ ಪತ್ರಿಕೆಯನ್ನು ಅವರು ಬೆಳೆಸಿದರು. ಡಿ. ವಿ. ರಾವ್, ರವೀಶ ಕಾಸರವಳ್ಳಿ, ತೇಜಸ್ವಿ, ಜಯಂತ ಕಾಯ್ಕಿಣಿ, ಹನುಮಂತರಾವ್, ಕೃಪಾಕರ ಸೇನಾನಿ ಮೊದಲಾದ ನೂರಾರು ಲೇಖಕರು 'ತುಷಾರ' ಪತ್ರಿಕೆಗಾಗಿ ಬರೆದರು. ಹಿರಿಯ-ಕಿರಿಯ, ಪ್ರಸಿದ್ಧ-ಅಪ್ರಸಿದ್ಧ, ಆ ಪಂಥ – ಈ ಪಂಥ ಎಂಬ ಪರಿಭೇದವಿಲ್ಲದೆ ಒಳ್ಳೆಯ ಸಾಹಿತ್ಯ ಸೃಷ್ಟಿಯನ್ನು ಪೋಷಿಸಿದರು. ಹೈಸ್ಕೂಲು ಕಾಲೇಜುಗಳ ವಿದ್ಯಾರ್ಥಿಗಳ ಕೃತಿಗಳನ್ನು ಪ್ರಕಟಿಸಿ ಅವರಲ್ಲಿ ಭರವಸೆ ತುಂಬಿಸಿದರು. ಕೃತಿ ಪ್ರಕಟನೆ ಮಾಡಿದ್ದು ಮಾತ್ರವಲ್ಲದೆ ಬರೆಹ ಹೇಗಿರಬೇಕು ಎಂದು ಸಲಹೆ, ಸೂಚನೆ ನೀಡಿ ತಿದ್ದಿ ತೀಡಿದರು. ಶ್ರೀ ಈಶ್ವರಯ್ಯನವರು ಪತ್ರಿಕೆಯ ಮೂಲಕ ಪ್ರೋತ್ಸಾಹ ನೀಡಿದ ಆಗಿನ ಅನೇಕ ಕಿರಿಯ ಲೇಖಕರು, ಕವಿಗಳು ಇಂದು ಕನ್ನಡ ವಾಙ್ಮಯ ಪ್ರಪಂಚದಲ್ಲಿ ಮನೆಮಾತಾಗಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು. 'ಹಿತಮಿತ ಗಂಭೀರ' ಆಗಿನ ತುಷಾರ ಪತ್ರಿಕೆಯ ವಿಶಿಷ್ಟತೆ. 'ತುಷಾರ'ದ ಈಶ್ವರಯ್ಯನವರನ್ನು ಕೆಲವರು 'ತುಷಾರಯ್ಯ' ಎಂದು ಕರೆಯುವ ವಾಡಿಕೆ ಹುಟ್ಟಿಕೊಂಡದ್ದಕ್ಕೆ ಅವರು ಪತ್ರಿಕೆಯ ಜೊತೆಗೆ ತಾದಾತ್ಮ್ಯವನ್ನು ಸಾಧಿಸಿದ್ದೇ ಕಾರಣ. 'ತುಷಾರ'ದಂಥ ಮತ್ತೊಂದು ಪತ್ರಿಕೆ ಕನ್ನಡದಲ್ಲಿ ಈವರೆಗೆ ಮೂಡಿಬಂದಿಲ್ಲ. 'ಮಯೂರ'ದ ದಾರಿ ಭಿನ್ನವಾದದ್ದು. ಜಯಂತ ಕಾಯ್ಕಿಣಿ ಸಂಪಾದಕತ್ವದ 'ಭಾವನಾ' ಭರವಸೆ ಮೂಡಿಸಿದರೂ, ಕಾರಣಾಂತರಗಳಿಂದ ಸ್ಥಗಿತಗೊಂಡು ನಿರಾಸೆ ಹುಟ್ಟಿಸಿತು.

ಪತ್ರಿಕೆ ಅಂದರೆ ಬಂಡವಾಳ ಹೂಡಿಕೆ, ಪ್ರಸಾರ, ಲಾಭ ಎಂಬ ಸಮೀಕರಣ ಪ್ರಬಲವಾದಾಗ ಈಶ್ವರಯ್ಯನವರು ಉದಯವಾಣಿಯ ಮ್ಯಾಗಸೀನ್ ವಿಭಾಗಕ್ಕೆ ಮುಖ್ಯಸ್ಥರಾದರು. ಕಲಾವಿಮರ್ಶೆಗಾಗಿಯೇ 'ಕಲಾವಿಹಾರ' ಹಾಗೂ 'ಲಲಿತರಂಗ' ಎಂಬ ಎರಡು ಪುಟಗಳ ವಿಮರ್ಶಾ ಲೇಖನ ಮತ್ತೆ ಒಂದು ಪುಟದ 'ಆಡುಂಬೊಲ' ಸಿದ್ಧವಾದವು. 'ತುಷಾರ'ದಿಂದ ಈಶ್ವರಯ್ಯನವರು ಮ್ಯಾಗಸೀನ್ ವಿಭಾಗಕ್ಕೆ ಹೊರಳಿಕೊಂಡಾಗ ಅವರ ಅಭಿಮಾನಿಗಳಿಗೆ ಬೇಸರವಾಯಿತು. ಆದರೆ ಈಶ್ವರಯ್ಯನವರು ಒಳಗೊಳಗೇ ಒಂದಿಷ್ಟು ನೊಂದುಕೊಂಡಿದ್ದರೂ ಆ ಬಗ್ಗೆ ಎಲ್ಲಿಯೂ ತಮ್ಮ ಅಸಮಾಧಾನ, ಹತಾಶೆ, ನೋವು ಹೇಳಿಕೊಂಡವರಲ್ಲ ಎಂಬುದು ಅತ್ಯಂತ ಗಮನಾರ್ಹ ಸಂಗತಿ. ಒಂದು ಬಗೆಯ ನಿರ್ಲಿಪ್ತತೆಯಿಂದ ಈ 'ವಿಯೋಗ'ವನ್ನು ಅವರು ಸ್ವೀಕರಿಸಿದರು. ಸಾಧಕನಿಗೆ ಸಾಮಗ್ರಿ ಯಾವುದಾದರೇನು, ಎಂಬುದು ಅವರ ಧೋರಣೆ.

'ಕಲಾವಿಹಾರ' ಹಾಗೂ ಅನಂತರದ 'ಲಲಿತರಂಗ' ಕನ್ನಡ ಪತ್ರಿಕೋದ್ಯಮದ ಮೈಲಿಗಲ್ಲುಗಳು. ಜನಪ್ರಿಯ ಪತ್ರಿಕೆಗಳಲ್ಲಿ ಸುತ್ತಮುತ್ತ ನಡೆಯುವ ಕಲಾಕಾರ್ಯಕ್ರಮಗಳ ಬಗ್ಗೆ, ಪ್ರದರ್ಶನಗಳ ಬಗ್ಗೆ ಸಣ್ಣಪುಟ್ಟ ವರದಿಗಳು, ಪ್ರಶಂಸಾರೂಪದ ಒಂದೆರಡು ಬರಹಗಳು ಪ್ರಕಟವಾಗುತ್ತಿದ್ದ ಕಾಲದಲ್ಲಿ ಈಶ್ವರಯ್ಯನವರು ಒಂದೋ ಎರಡೋ ಪುಟಗಳನ್ನು ಕಾರ್ಯಕ್ರಮಗಳ ಸಚಿತ್ರವರದಿ, ಸಮೀಕ್ಷೆ, ಕಲಾವಿಮರ್ಶೆ ಇತ್ಯಾದಿಗಳಿಗಾಗಿ ಬಳಸಿ ಕಲಾ ವಿಮರ್ಶೆಯ ಒಂದು ಪರಂಪರೆಯನ್ನು ಜನಪ್ರಿಯ ಪತ್ರಿಕೆಗಳ ಮೂಲಕ ರೂಢಿಸಿದರು. ಇವೆಲ್ಲ ಪುಟ ತುಂಬುವ ಕೆಲಸಗಳಲ್ಲ. ಸ್ವತಃ ಈಶ್ವರಯ್ಯನವರೇ ಲೇಖನಗಳನ್ನು ಬರೆದರು. ಖ್ಯಾತ ಕಲಾವಿದರನ್ನು ಸಂದರ್ಶನ ಮಾಡಿ ಅಪೂರ್ವವಾದ ಸಂದರ್ಶನ ಲೇಖನಗಳನ್ನು ಪ್ರಕಟಿಸಿದರು. ಕಲಾವಿದರ ವ್ಯಕ್ತಿಚಿತ್ರಗಳನ್ನು ಬರೆದರು. ಇತರರಿಂದ ಬರೆಯಿಸಿದರು. ಸಂಗೀತ, ನಾಟ್ಯ, ಚಿತ್ರ, ಛಾಯಾಚಿತ್ರ, ಯಕ್ಷಗಾನ, ಕ್ಯಾಸೆಟ್ ಸಂಗೀತ, ಲಘು ಸಂಗೀತ, ಸುಗಮ ಸಂಗೀತ – ಹೀಗೆ ಪ್ರದರ್ಶನ ಕಲೆಗಳ ವಿವಿಧ ಆಯಾಮಗಳ ಬಗ್ಗೆ ಪರಿಕಲ್ಪನಾತ್ಮಕ ಹಾಗೂ ವಿಮರ್ಶಾತ್ಮಕ ಲೇಖನಗಳನ್ನು ಪ್ರಕಟಿಸಿ ಕಲಾವಿಮರ್ಶೆಯ ಒಂದು ಕಣಜವನ್ನೇ ಕನ್ನಡದಲ್ಲಿ ಸೃಷ್ಟಿಸಿದರು. ಪ್ರಾಯಃ ಕನ್ನಡ ಪತ್ರಿಕೋದ್ಯಮದಲ್ಲಿ ಇದುವರೆಗೆ ಯಾವೊಬ್ಬ ಸಂಪಾದಕರೂ ಮಾಡದಿದ್ದ ಘನಕಾರ್ಯವನ್ನು ತುಂಬು ಗಾಂಭೀರ್ಯದಿಂದ ಕಲಾಪ್ರಪಂಚಕ್ಕೆ, ಕಲಾವಿದರಿಗೆ ಅಪಚಾರವಾಗದ ರೀತಿಯಲ್ಲಿ, ಕಲೆ ಹಾಗೂ ಕಲಾವಿದರಿಗೆ ಗೌರವ ಸಲ್ಲುವ ರೀತಿಯಲ್ಲಿ ಈಶ್ವರಯ್ಯನವರು ಮಾಡಿರುವುದು ಅವರ ಹೆಚ್ಚುಗಾರಿಕೆ. ಆದುದರಿಂದಲೇ ಈಶ್ವರಯ್ಯನವರು ಅಖಂಡ ಕಲಾಪ್ರಪಂಚದಲ್ಲಿ ಅತ್ಯಂತ ಆದರಣೀಯ ವ್ಯಕ್ತಿಯಾಗಿದ್ದಾರೆ.

ಈಶ್ವರಯ್ಯನವರ ಪತ್ರಿಕಾ ಧರ್ಮ, ವೃತ್ತಿನಿಷ್ಠೆ ಅನನ್ಯವಾದುದು. ಈಗೀಗ ಲೇಖಕರು ಪದೇ ಪದೇ ಪತ್ರಿಕಾಲಯಗಳಿಗೆ ಎಡತಾಕುವ, ದೂರವಾಣಿ, ಮಿಂಚಂಚೆ ಮೂಲಕ ಸಂಪಾದಕರನ್ನು ಸಂಪರ್ಕಿಸುವ, ಲೇಖನ ಪ್ರಕಟವಾಗದಿದ್ದರೆ ಯಾಕೆ ಪ್ರಕಟಿಸುತ್ತಿಲ್ಲ, ಎಂದು ಕೇಳುವ ಮನೋಧರ್ಮ ರೂಢಿಸಿಕೊಂಡಿದ್ದಾರೆ. ಈಶ್ವರಯ್ಯನವರು ಈ ಎಲ್ಲ ಲೇಖನಗಳನ್ನು ಅವುಗಳ ಯೋಗ್ಯತೆಯ ಆಧಾರದ ಮೇಲೆ ಪ್ರಕಟಿಸುತ್ತಿದ್ದರೇ ಹೊರತು ಸ್ನೇಹ ಸಂಪರ್ಕದ ಬಲದಿಂದಲ್ಲ. ''ನಿಮ್ಮ ಕವಿತೆ/ಲೇಖನ ಪ್ರಕಟಿಸುತ್ತಿದ್ದೇನೆ'' ಎಂದು ಹೇಳಿದವರೂ ಅಲ್ಲ. ''ನಿಮ್ಮನ್ನು ಓರ್ವ ಕವಿಯಾಗಿ ರೂಪಿಸಿದವನೇ ನಾನು'', ಎಂದವರೂ ಅಲ್ಲ. ಕರ್ತವ್ಯ ಕರ್ಮ ಮಾಡಿದ ನಿರ್ಲಿಪ್ತಭಾವದ ವ್ಯಕ್ತಿ ಅವರು. ಪತ್ರಿಕಾಲೋಕದ ಒಳಗುಟ್ಟುಗಳು, ಸಂಪಾದಕ ಬಳಗದ ವೈಚಿತ್ರ್ಯಗಳು, ಆಡಳಿತ ಮಂಡಳಿಯ ಬಿಗಿ ವರಸೆಗಳು ಇತ್ಯಾದಿಯಾದ ಅಂತರಂಗದ ಲೋಪವನ್ನು ಅವರು ಎಂದೂ ಎಲ್ಲೂ ಬಿಚ್ಚಿಟ್ಟವರಲ್ಲ. ಸಹೋದ್ಯೋಗಿಗಳ ಬಗ್ಗೆ, ಸಹ ಲೇಖಕರ ಬಗ್ಗೆ, ಆಡಳಿತ ಮಂಡಳಿಯ

ಬಗ್ಗೆ ಸದಾ ಉತ್ತಮ ಅಭಿಪ್ರಾಯ ವ್ಯಕ್ತಪಡಿಸಿದವರು. ಹೇಳಬಾರದ ಸಂಗತಿಗಳನ್ನು ಎಂದೂ ಹೇಳಿದವರಲ್ಲ. ಇದು ಅವರ ವೃತ್ತಿ ನಿಷ್ಠೆ.

ಸಂಗೀತ, ನಾಟ್ಯ, ಯಕ್ಷಗಾನ, ಛಾಯಾಚಿತ್ರ, ಕಲೆ ಇತ್ಯಾದಿಗಳ ವಿಮರ್ಶೆ ಕಠಿಣವಾದ ಕೆಲಸ. ಕಲಾಸೃಷ್ಟಿ ತೀರ ಅಮೂರ್ತವೂ ವೈಯಕ್ತಿಕವೂ ಆದ ಆಯ್ಕೆಗಳ ಅನುಭವ. ಇಂಥ ವೈಯಕ್ತಿಕತೆಯ ಕಲಾಸೃಷ್ಟಿಯ ವಿಮರ್ಶೆಯನ್ನು ಪದಗಳಲ್ಲಿ ಹಿಡಿದಿಡುವುದು ಹೇಗೆ ? ರಸಾನುಭೂತಿಯನ್ನು ಬಣ್ಣಿಸುವುದು ಹೇಗೆ ? ಅತಿ ಬೌದ್ಧಿಕತೆ ಹಾಗೂ ಅತಿಭಾವುಕತೆಯ ಜಾರುದಾರಿಯಲ್ಲಿ ಹೊರಳಾಡದೆ 'ಮಾನಸಿಕ ದೂರ'ವನ್ನು ಕಾಪಾಡಿಕೊಂಡು ತನಗಾದ ರಸಾನುಭವವನ್ನು ಇತರರಿಗೆ ದಾಟಿಸುವುದು ಸಂಪಾದಕರಿಗೆ ಸವಾಲಿನ ಕೆಲಸ. ಕಲೆಯ ಸೂಕ್ಷ್ಮ ವಿಚಾರಗಳಿಗೆ ವಿಶೇಷ ಗಮನಹರಿಸಿದರೆ ತಾಂತ್ರಿಕ ವಿವರಗಳ ಪೆಡಸಾದ ವಿಮರ್ಶೆ ಮೂಡೀತು. ಕಲೆಯ 'ಮಾಂತ್ರಿಕತೆ'ಗೆ ಮರುಳಾದರೆ ಅನ್ನಿಸಿಕೆ-ಅಭಿಪ್ರಾಯಗಳ ಮಟ್ಟದಲ್ಲೇ ವಿಮರ್ಶೆ ಉಳಿದೀತು. 'ತಾಂತ್ರಿಕತೆ' ಹಾಗೂ 'ಮಾಂತ್ರಿಕತೆ' ಎರಡನ್ನೂ ಬೆಸೆಯುವ, 'ಬುದ್ಧಿಭಾವ'ಗಳನ್ನು ಸಮ್ಮಿಲನಗೊಳಿಸುವ ಅಪೂರ್ವವಾದ ವಿಮರ್ಶೆ ಈಶ್ವರಯ್ಯನವರಿಂದ ಹೊರಹೊಮ್ಮಿತು. ಸಂಶೋಧಕನೂ ಪ್ರೌಢ ಕಲಾರಸಿಕನೂ ಕಾಲೇಜು ವಿದ್ಯಾರ್ಥಿಯೂ – ಹೀಗೆ ಬಹುಮಂದಿ ಅರ್ಥಮಾಡಿಕೊಳ್ಳಬಹುದಾದ ತಿಳಿಯಾದ ಭಾಷೆಯಲ್ಲಿ, ಪಾರಿಭಾಷಿಕ ಪದಗಳ ಮಿತವಾದ ಬಳಕೆಯಲ್ಲಿ ಅವರ ಕಲಾವಿಮರ್ಶೆ ಹದವಾಗಿ, ಪಕ್ವವಾಗಿ ಬೆಳೆಯಿತು.

ಈಶ್ವರಯ್ಯನವರು ಕಲಾವಿಮರ್ಶೆಗಾಗಿ ಹೊಸ ಹೊಸ ಲೇಖಕರನ್ನು ಶೋಧಿಸಿದರು. ಪ್ರೊ|| ಅರವಿಂದ ಹೆಬ್ಬಾರ್, ಶ್ರೀಮತಿ ಪ್ರತಿಭಾ ಸಾಮಗ, ಶ್ರೀಮತಿ ಸರೋಜಾ ಆಚಾರ್ಯ ಮುಂತಾದವರು ಕರ್ನಾಟಕ ಸಂಗೀತ ಹಾಗೂ ಭರತನಾಟ್ಯದ ಉತ್ತಮ ಲೇಖನಗಳನ್ನು ಬರೆಯಲು ಸಾಧ್ಯವಾದುದು ಈಶ್ವರಯ್ಯನವರಿಂದಾಗಿ.

ಯಕ್ಷಗಾನ ಕಲೆ ಒಂದು ಗಂಭೀರ ಅಧ್ಯಯನ ವಸ್ತುವಲ್ಲ; ಸಾಮಾನ್ಯ ಜನಪದಕಲೆ ಎಂಬ ನಂಬಿಕೆ ಪ್ರಚಲಿತದಲ್ಲಿದ್ದ ಕಾಲದಲ್ಲಿ ಯಕ್ಷಗಾನದ ಸರ್ವಾಂಗ ಸೌಂದರ್ಯದ ಬಗ್ಗೆ, ಪ್ರಸಂಗ ಸಾಹಿತ್ಯದ ಬಗ್ಗೆ, ಕಥಾವಸ್ತು ಹಾಗೂ ಸಂದೇಶದ ಬಗ್ಗೆ, ಪಾತ್ರ ಚಿತ್ರಣ ಮತ್ತು ಔಚಿತ್ಯದ ಬಗ್ಗೆ, ಯಕ್ಷಗಾನ ಪ್ರದರ್ಶನ - ಪ್ರಯೋಗ, ಆಧುನಿಕತೆ ಹಾಗೂ ಸಾಂಪ್ರದಾಯಿಕತೆ ಬಗ್ಗೆ, ಯಕ್ಷಗಾನ ಕಲಾವಿದರ ಬಗ್ಗೆ ಸತತವಾಗಿ ಮೂರು ದಶಕಗಳ ಕಾಲ ಉದಯವಾಣಿಯ ಪುಟಗಳಲ್ಲಿ 'ವಾದ-ವಾಗ್ವಾದ'ಗಳನ್ನು ಈಶ್ವರಯ್ಯ ಹುಟ್ಟುಹಾಕಿದರು. 'ಗುಪ್ತನಾಮ'ಗಳಲ್ಲಿ ಸ್ವತಃ ಬರೆದರು. ಡಾ|| ಎಂ. ಪ್ರಭಾಕರ ಜೋಶಿ, ಡಾ|| ರಾಘವ ನಂಬಿಯಾರ್, ಅಜಕಾರು ನಾಗರಾಜ ಶಾಸ್ತ್ರಿ, ಕೊರ್ಗಿ ವೆಂಕಟೇಶ ಉಪಾಧ್ಯ, ಕುಮಾರಸ್ವಾಮಿ, ಶ್ರೀಧರ ಹಂದೆ ಮೊದಲಾದವರು ಈಶ್ವರಯ್ಯನವರು ಕೊಟ್ಟ ಪ್ರೋತ್ಸಾಹದಿಂದಾಗಿ ಪ್ರಮುಖ ವಿಮರ್ಶಕರಾಗಿ ಮೂಡಿಬಂದರು, ಯಕ್ಷಗಾನ ಕಲೆಯ ಬೆಲೆ ಕಟ್ಟುವುದಕ್ಕೆ ಉದಯವಾಣಿಯ ಮೂಲಕ ವಿಮರ್ಶೆಯ ಮಾನದಂಡಗಳು ಸೃಷ್ಟಿಯಾಗುವುದಕ್ಕೆ ಕಾರಣೀಭೂತರಾದರು. ಜನ ಜೀವನದಿಂದ ಹೊರಹೊಮ್ಮಿದ ಈ ಕಲಾಪ್ರಕಾರದ ಬಗ್ಗೆ ಸಾಮಾನ್ಯ ಪ್ರೇಕ್ಷಕರೂ ಪತ್ರಿಕೆಯ ಅಂಕಣಗಳಲ್ಲಿ ನಡೆಯುವ ಚರ್ಚೆಗಳಲ್ಲಿ ಭಾಗಿಯಾಗುವುದಕ್ಕೆ ಅವಕಾಶ ಕಲ್ಪಿಸಿ 'ವಿಮರ್ಶೆಯ ಪ್ರಜಾಪ್ರಭುತ್ವೀಕರಣ'ವನ್ನು ಸಾಧ್ಯವಾಗಿಸಿದ್ದು ಈಶ್ವರಯ್ಯನವರು ಮಾಡಿದ ಹಿರಿದಾದ ಕಲಾ ಸೇವೆ. ವಾಗ್ವಾದಗಳ ಮೂಲಕವೇ ಜನರ ಕಲಾವಂತಿಕೆ ರೂಪುಗೊಳ್ಳಬೇಕು, ಕಲಾಪ್ರಜ್ಞೆಯ ಮಟ್ಟ ಉನ್ನತವಾಗಬೇಕು ಎಂಬ ಕಳಕಳಿ ಅವರ ಈ ಎಲ್ಲ ಪ್ರಯತ್ನಗಳಲ್ಲಿದೆ.

ಕಲಾವಿದ-ವಿಮರ್ಶಕ-ಸಹೃದಯ – ಈ ಮೂವರ 'ತ್ರಿವೇಣಿ ಸಂಗಮ'ವಾಗಬೇಕು ಎಂಬುದು ಈಶ್ವರಯ್ಯನವರ ಧೋರಣೆ. ಈ ಮೂವರ ನಡುವಿನ ಸಂಬಂಧ ತೀರ ಜಟಿಲ ಮತ್ತು ಸಂಕೀರ್ಣ. ಇಂದು ಕಲಾರಂಗದಲ್ಲಿ ಕಲಾವಿದ ಹಾಗೂ ವಿಮರ್ಶಕರ 'ಯಾಜಮಾನ್ಯ'ವಿದೆ. ''ನಾವೇರುವೆತ್ತರಕೆ ನೀನೇರಬಲ್ಲೆಯಾ ?'' ''ನನ್ನ ಕಲಾಸೃಷ್ಟಿ ದೈವೀಕೃಪೆಯ ಪರಿಪಾಕ. ಅದನ್ನು ವಿಮರ್ಶಿಸುವ ಯೋಗ್ಯತೆ, ಅರ್ಹತೆ ನಿನಗೆಲ್ಲಿಯದು ? ''ಅಲ್ಪ ಚೇತನ'ವಾದ ನಿನಗೆ ನನ್ನ ಕೃತಿ ಹೇಗೆ ತಾನೇ ಅರ್ಥವಾದೀತು'' – ಎಂಬ ಹಮ್ಮು ಕಲಾವಿದನದ್ದಾದರೆ ಯಾವುದೇ ಕಲಾವಿದನನ್ನು ಕೀರ್ತಿ ಶಿಖರಕ್ಕೇರಿಸುವ ಅಥವಾ ಅಪಕೀರ್ತಿಯ ಪಾತಾಳಕ್ಕಿಳಿಸುವ ಶಕ್ತಿ ತನ್ನದು ಎಂಬ ದರ್ಪ ವಿಮರ್ಶಕನದ್ದು. ಆದರೆ ಯಾವುದೇ ಒಂದು ಕಲೆಯನ್ನು ಕಾಣುವ ಕಣ್ಣು ಹೇಗಿರಬೇಕು ? ಕೇಳುವ ಕಿವಿ ಹೇಗಿರಬೇಕು ? ಕಲೆಯನ್ನು ಅನುಭವಿಸುವ, ಆಸ್ವಾದಿಸುವ ಬಗೆ ಹೇಗೆ ? ಪ್ರಯೋಗದ ಹಿನ್ನೆಲೆ ಏನು ? ಬದಲಾದ ಕಾಲಘಟ್ಟದಲ್ಲಿ ಬದಲಾಗುವ ಕಲಾಪ್ರಕಾರಗಳ ಆಶಯಗಳನ್ನು ಅರಿಯುವ ಮತ್ತು ಅವುಗಳಿಗೆ ಸ್ಪಂದಿಸುವ ಬಗೆ ಹೇಗೆ ? – ಸಹೃದಯನ ಪಾಲಿಗೆ ಇದೆಲ್ಲ 'ವಿಪಿನ ಸಂಚಾರ'.

## ಬೆಲೆ

ದೇವ ಮಂದಿರದ ಹೊರಗಿನ
ಪೂಜಾ ಪಟ್ಟಿಯ ದರಗಳೆ
ಹೇಳುತ್ತಿವೆ
ದೇವರ ಬೆಲೆ

**ರವಿಶಂಕರ ಒಡ್ಡಂಬೆಟ್ಟು**
ಮಂಗಳೂರು - ೧೫

ಕಲೆ ತೀರ ವೈಯಕ್ತಿಕವಾದಾಗ ಜನರಿಂದ ದೂರವಾಗುತ್ತದೆ, ತೀರ ಸಾಮಾಜಿಕವಾದಾಗ ಸಂತೆಯಲ್ಲಿ ಕಳೆದುಹೋಗುತ್ತದೆ, ಸಂವೇದನಾ ಶೂನ್ಯವಾಗುತ್ತದೆ. ಕಲೆಯಲ್ಲಿ ವೈಯಕ್ತಿಕತೆ ಹಾಗೂ ಸಾಮಾಜಿಕತೆ ಎರಡೂ ಸಮರಸವಾಗಿ ಬೆರೆಯಬೇಕು. ಈ ಕ್ರಿಯೆ ಕಲಾವಿದ ಹಾಗೂ ವಿಮರ್ಶಕ ಇಬ್ಬರಿಂದಲೂ ಸಾಧ್ಯವಾಗಬೇಕು. ವಿಮರ್ಶಕನ ಟೀಕೆಗಳನ್ನು ಕಲಾವಿದ ಸಹೃದಯತೆಯಿಂದ ಸ್ವೀಕರಿಸಬೇಕು. ವಿಮರ್ಶಕ ವಿನಯವಂತನಿರಬೇಕು. ಸಹೃದಯನಿಗೆ ಕಲಾಸೃಷ್ಟಿಯನ್ನು ಅನುಭವಿಸುವ ಸಂಸ್ಕಾರ, ಸಿದ್ಧತೆ ಬೇಕು. ಈ ಸತ್ಯವನ್ನು ಅರಿತ ಈಶ್ವರಯ್ಯ ಕಲೆಗಾರ-ಸಹೃದಯ ಹಾಗೂ ವಿಮರ್ಶಕ – ಈ ಮೂವರನ್ನು ಒಂದೇ ಪಾತಳಿಯಲ್ಲಿ ಸ್ಥಾಪಿಸುವ ಪ್ರಯತ್ನಗಳನ್ನು ತಮ್ಮ ಭಾಷಣ ಹಾಗೂ ಬರವಣಿಗೆಗಳ ಮೂಲಕ ಮಾಡುತ್ತಲೇ ಬಂದವರು. ಸಂಗೀತ ರಸಗ್ರಹಣ ಶಿಬಿರ, ಚಿತ್ರಕಲಾ ರಸಗ್ರಹಣ ಶಿಬಿರ ಹಾಗೂ ಛಾಯಾಚಿತ್ರ ರಸಗ್ರಹಣ ಶಿಬಿರಗಳ ಮೂಲಕ ಸಹೃದಯನನ್ನು ಸಿದ್ಧಗೊಳಿಸಿ ಉನ್ನತ ಪಾತಳಿಗೆ ಒಯ್ಯುವ ಪ್ರಯತ್ನವನ್ನು ವ್ರತದಂತೆ ಮಾಡುತ್ತ ಬಂದವರು.

ಕಲೆಯು ಇಂದಿನ ವಿದ್ಯುನ್ಮಾನ ಮಾಧ್ಯಮಗಳ ಸ್ಪರ್ಧಾತ್ಮಕ ಭರಾಟೆಯಲ್ಲಿ ರಿಯಾಲಿಟಿ ಶೋಗಳಲ್ಲಿ ನಲುಗಿದೆ. ಅದು ಮಾರಾಟದ ವಸ್ತುವಾಗಿದೆ; ವ್ಯಾಪಾರಿ ಸರಕು ಆಗಿದೆ. ಪ್ರದರ್ಶನದ ಮಾಲು ಆಗಿದೆ. ಸುಲಭ ಸಿದ್ಧಿ ಪ್ರಸಿದ್ಧಿಯ ಸಾಧನವಾಗಿಬಿಟ್ಟಿದೆ. ಇಂದಿನ ತರುಣ ಜನಾಂಗದವರು ಹಣ ಹಾಗೂ ಪ್ರಸಿದ್ಧಿಯತ್ತ ಹೆಚ್ಚು ಹೆಚ್ಚು ಮುಖ ಮಾಡುತ್ತಿದ್ದಾರೆ. ಆದರೆ ಈಶ್ವರಯ್ಯನವರು ನಂಬಿದ ಕಲಾ ಸಿದ್ಧಾಂತವೆಂದರೆ - ಕಲೆ ಇರುವುದು ಅಭಿವ್ಯಕ್ತಿಗಾಗಿ, ರಸಾಭಿವ್ಯಕ್ತಿಗಾಗಿ ರಸಾನಂದಕ್ಕಾಗಿ. ಕಲಾಸಂಸ್ಕಾರದ ಮುಖೇನ ಜೀವನದ ಕ್ಷುದ್ರತೆಗಳಿಂದ 'ಮಹತಿ'ಯ ಕಡೆಗೆ ಸಾಗುವುದಕ್ಕಾಗಿ. 'ಭಾವವಿಮಾನ'ವೇರಿ 'ಆನಂದ ಘನ'ವನ್ನು ಸಾಧಿಸುವುದಕ್ಕಾಗಿ. ಕಳೆದ ನಾಲ್ಕು ದಶಕಗಳಲ್ಲಿ ಈಶ್ಯರಯ್ಯನವರು ನಿತ್ಯವೂ ಇದನ್ನೇ ವಿವಿಧ ವೇದಿಕೆಗಳಿಂದ ಪ್ರತಿಪಾದಿಸುತ್ತಾ ಬಂದಿದ್ದಾರೆ. ದಿಕ್ಕು ತಪ್ಪುತ್ತಿರುವ ಎಳೆಯರನ್ನು ಮತ್ತೆ ಮತ್ತೆ ಎಚ್ಚರಿಸುತ್ತಲೇ ಇದ್ದಾರೆ.

ಈಶ್ವರಯ್ಯನವರ ಬಲು ದೊಡ್ಡ ಗುಣ 'ಸಾಂಸ್ಕೃತಿಕ ಸಹಿಷ್ಣುತೆ'. ನವ್ಯಸಾಹಿತ್ಯದ ಹಿನ್ನೆಲೆಯಿಂದ ಬಂದ ಅವರು ಪತ್ರಿಕಾ ಸಂಪಾದಕರಾದ ಕಾರಣ ಹಾಗೂ ಮೂಲ ಪ್ರವೃತ್ತಿಯ ದೆಸೆಯಿಂದಾಗಿ ಹಲವಾರು ಬಗೆಯ ಆಸಕ್ತಿಗಳನ್ನು ಬೆಳೆಸಿಕೊಂಡು ಯಾವುದೇ ಒಂದು ಪಂಥದ ಬಗೆಗೆ ವಿಶೇಷ ಒಲುಮೆ ತೋರದೆ ಸಕಲವನ್ನೂ 'ಒಳಗೊಳ್ಳುವ' ಪ್ರಯತ್ನ ಮಾಡಿದವರು. ತಮ್ಮ ವೈಯಕ್ತಿಕ ಅಭಿಪ್ರಾಯಗಳಿಗೆ ವ್ಯತಿರಿಕ್ತವಾದ ವಿಚಾರಗಳಿಗೂ ಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿದವರು. 'ಆಧುನಿಕ ಪ್ರಯೋಗ ಪ್ರಿಯತೆ' ಹಾಗೂ 'ಸಾಂಪ್ರದಾಯಿಕ ಸಭ್ಯತೆ' ಎರಡನ್ನೂ ಮೈಗೂಡಿಸಿಕೊಂಡವರು. ಅವರಿಗೆ ಶಾಸ್ತ್ರೀಯ ಸಂಗೀತ, ಲಘು ಸಂಗೀತ, ಯಕ್ಷ ಸಂಗೀತ, ಸಿನಿಮಾ ಸಂಗೀತ-ಸಾಂಪ್ರದಾಯಿಕ ಚಿತ್ರಕಲೆ, ನವ್ಯ, ಚಿಕಣಿ – ಇತ್ಯಾದಿ ಪರಿಭೇದಗಳಿಲ್ಲ. ಸಿನಿಮಾ ಸಂಗೀತ ಕ್ಷುಲ್ಲಕ ಎಂದು ಅವರು ಜರೆಯುವುದಿಲ್ಲ. ಕಾರಂತರ ಯಕ್ಷಗಾನ ಖ್ಯಾತಿ ಪ್ರಯೋಗವನ್ನು, ಬಿ. ವಿ. ಕಾರಂತರ ರಂಗಸಂಗೀತದ ಕಲ್ಪನೆಯನ್ನು ಮೆಚ್ಚಿಕೊಳ್ಳುತ್ತ ಅವುಗಳ ಮಿತಿಗಳನ್ನು ಅವರು ತೋರಿಸಬಲ್ಲರು. ಅವರ ಈ ಸಾಕಲ್ಯ ದೃಷ್ಟಿ, ಸಮನ್ವಯ ಭಾವ, ಸಹಿಷ್ಣುತೆ ಇಂದು ತುಂಬ ಅಗತ್ಯವಾಗಿದೆ.

ಕರ್ನಾಟಕದಲ್ಲಿ ಒಂದೊಂದು ಕಲೆಯ ಬಗ್ಗೆಯೂ ಪಾಂಡಿತ್ಯಪೂರ್ಣ ವಿಮರ್ಶೆ ಬರೆಯುವವರಿರಬಹುದು. ಆದರೆ ಚಿತ್ರಕಲೆ, ಸಂಗೀತ, ನಾಟ್ಯ, ಸಾಹಿತ್ಯ, ಛಾಯಾಚಿತ್ರ ಮುಂತಾದ ಹಲವು ಕಲೆಗಳ ಬಗ್ಗೆ ಸಮಾನವಾದ ಸಿದ್ಧಿಯೊಂದಿಗೆ ಬರೆದ ಕಲಾವಿಮರ್ಶಕರು ವಿರಳ. ಕನ್ನಡದಲ್ಲಿ ಎಷ್ಟು ಪ್ರೌಢಿಮೆಯಿಂದ ಈಶ್ವರಯ್ಯ ಲೇಖನಗಳನ್ನು ಬರೆದಿದ್ದಾರೋ ಅಷ್ಟೇ ಪ್ರೌಢಿಮೆಯಿಂದ ಇಂಗ್ಲಿಷ್‌ನಲ್ಲೂ ಕೆಲವು ಲೇಖನಗಳನ್ನು ಬರೆದಿದ್ದಾರೆ. ಈ ಜಾಡನ್ನು ಅನುಸರಿಸಿ ಮುಂದುವರಿದಿದ್ದರೆ ಪ್ರಾಯಃ ಇಂದು ಈಶ್ವರಯ್ಯನವರು ಭಾರತೀಯ ಸಮಕಾಲೀನ ಕಲಾವಿಮರ್ಶಕರೆಂಬ ಮನ್ನಣೆಗೆ ಪಾತ್ರರಾಗುತ್ತಿದ್ದರು. ಆದರೆ ತಾವು ನೆಲೆ ನಿಂತಿರುವಲ್ಲೇ 'ತೃಪ್ತಿ' ಹಾಗೂ 'ನೆಮ್ಮದಿ' ಕಾಣುವ ಜಾಯಮಾನ ಅವರದ್ದು. ತಮ್ಮ ಕತೆಗಳ, ಕಲಾವಿಮರ್ಶಾ ಲೇಖನಗಳ, ಕಲಾವಿದರ ಸಂದರ್ಶನಗಳ ಸಂಕಲನಗಳನ್ನು ಪ್ರಕಟಿಸಲು ನಿರಾಸಕ್ತರಾಗಿರುವ ಈಶ್ವರಯ್ಯನವರು ಹಾಕಿಕೊಟ್ಟಿರುವ ಉದಾರವಾದಿ ಪ್ರಜಾಪ್ರಭುತ್ವವಾದಿ ರಸೈಕದೃಷ್ಟಿಯ ವಿಮರ್ಶಾ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿ ನಮ್ಮ ಮೇಲಿದೆ.

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೨

ಮೀನಿನಂತಾದರು. ೧೯೭೨ರಲ್ಲಿ ಒಮ್ಮೆ ಉಡುಪಿಗೆ ಬಂದಾಗ ಹರಿದಾಸಭಟ್ಟರು ಉದಯವಾಣಿ ಪತ್ರಿಕೆಯ ಸಂಪಾದಕ ಬಳಗ ಸೇರಲು ಸಲಹೆ ನೀಡಿದರು. ಗುರುಗಳ ಸಲಹೆ ಮೇರೆಗೆ ಮಣಿಪಾಲದ ಉದಯವಾಣಿ ಬಳಗ ಸೇರಿಕೊಂಡ ಈಶ್ವರಯ್ಯನವರ ಜೀವನಗತಿಯೇ ಬದಲಾಯಿತು. ಸುಮಾರು ಮೂರೂವರೆ ದಶಕಗಳ ಕಾಲ ಅದೇ ಪತ್ರಿಕಾ ಬಳಗದಲ್ಲಿ ಮ್ಯಾಗಸೀನ್‌ನ ಸಂಪಾದಕರಾಗಿ ದುಡಿದರು. ೧೯೭೩ರಲ್ಲಿ 'ತುಷಾರ' ಪತ್ರಿಕೆ ಉದಯವಾದಾಗ ಈಶ್ವರಯ್ಯ ಅದರ ಸಂಪಾದಕರಾದರು. ಸಂಪಾದಕತ್ವದಲ್ಲಿ ತಮಗೆ ಗುರುಗಳಾದ ಪಾ. ವೆಂ. ಆಚಾರ್ಯರ ಹಾದಿಯಲ್ಲಿ ಮುನ್ನಡೆದು 'ತುಷಾರ' ಪತ್ರಿಕೆಯನ್ನು ಕನ್ನಡದ ಒಂದು ಪ್ರೌಢ ಪತ್ರಿಕೆಯನ್ನಾಗಿ ಬೆಳೆಸಿದರು.

ಈಶ್ವರಯ್ಯನವರ ಸಾಧನೆಗಳನ್ನು ಗುರುತಿಸುವಾಗ 'ತುಷಾರ' ಪತ್ರಿಕೆಗೆ ಅವರು ನೀಡಿದ 'ಅಸ್ಮಿತೆ' ದಾಖಲೆಗೆ ಅರ್ಹವಾಗಿದೆ. ಪಾ.ವೆಂ. ಆಚಾರ್ಯರ 'ಕಸ್ತೂರಿ' ಮಾಸಪತ್ರಿಕೆಯ ಆದರ್ಶವನ್ನು ಕಣ್ಣ ಮುಂದಿಟ್ಟುಕೊಂಡು ಅದಕ್ಕಿಂತ ಭಿನ್ನವಾದ ರೀತಿಯಲ್ಲಿ 'ತುಷಾರ'ವನ್ನು ಅವರು ರೂಪಿಸಿದರು. ಸಾಹಿತ್ಯ, ವಿವಾದಗಳು, ಪ್ರಚಲಿತ ವಿಷಯಗಳು, ಸಂಗೀತ, ನಾಟ್ಯ, ಛಾಯಾಚಿತ್ರಗ್ರಹಣ, ಚಿತ್ರಲೇಖನ, ವಿಚಾರಪತ್ರ, ಕವಿತೆಗಳು – ಹೀಗೆ ವಿಷಯ ವೈವಿಧ್ಯ, ಗಂಭೀರ ಚಿಂತನೆ, ಸಮಕಾಲೀನ ಸಾಹಿತ್ಯ ಹಾಗೂ ಕಲೆಗಳ ವಿಚಾರಧಾರೆಗಳು ಇತ್ಯಾದಿಗಳೆಲ್ಲವನ್ನು ಒಳಗೊಳ್ಳುವ ಸಾಂಸ್ಕೃತಿಕ ಬದುಕಿಗೆ ಕನ್ನಡಿ ಹಿಡಿಯುವ, ಅದೇ ವೇಳೆಗೆ ಓದುಗ ವರ್ಗವನ್ನು ನಿರ್ಮಾಣ ಮಾಡುವ ರೀತಿಯಲ್ಲಿ ಆ ಪತ್ರಿಕೆಯನ್ನು ಅವರು ಬೆಳೆಸಿದರು. ಡಿ. ವಿ. ರಾವ್, ರವೀಶ ಕಾಸರವಳ್ಳಿ, ತೇಜಸ್ವಿ, ಜಯಂತ ಕಾಯ್ಕಿಣಿ, ಹನುಮಂತರಾವ್, ಕೃಪಾಕರ ಸೇನಾನಿ ಮೊದಲಾದ ನೂರಾರು ಲೇಖಕರು 'ತುಷಾರ' ಪತ್ರಿಕೆಗಾಗಿ ಬರೆದರು. ಹಿರಿಯ-ಕಿರಿಯ, ಪ್ರಸಿದ್ಧ-ಅಪ್ರಸಿದ್ಧ, ಆ ಪಂಥ – ಈ ಪಂಥ ಎಂಬ ಪರಿಭೇದವಿಲ್ಲದೆ ಒಳ್ಳೆಯ ಸಾಹಿತ್ಯ ಸೃಷ್ಟಿಯನ್ನು ಪೋಷಿಸಿದರು. ಹೈಸ್ಕೂಲು ಕಾಲೇಜುಗಳ ವಿದ್ಯಾರ್ಥಿಗಳ ಕೃತಿಗಳನ್ನು ಪ್ರಕಟಿಸಿ ಅವರಲ್ಲಿ ಭರವಸೆ ತುಂಬಿಸಿದರು. ಕೃತಿ ಪ್ರಕಟನೆ ಮಾಡಿದ್ದು ಮಾತ್ರವಲ್ಲದೆ ಬರೆಹ ಹೇಗಿರಬೇಕು ಎಂದು ಸಲಹೆ, ಸೂಚನೆ ನೀಡಿ ತಿದ್ದಿ ತೀಡಿದರು. ಶ್ರೀ ಈಶ್ವರಯ್ಯನವರು ಪತ್ರಿಕೆಯ ಮೂಲಕ ಪ್ರೋತ್ಸಾಹ ನೀಡಿದ ಆಗಿನ ಅನೇಕ ಕಿರಿಯ ಲೇಖಕರು, ಕವಿಗಳು ಇಂದು ಕನ್ನಡ ವಾಙ್ಮಯ ಪ್ರಪಂಚದಲ್ಲಿ ಮನೆಮಾತಾಗಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು. 'ಹಿತಮಿತ ಗಂಭೀರ' ಆಗಿನ ತುಷಾರ ಪತ್ರಿಕೆಯ ವಿಶಿಷ್ಟತೆ. 'ತುಷಾರ'ದ ಈಶ್ವರಯ್ಯನವರನ್ನು ಕೆಲವರು 'ತುಷಾರಯ್ಯ' ಎಂದು ಕರೆಯುವ ವಾಡಿಕೆ ಹುಟ್ಟಿಕೊಂಡದ್ದಕ್ಕೆ ಅವರು ಪತ್ರಿಕೆಯ ಜೊತೆಗೆ ತಾದಾತ್ಮ್ಯವನ್ನು ಸಾಧಿಸಿದ್ದೇ ಕಾರಣ. 'ತುಷಾರ'ದಂಥ ಮತ್ತೊಂದು ಪತ್ರಿಕೆ ಕನ್ನಡದಲ್ಲಿ ಈವರೆಗೆ ಮೂಡಿಬಂದಿಲ್ಲ. 'ಮಯೂರ'ದ ದಾರಿ ಭಿನ್ನವಾದದ್ದು. ಜಯಂತ ಕಾಯ್ಕಿಣಿ ಸಂಪಾದಕತ್ವದ 'ಭಾವನಾ' ಭರವಸೆ ಮೂಡಿಸಿದರೂ, ಕಾರಣಾಂತರಗಳಿಂದ ಸ್ಥಗಿತಗೊಂಡು ನಿರಾಸೆ ಹುಟ್ಟಿಸಿತು.

ಪತ್ರಿಕೆ ಅಂದರೆ ಬಂಡವಾಳ ಹೂಡಿಕೆ, ಪ್ರಸಾರ, ಲಾಭ ಎಂಬ ಸಮೀಕರಣ ಪ್ರಬಲವಾದಾಗ ಈಶ್ವರಯ್ಯನವರು ಉದಯವಾಣಿಯ ಮ್ಯಾಗಸೀನ್ ವಿಭಾಗಕ್ಕೆ ಮುಖ್ಯಸ್ಥರಾದರು. ಕಲಾವಿಮರ್ಶೆಗಾಗಿಯೇ 'ಕಲಾವಿಹಾರ' ಹಾಗೂ 'ಲಲಿತರಂಗ' ಎಂಬ ಎರಡು ಪುಟಗಳ ವಿಮರ್ಶಾ ಲೇಖನ ಮತ್ತೆ ಒಂದು ಪುಟದ 'ಆಡುಂಬೊಲ' ಸಿದ್ಧವಾದವು. 'ತುಷಾರ'ದಿಂದ ಈಶ್ವರಯ್ಯನವರು ಮ್ಯಾಗಸೀನ್ ವಿಭಾಗಕ್ಕೆ ಹೊರಳಿ ಕೊಂಡಾಗ ಅವರ ಅಭಿಮಾನಿಗಳಿಗೆ ಬೇಸರವಾಯಿತು. ಆದರೆ ಈಶ್ವರಯ್ಯನವರು ಒಳಗೊಳಗೇ ಒಂದಿಷ್ಟು ನೊಂದುಕೊಂಡಿದ್ದರೂ ಆ ಬಗ್ಗೆ ಎಲ್ಲಿಯೂ ತಮ್ಮ ಅಸಮಾಧಾನ, ಹತಾಶೆ, ನೋವು ಹೇಳಿಕೊಂಡವರಲ್ಲ ಎಂಬುದು ಅತ್ಯಂತ ಗಮನಾರ್ಹ ಸಂಗತಿ. ಒಂದು ಬಗೆಯ ನಿರ್ಲಿಪ್ತತೆಯಿಂದ ಈ 'ವಿಯೋಗ'ವನ್ನು ಅವರು ಸ್ವೀಕರಿಸಿದರು. ಸಾಧಕನಿಗೆ ಸಾಮಗ್ರಿ ಯಾವುದಾದರೇನು, ಎಂಬುದು ಅವರ ಧೋರಣೆ.

'ಕಲಾವಿಹಾರ' ಹಾಗೂ ಅನಂತರದ 'ಲಲಿತರಂಗ' ಕನ್ನಡ ಪತ್ರಿಕೋದ್ಯಮದ ಮೈಲಿಗಲ್ಲುಗಳು. ಜನಪ್ರಿಯ ಪತ್ರಿಕೆಗಳಲ್ಲಿ ಸುತ್ತಮುತ್ತ ನಡೆಯುವ ಕಲಾಕಾರ್ಯಕ್ರಮಗಳ ಬಗ್ಗೆ, ಪ್ರದರ್ಶನಗಳ ಬಗ್ಗೆ ಸಣ್ಣಪುಟ್ಟ ವರದಿಗಳು, ಪ್ರಶಂಸಾರೂಪದ ಒಂದೆರಡು ಬರಹಗಳು ಪ್ರಕಟವಾಗುತ್ತಿದ್ದ ಕಾಲದಲ್ಲಿ ಈಶ್ವರಯ್ಯನವರು ಒಂದೋ ಎರಡೋ ಪುಟಗಳನ್ನು ಕಾರ್ಯಕ್ರಮಗಳ ಸಚಿತ್ರವರದಿ, ಸಮೀಕ್ಷೆ, ಕಲಾವಿಮರ್ಶೆ ಇತ್ಯಾದಿಗಳಿಗಾಗಿ ಬಳಸಿ ಕಲಾ ವಿಮರ್ಶೆಯ ಒಂದು ಪರಂಪರೆಯನ್ನು ಜನಪ್ರಿಯ ಪತ್ರಿಕೆಗಳ ಮೂಲಕ ರೂಢಿಸಿದರು. ಇವೆಲ್ಲ ಪುಟ ತುಂಬುವ ಕೆಲಸಗಳಲ್ಲ. ಸ್ವತಃ ಈಶ್ವರಯ್ಯನವರೇ ಲೇಖನಗಳನ್ನು ಬರೆದರು. ಖ್ಯಾತ ಕಲಾವಿದರನ್ನು ಸಂದರ್ಶನ ಮಾಡಿ ಅಪೂರ್ವವಾದ ಸಂದರ್ಶನ ಲೇಖನಗಳನ್ನು ಪ್ರಕಟಿಸಿದರು. ಕಲಾವಿದರ ವ್ಯಕ್ತಿಚಿತ್ರಗಳನ್ನು ಬರೆದರು. ಇತರರಿಂದ ಬರೆಯಿಸಿದರು. ಸಂಗೀತ, ನಾಟ್ಯ, ಚಿತ್ರ, ಛಾಯಾಚಿತ್ರ, ಯಕ್ಷಗಾನ, ಕ್ಯಾಸೆಟ್ ಸಂಗೀತ, ಲಘು ಸಂಗೀತ, ಸುಗಮ ಸಂಗೀತ – ಹೀಗೆ ಪ್ರದರ್ಶನ ಕಲೆಗಳ ವಿವಿಧ ಆಯಾಮಗಳ ಬಗ್ಗೆ ಪರಿಕಲ್ಪನಾತ್ಮಕ ಹಾಗೂ ವಿಮರ್ಶಾತ್ಮಕ ಲೇಖನಗಳನ್ನು ಪ್ರಕಟಿಸಿ ಕಲಾವಿಮರ್ಶೆಯ ಒಂದು ಕಣಜವನ್ನೇ ಕನ್ನಡದಲ್ಲಿ ಸೃಷ್ಟಿಸಿದರು. ಪ್ರಾಯಃ ಕನ್ನಡ ಪತ್ರಿಕೋದ್ಯಮದಲ್ಲಿ ಇದುವರೆಗೆ ಯಾವೊಬ್ಬ ಸಂಪಾದಕರೂ ಮಾಡದಿದ್ದ ಘನಕಾರ್ಯವನ್ನು ತುಂಬು ಗಾಂಭೀರ್ಯದಿಂದ ಕಲಾಪ್ರಪಂಚಕ್ಕೆ, ಕಲಾವಿದರಿಗೆ ಅಪಚಾರವಾಗದ ರೀತಿಯಲ್ಲಿ, ಕಲೆ ಹಾಗೂ ಕಲಾವಿದರಿಗೆ ಗೌರವ ಸಲ್ಲುವ ರೀತಿಯಲ್ಲಿ ಈಶ್ವರಯ್ಯನವರು ಮಾಡಿರುವುದು ಅವರ ಹೆಚ್ಚುಗಾರಿಕೆ. ಆದುದರಿಂದಲೇ ಈಶ್ವರಯ್ಯನವರು ಅಖಂಡ ಕಲಾಪ್ರಪಂಚದಲ್ಲಿ ಅತ್ಯಂತ ಆದರಣೀಯ ವ್ಯಕ್ತಿಯಾಗಿದ್ದಾರೆ.

ಈಶ್ವರಯ್ಯನವರ ಪತ್ರಿಕಾ ಧರ್ಮ, ವೃತ್ತಿನಿಷ್ಠೆ ಅನನ್ಯವಾದುದು. ಈಗೀಗ ಲೇಖಕರು ಪದೇ ಪದೇ ಪತ್ರಿಕಾಲಯಗಳಿಗೆ ಎಡತಾಕುವ, ದೂರವಾಣಿ, ಮಿಂಚಂಚೆ ಮೂಲಕ ಸಂಪಾದಕರನ್ನು ಸಂಪರ್ಕಿಸುವ, ಲೇಖನ ಪ್ರಕಟವಾಗದಿದ್ದರೆ ಯಾಕೆ ಪ್ರಕಟಿಸುತ್ತಿಲ್ಲ, ಎಂದು ಕೇಳುವ ಮನೋಧರ್ಮ ರೂಢಿಸಿಕೊಂಡಿದ್ದಾರೆ. ಈಶ್ವರಯ್ಯನವರು ಈ ಎಲ್ಲ ಲೇಖನಗಳನ್ನು ಅವುಗಳ ಯೋಗ್ಯತೆಯ ಆಧಾರದ ಮೇಲೆ ಪ್ರಕಟಿಸುತ್ತಿದ್ದರೇ ಹೊರತು ಸ್ನೇಹ ಸಂಪರ್ಕದ ಬಲದಿಂದಲ್ಲ. ''ನಿಮ್ಮ ಕವಿತೆ/ಲೇಖನ ಪ್ರಕಟಿಸುತ್ತಿದ್ದೇನೆ'' ಎಂದು ಹೇಳಿದವರೂ ಅಲ್ಲ. ''ನಿಮ್ಮನ್ನು ಓರ್ವ ಕವಿಯಾಗಿ ರೂಪಿಸಿದವನೇ ನಾನು'', ಎಂದವರೂ ಅಲ್ಲ. ಕರ್ತವ್ಯ ಕರ್ಮ ಮಾಡಿದ ನಿರ್ಲಿಪ್ತಭಾವದ ವ್ಯಕ್ತಿ ಅವರು. ಪತ್ರಿಕಾಲೋಕದ ಒಳಗುಟ್ಟುಗಳು, ಸಂಪಾದಕ ಬಳಗದ ವೈಚಿತ್ರ್ಯಗಳು, ಆಡಳಿತ ಮಂಡಳಿಯ ಬಿಗಿ ವರಸೆಗಳು ಇತ್ಯಾದಿಯಾದ ಅಂತರಂಗದ ಲೋಪವನ್ನು ಅವರು ಎಂದೂ ಎಲ್ಲೂ ಬಿಚ್ಚಿಟ್ಟವರಲ್ಲ. ಸಹೋದ್ಯೋಗಿಗಳ ಬಗ್ಗೆ, ಸಹ ಲೇಖಕರ ಬಗ್ಗೆ, ಆಡಳಿತ ಮಂಡಳಿಯ

ಬಗ್ಗೆ ಸದಾ ಉತ್ತಮ ಅಭಿಪ್ರಾಯ ವ್ಯಕ್ತಪಡಿಸಿದವರು. ಹೇಳಬಾರದ ಸಂಗತಿಗಳನ್ನು ಎಂದೂ ಹೇಳಿದವರಲ್ಲ. ಇದು ಅವರ ವೃತ್ತಿ ನಿಷ್ಠೆ.

ಸಂಗೀತ, ನಾಟ್ಯ, ಯಕ್ಷಗಾನ, ಛಾಯಾಚಿತ್ರ, ಕಲೆ ಇತ್ಯಾದಿಗಳ ವಿಮರ್ಶೆ ಕಠಿಣವಾದ ಕೆಲಸ. ಕಲಾಸೃಷ್ಟಿ ತೀರ ಅಮೂರ್ತವೂ ವೈಯಕ್ತಿಕವೂ ಆದ ಆಯ್ಕೆಗಳ ಅನುಭವ. ಇಂಥ ವೈಯಕ್ತಿಕತೆಯ ಕಲಾಸೃಷ್ಟಿಯ ವಿಮರ್ಶೆಯನ್ನು ಪದಗಳಲ್ಲಿ ಹಿಡಿದಿಡುವುದು ಹೇಗೆ ? ರಸಾನುಭೂತಿಯನ್ನು ಬಣ್ಣಿಸುವುದು ಹೇಗೆ ? ಅತಿ ಬೌದ್ಧಿಕತೆ ಹಾಗೂ ಅತಿಭಾವುಕತೆಯ ಜಾರುದಾರಿಯಲ್ಲಿ ಹೊರಳಾಡದೆ 'ಮಾನಸಿಕ ದೂರ'ವನ್ನು ಕಾಪಾಡಿಕೊಂಡು ತನಗಾದ ರಸಾನುಭವವನ್ನು ಇತರರಿಗೆ ದಾಟಿಸುವುದು ಸಂಪಾದಕರಿಗೆ ಸವಾಲಿನ ಕೆಲಸ. ಕಲೆಯ ಸೂಕ್ಷ್ಮ ವಿಚಾರಗಳಿಗೆ ವಿಶೇಷ ಗಮನಹರಿಸಿದರೆ ತಾಂತ್ರಿಕ ವಿವರಗಳ ಪೆಡಸಾದ ವಿಮರ್ಶೆ ಮೂಡೀತು. ಕಲೆಯ 'ಮಾಂತ್ರಿಕತೆ'ಗೆ ಮರುಳಾದರೆ ಅನ್ನಿಸಿಕೆ-ಅಭಿಪ್ರಾಯಗಳ ಮಟ್ಟದಲ್ಲೇ ವಿಮರ್ಶೆ ಉಳಿದೀತು. 'ತಾಂತ್ರಿಕತೆ' ಹಾಗೂ 'ಮಾಂತ್ರಿಕತೆ' ಎರಡನ್ನೂ ಬೆಸೆಯುವ, 'ಬುದ್ಧಿಭಾವ'ಗಳನ್ನು ಸಮ್ಮಿಲನಗೊಳಿಸುವ ಅಪೂರ್ವವಾದ ವಿಮರ್ಶೆ ಈಶ್ವರಯ್ಯನವರಿಂದ ಹೊರಹೊಮ್ಮಿತು. ಸಂಶೋಧಕನೂ ಪ್ರೌಢ ಕಲಾರಸಿಕನೂ ಕಾಲೇಜು ವಿದ್ಯಾರ್ಥಿಯೂ – ಹೀಗೆ ಬಹುಮಂದಿ ಅರ್ಥಮಾಡಿಕೊಳ್ಳಬಹುದಾದ ತಿಳಿಯಾದ ಭಾಷೆಯಲ್ಲಿ, ಪಾರಿಭಾಷಿಕ ಪದಗಳ ಮಿತವಾದ ಬಳಕೆಯಲ್ಲಿ ಅವರ ಕಲಾವಿಮರ್ಶೆ ಹದವಾಗಿ, ಪಕ್ವವಾಗಿ ಬೆಳೆಯಿತು.

ಈಶ್ವರಯ್ಯನವರು ಕಲಾವಿಮರ್ಶೆಗಾಗಿ ಹೊಸ ಹೊಸ ಲೇಖಕರನ್ನು ಶೋಧಿಸಿದರು. ಪ್ರೊ|| ಅರವಿಂದ ಹೆಬ್ಬಾರ್, ಶ್ರೀಮತಿ ಪ್ರತಿಭಾ ಸಾಮಗ, ಶ್ರೀಮತಿ ಸರೋಜಾ ಆಚಾರ್ಯ ಮುಂತಾದವರು ಕರ್ನಾಟಕ ಸಂಗೀತ ಹಾಗೂ ಭರತನಾಟ್ಯದ ಉತ್ತಮ ಲೇಖನಗಳನ್ನು ಬರೆಯಲು ಸಾಧ್ಯವಾದುದು ಈಶ್ವರಯ್ಯನವರಿಂದಾಗಿ.

ಯಕ್ಷಗಾನ ಕಲೆ ಒಂದು ಗಂಭೀರ ಅಧ್ಯಯನ ವಸ್ತುವಲ್ಲ; ಸಾಮಾನ್ಯ ಜನಪದಕಲೆ ಎಂಬ ನಂಬಿಕೆ ಪ್ರಚಲಿತದಲ್ಲಿದ್ದ ಕಾಲದಲ್ಲಿ ಯಕ್ಷಗಾನದ ಸರ್ವಾಂಗ ಸೌಂದರ್ಯದ ಬಗ್ಗೆ, ಪ್ರಸಂಗ ಸಾಹಿತ್ಯದ ಬಗ್ಗೆ, ಕಥಾವಸ್ತು ಹಾಗೂ ಸಂದೇಶದ ಬಗ್ಗೆ, ಪಾತ್ರ ಚಿತ್ರಣ ಮತ್ತು ಔಚಿತ್ಯದ ಬಗ್ಗೆ, ಯಕ್ಷಗಾನ ಪ್ರದರ್ಶನ - ಪ್ರಯೋಗ, ಆಧುನಿಕತೆ ಹಾಗೂ ಸಾಂಪ್ರದಾಯಿಕತೆ ಬಗ್ಗೆ, ಯಕ್ಷಗಾನ ಕಲಾವಿದರ ಬಗ್ಗೆ ಸತತವಾಗಿ ಮೂರು ದಶಕಗಳ ಕಾಲ ಉದಯವಾಣಿಯ ಪುಟಗಳಲ್ಲಿ 'ವಾದ-ವಾಗ್ವಾದ'ಗಳನ್ನು ಈಶ್ವರಯ್ಯ ಹುಟ್ಟುಹಾಕಿದರು. 'ಗುಪ್ತನಾಮ'ಗಳಲ್ಲಿ ಸ್ವತಃ ಬರೆದರು. ಡಾ|| ಎಂ. ಪ್ರಭಾಕರ ಜೋಶಿ, ಡಾ|| ರಾಘವ ನಂಬಿಯಾರ್, ಅಜಕಾರು ನಾಗರಾಜ ಶಾಸ್ತ್ರಿ, ಕೊರ್ಗಿ ವೆಂಕಟೇಶ ಉಪಾಧ್ಯ, ಕುಮಾರಸ್ವಾಮಿ, ಶ್ರೀಧರ ಹಂದೆ ಮೊದಲಾದವರು ಈಶ್ವರಯ್ಯನವರು ಕೊಟ್ಟ ಪ್ರೋತ್ಸಾಹದಿಂದಾಗಿ ಪ್ರಮುಖ ವಿಮರ್ಶಕರಾಗಿ ಮೂಡಿಬಂದರು, ಯಕ್ಷಗಾನ ಕಲೆಯ ಬೆಲೆ ಕಟ್ಟುವುದಕ್ಕೆ ಉದಯವಾಣಿಯ ಮೂಲಕ ವಿಮರ್ಶೆಯ ಮಾನದಂಡಗಳು ಸೃಷ್ಟಿಯಾಗುವುದಕ್ಕೆ ಕಾರಣೀಭೂತರಾದರು. ಜನ ಜೀವನದಿಂದ ಹೊರಹೊಮ್ಮಿದ ಈ ಕಲಾಪ್ರಕಾರದ ಬಗ್ಗೆ ಸಾಮಾನ್ಯ ಪ್ರೇಕ್ಷಕರೂ ಪತ್ರಿಕೆಯ ಅಂಕಣಗಳಲ್ಲಿ ನಡೆಯುವ ಚರ್ಚೆಗಳಲ್ಲಿ ಭಾಗಿಯಾಗುವುದಕ್ಕೆ ಅವಕಾಶ ಕಲ್ಪಿಸಿ 'ವಿಮರ್ಶೆಯ ಪ್ರಜಾಪ್ರಭುತ್ವೀಕರಣ'ವನ್ನು ಸಾಧ್ಯವಾಗಿಸಿದ್ದು ಈಶ್ವರಯ್ಯನವರು ಮಾಡಿದ ಹಿರಿದಾದ ಕಲಾ ಸೇವೆ. ವಾಗ್ವಾದಗಳ ಮೂಲಕವೇ ಜನರ ಕಲಾವಂತಿಕೆ ರೂಪುಗೊಳ್ಳಬೇಕು, ಕಲಾಪ್ರಜ್ಞೆಯ ಮಟ್ಟ ಉನ್ನತವಾಗಬೇಕು ಎಂಬ ಕಳಕಳಿ ಅವರ ಈ ಎಲ್ಲ ಪ್ರಯತ್ನಗಳಲ್ಲಿದೆ.

ಕಲಾವಿದ-ವಿಮರ್ಶಕ-ಸಹೃದಯ – ಈ ಮೂವರ 'ತ್ರಿವೇಣಿ ಸಂಗಮ'ವಾಗಬೇಕು ಎಂಬುದು ಈಶ್ವರಯ್ಯನವರ ಧೋರಣೆ. ಈ ಮೂವರ ನಡುವಿನ ಸಂಬಂಧ ತೀರ ಜಟಿಲ ಮತ್ತು ಸಂಕೀರ್ಣ. ಇಂದು ಕಲಾರಂಗದಲ್ಲಿ ಕಲಾವಿದ ಹಾಗೂ ವಿಮರ್ಶಕರ 'ಯಾಜಮಾನ್ಯ'ವಿದೆ. ''ನಾವೇರುವೆತ್ತರಕೆ ನೀನೇರಬಲ್ಲೆಯಾ ?'' ''ನನ್ನ ಕಲಾಸೃಷ್ಟಿ ದೈವೀಕೃಪೆಯ ಪರಿಪಾಕ. ಅದನ್ನು ವಿಮರ್ಶಿಸುವ ಯೋಗ್ಯತೆ, ಅರ್ಹತೆ ನಿನಗೆಲ್ಲಿಯದು ? ''ಅಲ್ಪ ಚೇತನ'ವಾದ ನಿನಗೆ ನನ್ನ ಕೃತಿ ಹೇಗೆ ತಾನೇ ಅರ್ಥವಾದೀತು'' – ಎಂಬ ಹಮ್ಮು ಕಲಾವಿದನದ್ದಾದರೆ ಯಾವುದೇ ಕಲಾವಿದನನ್ನು ಕೀರ್ತಿ ಶಿಖರಕ್ಕೇರಿಸುವ ಅಥವಾ ಅಪಕೀರ್ತಿಯ ಪಾತಾಳಕ್ಕಿಳಿಸುವ ಶಕ್ತಿ ತನ್ನದು ಎಂಬ ದರ್ಪ ವಿಮರ್ಶಕನದ್ದು. ಆದರೆ ಯಾವುದೇ ಒಂದು ಕಲೆಯನ್ನು ಕಾಣುವ ಕಣ್ಣು ಹೇಗಿರಬೇಕು ? ಕೇಳುವ ಕಿವಿ ಹೇಗಿರಬೇಕು ? ಕಲೆಯನ್ನು ಅನುಭವಿಸುವ, ಆಸ್ವಾದಿಸುವ ಬಗೆ ಹೇಗೆ ? ಪ್ರಯೋಗದ ಹಿನ್ನೆಲೆ ಏನು ? ಬದಲಾದ ಕಾಲಘಟ್ಟದಲ್ಲಿ ಬದಲಾಗುವ ಕಲಾಪ್ರಕಾರಗಳ ಆಶಯಗಳನ್ನು ಅರಿಯುವ ಮತ್ತು ಅವುಗಳಿಗೆ ಸ್ಪಂದಿಸುವ ಬಗೆ ಹೇಗೆ ? – ಸಹೃದಯನ ಪಾಲಿಗೆ ಇದೆಲ್ಲ 'ವಿಪಿನ ಸಂಚಾರ'.

**ಬೆಲೆ**

ದೇವ ಮಂದಿರದ ಹೊರಗಿನ
ಪೂಜಾ ಪಟ್ಟಿಯ ದರಗಳೆ
ಹೇಳುತ್ತಿವೆ
ದೇವರ ಬೆಲೆ

**ರವಿಶಂಕರ ಒಡ್ಡಂಬೆಟ್ಟು**
ಮಂಗಳೂರು - ೧೫

ಕಲೆ ತೀರ ವೈಯಕ್ತಿಕವಾದಾಗ ಜನರಿಂದ ದೂರವಾಗುತ್ತದೆ, ತೀರ ಸಾಮಾಜಿಕವಾದಾಗ ಸಂತೆಯಲ್ಲಿ ಕಳೆದುಹೋಗುತ್ತದೆ, ಸಂವೇದನಾ ಶೂನ್ಯವಾಗುತ್ತದೆ. ಕಲೆಯಲ್ಲಿ ವೈಯಕ್ತಿಕತೆ ಹಾಗೂ ಸಾಮಾಜಿಕತೆ ಎರಡೂ ಸಮರಸವಾಗಿ ಬೆರೆಯಬೇಕು. ಈ ಕ್ರಿಯೆ ಕಲಾವಿದ ಹಾಗೂ ವಿಮರ್ಶಕ ಇಬ್ಬರಿಂದಲೂ ಸಾಧ್ಯವಾಗಬೇಕು. ವಿಮರ್ಶಕನ ಟೀಕೆಗಳನ್ನು ಕಲಾವಿದ ಸಹೃದಯತೆಯಿಂದ ಸ್ವೀಕರಿಸಬೇಕು. ವಿಮರ್ಶಕ ವಿನಯವಂತನಿರಬೇಕು. ಸಹೃದಯನಿಗೆ ಕಲಾಸೃಷ್ಟಿಯನ್ನು ಅನುಭವಿಸುವ ಸಂಸ್ಕಾರ, ಸಿದ್ಧತೆ ಬೇಕು. ಈ ಸತ್ಯವನ್ನು ಅರಿತ ಈಶ್ವರಯ್ಯ ಕಲೆಗಾರ-ಸಹೃದಯ ಹಾಗೂ ವಿಮರ್ಶಕ – ಈ ಮೂವರನ್ನು ಒಂದೇ ಪಾತಳಿಯಲ್ಲಿ ಸ್ಥಾಪಿಸುವ ಪ್ರಯತ್ನಗಳನ್ನು ತಮ್ಮ ಭಾಷಣ ಹಾಗೂ ಬರವಣಿಗೆಗಳ ಮೂಲಕ ಮಾಡುತ್ತಲೇ ಬಂದವರು. ಸಂಗೀತ ರಸಗ್ರಹಣ ಶಿಬಿರ, ಚಿತ್ರಕಲಾ ರಸಗ್ರಹಣ ಶಿಬಿರ ಹಾಗೂ ಛಾಯಾಚಿತ್ರ ರಸಗ್ರಹಣ ಶಿಬಿರಗಳ ಮೂಲಕ ಸಹೃದಯನನ್ನು ಸಿದ್ಧಗೊಳಿಸಿ ಉನ್ನತ ಪಾತಳಿಗೆ ಒಯ್ಯುವ ಪ್ರಯತ್ನವನ್ನು ವ್ರತದಂತೆ ಮಾಡುತ್ತ ಬಂದವರು.

ಕಲೆಯು ಇಂದಿನ ವಿದ್ಯುನ್ಮಾನ ಮಾಧ್ಯಮಗಳ ಸ್ಪರ್ಧಾತ್ಮಕ ಭರಾಟೆಯಲ್ಲಿ ರಿಯಾಲಿಟಿ ಶೋಗಳಲ್ಲಿ ನಲುಗಿದೆ. ಅದು ಮಾರಾಟದ ವಸ್ತುವಾಗಿದೆ; ವ್ಯಾಪಾರಿ ಸರಕು ಆಗಿದೆ. ಪ್ರದರ್ಶನದ ಮಾಲು ಆಗಿದೆ. ಸುಲಭ ಸಿದ್ಧಿ ಪ್ರಸಿದ್ಧಿಯ ಸಾಧನವಾಗಿಬಿಟ್ಟಿದೆ. ಇಂದಿನ ತರುಣ ಜನಾಂಗದವರು ಹಣ ಹಾಗೂ ಪ್ರಸಿದ್ಧಿಯತ್ತ ಹೆಚ್ಚು ಹೆಚ್ಚು ಮುಖ ಮಾಡುತ್ತಿದ್ದಾರೆ. ಆದರೆ ಈಶ್ವರಯ್ಯನವರು ನಂಬಿದ ಕಲಾ ಸಿದ್ಧಾಂತವೆಂದರೆ - ಕಲೆ ಇರುವುದು ಅಭಿವ್ಯಕ್ತಿಗಾಗಿ, ರಸಾಭಿವ್ಯಕ್ತಿಗಾಗಿ ರಸಾನಂದಕ್ಕಾಗಿ. ಕಲಾಸಂಸ್ಕಾರದ ಮುಖೇನ ಜೀವನದ ಕ್ಷುದ್ರತೆಗಳಿಂದ 'ಮಹತಿ'ಯ ಕಡೆಗೆ ಸಾಗುವುದಕ್ಕಾಗಿ. 'ಭಾವವಿಮಾನ'ವೇರಿ 'ಆನಂದ ಘನ'ವನ್ನು ಸಾಧಿಸುವುದಕ್ಕಾಗಿ. ಕಳೆದ ನಾಲ್ಕು ದಶಕಗಳಲ್ಲಿ ಈಶ್ವರಯ್ಯನವರು ನಿತ್ಯವೂ ಇದನ್ನೇ ವಿವಿಧ ವೇದಿಕೆಗಳಿಂದ ಪ್ರತಿಪಾದಿಸುತ್ತಾ ಬಂದಿದ್ದಾರೆ. ದಿಕ್ಕು ತಪ್ಪುತ್ತಿರುವ ಎಳೆಯರನ್ನು ಮತ್ತೆ ಮತ್ತೆ ಎಚ್ಚರಿಸುತ್ತಲೇ ಇದ್ದಾರೆ.

ಈಶ್ವರಯ್ಯನವರ ಬಲು ದೊಡ್ಡ ಗುಣ 'ಸಾಂಸ್ಕೃತಿಕ ಸಹಿಷ್ಣುತೆ'. ನವ್ಯಸಾಹಿತ್ಯದ ಹಿನ್ನೆಲೆಯಿಂದ ಬಂದ ಅವರು ಪತ್ರಿಕಾ ಸಂಪಾದಕರಾದ ಕಾರಣ ಹಾಗೂ ಮೂಲ ಪ್ರವೃತ್ತಿಯ ದೆಸೆಯಿಂದಾಗಿ ಹಲವಾರು ಬಗೆಯ ಆಸಕ್ತಿಗಳನ್ನು ಬೆಳೆಸಿಕೊಂಡು ಯಾವುದೇ ಒಂದು ಪಂಥದ ಬಗೆಗೆ ವಿಶೇಷ ಒಲುಮೆ ತೋರದೆ ಸಕಲವನ್ನೂ 'ಒಳಗೊಳ್ಳುವ' ಪ್ರಯತ್ನ ಮಾಡಿದವರು. ತಮ್ಮ ವೈಯಕ್ತಿಕ ಅಭಿಪ್ರಾಯಗಳಿಗೆ ವ್ಯತಿರಿಕ್ತವಾದ ವಿಚಾರಗಳಿಗೂ ಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿದವರು. 'ಆಧುನಿಕ ಪ್ರಯೋಗ ಪ್ರಿಯತೆ' ಹಾಗೂ 'ಸಾಂಪ್ರದಾಯಿಕ ಸಭ್ಯತೆ' ಎರಡನ್ನೂ ಮೈಗೂಡಿಸಿಕೊಂಡವರು. ಅವರಿಗೆ ಶಾಸ್ತ್ರೀಯ ಸಂಗೀತ, ಲಘು ಸಂಗೀತ, ಯಕ್ಷ ಸಂಗೀತ, ಸಿನಿಮಾ ಸಂಗೀತ-ಸಾಂಪ್ರದಾಯಿಕ ಚಿತ್ರಕಲೆ, ನವ್ಯ, ಚಿಕಣಿ – ಇತ್ಯಾದಿ ಪರಿಭೇದಗಳಿಲ್ಲ. ಸಿನಿಮಾ ಸಂಗೀತ ಕ್ಷುಲ್ಲಕ ಎಂದು ಅವರು ಜರೆಯುವುದಿಲ್ಲ. ಕಾರಂತರ ಯಕ್ಷಗಾನ ಖ್ಯಾತಿ ಪ್ರಯೋಗವನ್ನು, ಬಿ. ವಿ. ಕಾರಂತರ ರಂಗಸಂಗೀತದ ಕಲ್ಪನೆಯನ್ನು ಮೆಚ್ಚಿಕೊಳ್ಳುತ್ತ ಅವುಗಳ ಮಿತಿಗಳನ್ನು ಅವರು ತೋರಿಸಬಲ್ಲರು. ಅವರ ಈ ಸಾಕಲ್ಯ ದೃಷ್ಟಿ, ಸಮನ್ವಯ ಭಾವ, ಸಹಿಷ್ಣುತೆ ಇಂದು ತುಂಬ ಅಗತ್ಯವಾಗಿದೆ.

ಕರ್ನಾಟಕದಲ್ಲಿ ಒಂದೊಂದು ಕಲೆಯ ಬಗ್ಗೆಯೂ ಪಾಂಡಿತ್ಯಪೂರ್ಣ ವಿಮರ್ಶೆ ಬರೆಯುವವರಿರಬಹುದು. ಆದರೆ ಚಿತ್ರಕಲೆ, ಸಂಗೀತ, ನಾಟ್ಯ, ಸಾಹಿತ್ಯ, ಛಾಯಾಚಿತ್ರ ಮುಂತಾದ ಹಲವು ಕಲೆಗಳ ಬಗ್ಗೆ ಸಮಾನವಾದ ಸಿದ್ಧಿಯೊಂದಿಗೆ ಬರೆದ ಕಲಾವಿಮರ್ಶಕರು ವಿರಳ. ಕನ್ನಡದಲ್ಲಿ ಎಷ್ಟು ಪ್ರೌಢಿಮೆಯಿಂದ ಈಶ್ವರಯ್ಯ ಲೇಖನಗಳನ್ನು ಬರೆದಿದ್ದಾರೋ ಅಷ್ಟೇ ಪ್ರೌಢಿಮೆಯಿಂದ ಇಂಗ್ಲಿಷ್‌ನಲ್ಲೂ ಕೆಲವು ಲೇಖನಗಳನ್ನು ಬರೆದಿದ್ದಾರೆ. ಈ ಜಾಡನ್ನು ಅನುಸರಿಸಿ ಮುಂದುವರಿದಿದ್ದರೆ ಪ್ರಾಯಃ ಇಂದು ಈಶ್ವರಯ್ಯನವರು ಭಾರತೀಯ ಸಮಕಾಲೀನ ಕಲಾವಿಮರ್ಶಕರೆಂಬ ಮನ್ನಣೆಗೆ ಪಾತ್ರರಾಗುತ್ತಿದ್ದರು. ಆದರೆ ತಾವು ನೆಲೆ ನಿಂತಿರುವಲ್ಲೇ 'ತೃಪ್ತಿ' ಹಾಗೂ 'ನೆಮ್ಮದಿ' ಕಾಣುವ ಜಾಯಮಾನ ಅವರದ್ದು. ತಮ್ಮ ಕತೆಗಳ, ಕಲಾವಿಮರ್ಶಾ ಲೇಖನಗಳ, ಕಲಾವಿದರ ಸಂದರ್ಶನಗಳ ಸಂಕಲನಗಳನ್ನು ಪ್ರಕಟಿಸಲು ನಿರಾಸಕ್ತರಾಗಿರುವ ಈಶ್ವರಯ್ಯನವರು ಹಾಕಿಕೊಟ್ಟಿರುವ ಉದಾರವಾದಿ ಪ್ರಜಾಪ್ರಭುತ್ವವಾದಿ ರಸೈಕದೃಷ್ಟಿಯ ವಿಮರ್ಶಾ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿ ನಮ್ಮ ಮೇಲಿದೆ.

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೨



# 'ಜಂಗಲ್‌ನಾಮಾ'



ಮೂಲ : ಸತ್ನಾಮ್
ಕನ್ನಡಕ್ಕೆ : **ಕುಮಾರ್ ಬುರಡಿಕಟ್ಟಿ**
**ಚಾರು ಪ್ರಕಾಶನ**
ನಂ. ೯, ಲಂಕೇಶ್ ಕಟ್ಟಡ, ಇ.ಎ.ಟಿ.ರಸ್ತೆ
ಬಸವನಗುಡಿ, ಬೆಂಗಳೂರು - ೪
ಪುಟಗಳು : ೨೭೨
ಬೆಲೆ : ರೂ. ೧೭೫

**ಮಾ**ವೋವಾದಿಗಳು, ನಕ್ಸಲೀಯರು ಮುಂತಾದ ಪದಗಳನ್ನು ಕೇಳಿದಾಕ್ಷಣ ನಮ್ಮಲ್ಲಿ ಮೂಡುವುದು ಅವರ ಹಾಗೂ ವಿವಿಧ ರಾಜ್ಯಗಳ ಪೊಲೀಸರ ನಡುವಿನ ಘರ್ಷಣೆಗಳು, ''ಎನ್‌ಕೌಂಟರ್''ಗಳು, ಮಾಹಿತಿದಾರರ ಕೊಲೆಗಳು, ಸಾರ್ವಜನಿಕ ಮತ್ತು ಖಾಸಗಿ ಆಸ್ತಿಗಳ ನಾಶ ಮುಂತಾದ ಚಿತ್ರಗಳು. ನಮ್ಮ ಮಾಧ್ಯಮಗಳು ಈ ಚಿತ್ರಗಳನ್ನು ಪ್ರಚಾರ ಮಾಡುವಲ್ಲಿ ಮತ್ತು ಅವು ಜನಮಾನಸದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವಲ್ಲಿ ಸಾಕಷ್ಟು ಯಶಸ್ವಿಯಾಗಿವೆಯೆಂದೇ ಹೇಳಬೇಕು. ನಕ್ಸಲೀಯರ ಪ್ರಭಾವವಿರುವ ಪ್ರದೇಶಗಳನ್ನು 'ನಕ್ಸಲ್ ಪೀಡಿತ' ಎಂದು ಕನ್ನಡದಲ್ಲಿಯೋ, 'ನಕ್ಸಲ್ ಇನ್‌ಫೆಸ್ಟೆಡ್' ಎಂದು ಇಂಗ್ಲಿಷಿನಲ್ಲಿಯೋ ಕರೆದು, ಇಂಥ ಭಾಷೆಯ ಮೂಲಕವೇ ನಕ್ಸಲ್‌ವಾದ ಎಂದರೆ ಅದೊಂದು 'ಪೀಡೆ', ಒಂದು ಸಮಸ್ಯೆ ಎಂಬ ಭಾವನೆಯನ್ನು ಹುಟ್ಟುಹಾಕಿ ಅದನ್ನು ಗಟ್ಟಿಗೊಳಿಸಿವೆ. ಸರ್ಕಾರಗಳೂ ಸಹ ಇದೇ ತಂತ್ರವನ್ನು ಬಳಸುವುದನ್ನು ಕಾಣಬಹುದು.

ಆದರೆ ಕೆಲವು ಬಾರಿಯಾದರೂ ಸರ್ಕಾರಗಳು ಮತ್ತು ಮಾಧ್ಯಮಗಳು ನಕ್ಸಲ್‌ವಾದ ಕೇವಲ ಕಾನೂನು ವ್ಯವಸ್ಥೆಯಲ್ಲ; ಬದಲು, ಅದೊಂದು ಆರ್ಥಿಕ, ರಾಜಕೀಯ ಕಾರಣಗಳಿಂದಾಗಿ ರೂಪುತಳೆದಿರುವ ಚಳುವಳಿ ಎಂದೂ ಹೇಳುತ್ತವೆ. ಇಂಥ ಸಂದರ್ಭದಲ್ಲಿ ನಕ್ಸಲ್ ಪ್ರಭಾವದಿಂದ ದೂರವಿರುವ ಪ್ರದೇಶಗಳ ಜನರನ್ನು ಚಳುವಳಿಯ ಬಗ್ಗೆಯೇ ಹಲವು ಪ್ರಶ್ನೆಗಳು, ಅನುಮಾನಗಳು ಕಾಡುವುದು ಸಹಜ. ೧೯೯೧ರಿಂದೀಚೆಗಿನ ಬೆಳವಣಿಗೆಗಳಿಂದಾಗಿ ವೈಯಕ್ತಿಕತೆಯೇ ವಿಜೃಂಭಿಸಿ ಇಂಥ ಚಳುವಳಿಗಳಿಗೆ ತಮ್ಮನ್ನು ತಾವು ಸಂಪೂರ್ಣವಾಗಿ ಸಮರ್ಪಿಸಿಕೊಂಡವರನ್ನು ಅನುಮಾನದಿಂದ ನೋಡುವುದು, ಅಥವಾ ಅಂಥವರನ್ನು 'ದಾರಿ ತಪ್ಪಿದ ಯುವಜನತೆ' ಎಂದು ಜರೆಯುವುದೂ ರೂಢಿಗೆ ಬಂದಿದೆ. ಸಾಮಾಜಿಕ ಕ್ರಾಂತಿಯನ್ನು ಬಯಸುವವರು ಸಮಾಜದಿಂದ ದೂರ, ಎಲ್ಲೋ ಕಾಡುಗಳಲ್ಲಿ ಅವಿತುಕೊಂಡಿರುವುದೇಕೆ, ಆಚೆಗೆ ಬಂದು 'ಮುಖ್ಯವಾಹಿನಿ'ಯಲ್ಲಿ ಒಂದಾಗಿ ಜನರ ಒಳಿತಿಗಾಗಿ ಪ್ರಯತ್ನಿಸಬಾರದೇಕೆ, ಎಂಬ ಪ್ರಶ್ನೆಗಳೂ ಕೇಳಿಬರುತ್ತಿವೆ. ಇದರ ಜತೆಗೆ ಈ ಚಳುವಳಿಯನ್ನು ಕೇವಲ ಹಿಂಸೆ-ಅಹಿಂಸೆಗಳ ನಡುವಿನ ಚರ್ಚೆಯ ಮಟ್ಟಕ್ಕೆ ಇಳಿಸುವ ಯತ್ನಗಳೂ ನಡೆದಿವೆ. ಇವೆಲ್ಲದರ ಜತೆಗೆ ಇತ್ತೀಚಿನ ದಿನಗಳಲ್ಲಿ ಈ ದೇಶದ ಪ್ರಧಾನ ಮಂತ್ರಿಯವರು ನಕ್ಸಲ್ ಚಳುವಳಿಯನ್ನು ದೇಶದ ಭದ್ರತೆಗೆ ಒದಗಿರುವ ಭಯಂಕರ ಗಂಡಾಂತರವೆಂದು ಕರೆದಿರುವುದೂ ನಮ್ಮ ಚಿಂತನೆಗಳನ್ನು ಪ್ರಭಾವಿಸುತ್ತದೆ ಎಂಬುದನ್ನು ಮರೆಯಲಾಗದು. ಮತ್ತು ನಕ್ಸಲೀಯರು ನಡೆಸುವ ಹಿಂಸಾಕೃತ್ಯಗಳೂ ಸಹ ಸಮಾಜವನ್ನು ಗೊಂದಲಕ್ಕೀಡುಮಾಡಿರುವುದೂ ವಾಸ್ತವವೇ.

ಮೇಲಿನ ಪ್ರಶ್ನೆಗಳಿಗೆ, ಅನುಮಾನಗಳಿಗೆ ಉತ್ತರಗಳನ್ನು ನಮ್ಮ ನಡುವೆಯೇ, ಮಾಧ್ಯಮಗಳಿಂದ ಅಥವಾ ಸರ್ಕಾರಗಳ ಹೇಳಿಕೆಗಳಿಂದ ಕಂಡುಕೊಳ್ಳುವುದಾಗದು. ಆ ಚಳುವಳಿಯನ್ನು ಹತ್ತಿರದಿಂದ ಗಮನಿಸಿದಾಗ ಮಾತ್ರ ಇಂಥ ಪ್ರಶ್ನೆಗಳಿಗೆ ಉತ್ತರ ಸಿಗಬಹುದೇನೋ! ಹೀಗೆ ನಮಗೆ ಸಿಗಬಹುದಾದ ಉತ್ತರಗಳೂ ನಮಗೆ ಪೂರ್ತಿಯಾಗಿ ಒಪ್ಪಿಗೆಯಾಗಬೇಕೆಂದೇನೂ ಇಲ್ಲ. ಅವರ ಎಲ್ಲ ಚಟುವಟಿಕೆಗಳ ಬಗ್ಗೆ ತಿಳಿದ ನಂತರವೂ, ಮಾಧ್ಯಮಗಳು ವರದಿ ಮಾಡುವ ಅವರ 'ವಿಧ್ವಂಸಕ' ಕೃತ್ಯಗಳು, 'ಅಟ್ಟಹಾಸಗಳು' ನಮ್ಮನ್ನು ಆಘಾತಕ್ಕೀಡುಮಾಡುತ್ತಲೇ ಇರುತ್ತವೆ.

ಸತ್ನಾಮ್ ಅವರು ಪಂಜಾಬಿ ಲೇಖಕ ಹಾಗೂ ಸಾಮಾಜಿಕ ಕಾರ್ಯಕರ್ತ. ರಾಷ್ಟ್ರೀಯ, ಅಂತರರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ಅವರು ಬರೆದಿರುವ ಹಲವಾರು ಲೇಖನಗಳು ಪ್ರಕಟವಾಗಿವೆ. ೨೦೦೨ರಲ್ಲಿ ಮಧ್ಯಭಾರತದ ಬಸ್ತರಿನ ಕಾಡುಗಳಲ್ಲಿ ಎರಡು ತಿಂಗಳುಗಳ ಕಾಲ ಮಾವೋವಾದಿಗಳ ಜತೆ, ಕಾಡಿನಲ್ಲಿ ಆದಿವಾಸಿ ಹಳ್ಳಿಗಳಲ್ಲಿ, ಅವರಂತೆಯೇ ಜೀವನ ನಡೆಸಿ, ಮಾವೋವಾದಿಗಳನ್ನು ಮತ್ತು ಅವರಿಗೆ ನೆರವು, ನೆರಳು ನೀಡುವ ಆದಿವಾಸಿಗಳ ಜೀವನವನ್ನು ಹತ್ತಿರದಿಂದ ಗಮನಿಸಿ ತಮ್ಮ ಅನುಭವಗಳನ್ನು ಪಂಜಾಬಿ ಭಾಷೆಯಲ್ಲಿ ೨೦೦೩ರ ಅಕ್ಟೋಬರ್‌ನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ದೆಹಲಿಯ ಪತ್ರಕರ್ತರಾದ ವಿಶ್ವಭಾರತಿಯವರು ಈ ಪುಸ್ತಕವನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದ್ದನ್ನು ೨೦೧೦ರಲ್ಲಿ ಪೆಂಗ್ವಿನ್ ಪ್ರಕಾಶನ ಸಂಸ್ಥೆ ಪ್ರಕಟಿಸಿದೆ. ಇಂಗ್ಲಿಷ್ ಆವೃತ್ತಿಗೆ ತೆಲುಗಿನ ಕ್ರಾಂತಿಕಾರಿ ಕವಿ ವರವರರಾವ್ ಬೆನ್ನುಡಿ ಬರೆದಿದ್ದಾರೆ.

ಸತ್ನಾಮ್ ಅವರೇ ಹೇಳುವಂತೆ, 'ಜಂಗಲ್‌ನಾಮಾ: ಟ್ರಾವೆಲ್ಸ್ ಇನ್ ಎ ಮಾವೋಯಿಸ್ಟ್ ಗೆರಿಲ್ಲಾ ಜೋನ್' ಕೃತಿಯನ್ನು ಒಂದು ದಿನಚರಿ ಅಥವಾ ಪ್ರವಾಸಕಥನ ಎಂದು ಕರೆಯಬಹುದು. ಮಾವೋವಾದಿಗಳ ಹಾಗೂ ಆದಿವಾಸಿಗಳ ದೈನಂದಿನ ಜೀವನವನ್ನು, ಗೆರಿಲ್ಲಾ ಜೋನ್‌ನಲ್ಲಿ ಅವರು ಸಾಧಿಸಲು ಸಾಧ್ಯವಾಗಿರುವ ''ಅಭಿವೃದ್ಧಿ''ಯ ಚಿತ್ರಣವನ್ನೂ ಈ ಪುಸ್ತಕ ನೀಡುತ್ತದೆ. ಇದರಲ್ಲಿನ ಪಾತ್ರಗಳು ಕಲ್ಪಿತವಾದುವಲ್ಲ, ಅವರ ಹೆಸರುಗಳು ನಿಜವಾದುವಲ್ಲದಿರಬಹುದು. ಅವರು ಈ ಚಳುವಳಿಯ ಭಾಗವಾಗುವ ಮೊದಲೇ ತಮ್ಮ ಹೆಸರನ್ನು ಮತ್ತು ಅದಕ್ಕೆ ಲಗತ್ತಾದ ತಮ್ಮೆಲ್ಲ ಐಡೆಂಟಿಟಿಗಳನ್ನು ಕಡಿದುಹಾಕಿಕೊಂಡಿರುತ್ತಾರೆ. ಆದ್ದರಿಂದ ಅವರ ಹೆಸರು ಅಷ್ಟು ಮುಖ್ಯವಾಗುವುದಿಲ್ಲ. ''ತಮ್ಮ ಆಶಯ-ಸಾಧನೆಗಳಿಗಾಗಿ ಪ್ರಾಣವೂ ಸೇರಿದಂತೆ ತಮ್ಮೆಲ್ಲ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧವಾಗಿರುತ್ತಾರೆ. ವ್ಯವಸ್ಥೆಯಿಂದ ಬಹಿಷ್ಕೃತರಾಗಿ ದಂಗೆಕೋರರೆಂಬ ಹಣೆಪಟ್ಟಿ ಹೊಂದಿರುವ ಅವರು ಹೊಸ ಜಗತ್ತಿನ ಬಗೆಗಿನ ತಮ್ಮ ಕನಸನ್ನು ವಾಸ್ತವವನ್ನಾಗಿಸಲು ಬಯಸುತ್ತಾರೆ'' ಎಂದು ಸತ್ನಾಮ್ ಅವರು ಚಳುವಳಿಗಾರರನ್ನು ಕುರಿತು ಹೇಳುತ್ತಾರೆ.

ಅವರ ಈ ಕನಸು ಎಷ್ಟರಮಟ್ಟಿಗೆ ಮತ್ತು ಯಾವಾಗ ನನಸಾಗುವುದೆಂದು ಹೇಳುವುದು ಕಷ್ಟವಾದರೂ ಈ ಪುಸ್ತಕವು ಅವರನ್ನು ಕೇವಲ ಹೋರಾಟಗಾರರನ್ನಾಗಿ ಅಥವಾ ರಕ್ತ ಪಿಪಾಸುಗಳಾಗಿ ಅಲ್ಲದೆ, ಎಲ್ಲರಂತೆಯೇ ಇರುವ ಗಂಡು-ಹೆಣ್ಣುಗಳನ್ನಾಗಿ ಚಿತ್ರಿಸುತ್ತದೆ. ಮಾವೋವಾದಿಗಳು ಹಾಗೂ ಆದಿವಾಸಿಗಳ ನಡುವಿನ ಸಂಬಂಧಗಳು ಮತ್ತು ಸ್ಥಳೀಯರಿಂದ ಚಳುವಳಿಗಾರರಿಗೆ ಸಿಗುತ್ತಿರುವ ಬೆಂಬಲದ ಬಗ್ಗೆಯೂ ಸಾಕಷ್ಟು ವಿವರಗಳು ಸಿಗುತ್ತವೆ. ಆದಿವಾಸಿಗಳ ಸಂಪ್ರದಾಯಗಳು, ಕೆಲವು ಬಾರಿ ಮೌಢ್ಯತೆಯಿಂದ ಕೂಡಿದ ಆಚರಣೆಗಳನ್ನು ನಿಧಾನವಾಗಿಯಾದರೂ ಬದಲಾಯಿಸಲು ಯತ್ನಿಸುತ್ತಿರುವ ಗೆರಿಲ್ಲಾಗಳ ಗೆಲುವು ಮತ್ತು ಸೋಲು – ಈ ಎಲ್ಲವನ್ನೂ ಸತ್ನಾಮ್ ಅವರು ತುಂಬ ಹತ್ತಿರದಿಂದ, ಸಹಾನುಭೂತಿಯಿಂದ ಗಮನಿಸುತ್ತಾರೆ; ತಮ್ಮ ಅನಿಸಿಕೆಗಳನ್ನು ಓದುಗರಿಗೂ ಮನದಟ್ಟಾಗುವಂತೆ (ವಿಶ್ವಭಾರತಿಯವರ ಒಳ್ಳೆಯ ಅನುವಾದದ ಮೂಲಕ) ತಲುಪಿಸುತ್ತಾರೆ.

ಮಾವೋವಾದಿಗಳ ಬಗ್ಗೆ ಹೊರಗಿನ ಸಮಾಜದ ನಿಲುವು ಏನೇ ಇರಲಿ, ಸಾಧಾರಣವಾಗಿ ಅವರ ಬಗೆಗಿನ ಏಕಪಕ್ಷೀಯ ಚಿತ್ರಣವೇ ನಮಗೆ ಲಭ್ಯವಿರುವ ಸಂದರ್ಭದಲ್ಲಿ, ಅವರ ಚಳುವಳಿಯ, ದೈನಂದಿನ ಜೀವನದ ಮತ್ತೊಂದು ಮುಖವನ್ನು ಪರಿಚಯಿಸುವ ''ಜಂಗಲ್‌ನಾಮಾ'' ಆ ಚಳುವಳಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಸ್ವಲ್ಪವಾದರೂ ಸಹಾಯಕವಾಗುತ್ತದೆಂದೇ ಹೇಳಬೇಕು.

ಈಗಾಗಲೇ ಹಲವು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿರುವ ಈ ಪುಸ್ತಕವು ಕನ್ನಡಕ್ಕೂ ತರ್ಜುಮೆಯಾಗಿದೆ. ಶ್ರೀ ಕುಮಾರ್ ಬುರಡಿಕಟ್ಟಿಯವರು 'ಜಂಗಲ್‌ನಾಮಾ' ಎಂಬ ಶೀರ್ಷಿಕೆಯಡಿ ಭಾಷಾಂತರಿಸಿರುವ ಈ ಪುಸ್ತಕವು ಚಾರು ಪ್ರಕಾಶನದಿಂದ ಪ್ರಕಟಿತಗೊಂಡಿದೆ. ಈಗಾಗಲೇ ಶ್ರೀಲಂಕಾ ತಮಿಳರ ಹೋರಾಟದ ಬಗ್ಗೆ 'ಓ ಈಳಂ' ಎಂಬ ಪುಸ್ತಕವನ್ನು ಕನ್ನಡದ ಓದುಗರಿಗೆ ಕೊಟ್ಟು ಶ್ರೀಲಂಕಾದ ತಮಿಳರ ರಾಜಕೀಯ ಹೋರಾಟದ ಬಗ್ಗೆ ವಸ್ತುನಿಷ್ಠ ಚಿತ್ರಣವನ್ನು ನೀಡಿರುವ ಕುಮಾರ್ ಅವರು ತಮ್ಮ ಸಮರ್ಥ ಅನುವಾದದ ಮೂಲಕ ಈ ದೇಶದಲ್ಲಿಯೇ ನಡೆಯುತ್ತಿರುವ ಚಳುವಳಿಯೊಂದರ ಕುರಿತಾದ ಅಧಿಕೃತ ಮಾಹಿತಿಯನ್ನು ಕನ್ನಡಿಗರು ಪಡೆದುಕೊಳ್ಳುವಲ್ಲಿ ನೆರವಾಗಿದ್ದಾರೆ.

**ನಗರಗೆರೆ ರಮೇಶ್**
ನಂ. ೩೬೬, ೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦




ಪಿ. ಬಿ. ಪ್ರಸನ್ನ

ಗುರ್ರಾಜ ಭಟ್ರು ಅಂತ ಹೇಳಿದ್ರೆ ಕೆಮ್ಮೂರ್ತಿನಲ್ಲಿ ಯಾರಿಗೂ ಗೊತ್ತಾಗುದೇ ಇಲ್ಲ. ಎಲ್ರೂ ಅವ್ರನ್ನು 'ಕುಕ್ಕುದ ಭಟ್ರು' ಅಥವಾ 'ಗಾಂಧಿ ಭಟ್ರು' ಅಂತನೇ ಕರಿಯುದು.

ಗುರ್ರಾಜ ಭಟ್ರು ಕೆಮ್ಮೂರ್ತಿನಲ್ಲಿ ತುಂಬ ವರ್ಷಗಳ ಹಿಂದೆ ಒಂದು ಮನೆ ತಕ್ಕೊಂಡ್ರು. ಅದ್ರ ತೋಟದಲ್ಲಿ ಒಂದು ಹಳೆಯ ಮುಂಡಪ್ಪ ಮಾವಿನ ಮರ ಇತ್ತು. ಗುರ್ರಾಜ ಭಟ್ರು ಬಂದ ಹೊಸದ್ರಲ್ಲಿ ಎಲ್ರೂ ಅವ್ರತ್ರ, ''ಭಟ್ರೇ ಆ ಮುಂಡಪ್ಪದು ಮರ ಕಡ್ಸಿ ಹಾಕಿ ಮಾರ್ರೆ. ಯೆಂತ ಸುಖ ಇಲ್ಲ ಅದು. ಮಳೆ ಬಂದ್ರೆ ಆ ಮರದಲ್ಲಿ ಬರೀSSS ಹುಳವೇ ಆಗುದು. ಹಣ್ಣೆಲ್ಲ ಕೊಳ್ತು ಕೊಳ್ತು ಹೋಗ್ತದೆ'', ಅಂತ ಹೇಳ್ತಿದ್ರು. ಆದ್ರೆ ಭಟ್ರು, ''ಯಾರೋ ಪುಣ್ಯಾತ್ಮ ನೆಟ್ಟ ಮರ ಅದು. ನೋಡುವ ಯೆಂತ ಆಗ್ತದೇಂತ'', ಅಂತ ನೆಗಾಡ್ತ ಹೇಳ್ತಿದ್ರು.

ಆ ವರ್ಷ ಏಪ್ರಿಲ್ - ಮೇನಲ್ಲಿ ಮುಂಡಪ್ಪನ ಮರದಲ್ಲಿ ಕಂಡಾಬಟ್ಟೆ ಕಾಯಿ ಬಂತು. ಭಟ್ರ ಹೆಂಡತಿ ಅನ್ನಪೂರ್ಣಮ್ಮ ಒಂದು ಜನ ಹುಡ್ಕಿದ್ರು. ಅವ್ನೇ ಅಲೆವೂರಿನ ಅಬ್ಬಾಸ್. ಅವ ಮರ ಹತ್ತಿ ಬೆಳ್ದ ಕಾಯಿಗಳನ್ನು ಮಲ್ಲಿಗೆ ಹೂವಿನ ಹಾಗೆ ಮೆಲ್ಲ ಬುಟ್ಟಿಗೆ ಇಳ್ಸಿ ಕೊಯ್ದು ಕೊಟ್ಟ. ಒಂದಲ್ಲ ಎರ್ಡಲ್ಲ ಒಟ್ಟಿಗೆ ಒಂದೇ ಸರ್ತಿಗೆ ಆರ್ನೂರು ಕಾಯಿಗಳು. ಗುರ್ರಾಜ ಭಟ್ರು ಎಲ್ಲ ಹಣ್ಣು ಮಾಡಿ ಅಕ್ಕಪಕ್ಕದವ್ರಿಗೆಲ್ರಿಗೂ ಕೊಟ್ರು. ಎಲ್ಲರಿಗೂ ಕಂಡಾಬಟ್ಟೆ ಆಶ್ಚರ್ಯ. ''ಭಟ್ರೇ... ಈ ಮರದ ಹಣ್ಣ ಇಷ್ಟು ಸೀ ಉಂಟು ಅಂತ ನಾವು ಎಣಿಸಿರ್ಲಿಲ್ಲ ಮಾರ್ರೆ. ಸೀSSS ಅಂದ್ರೆ ಕಂಡಾಬಟ್ಟೆ ಸೀ'', ಅಂತ ಎಲ್ರೂ ಹೇಳ್ಳಿಕ್ಕೆ ಸುರು ಮಾಡಿದ್ರು. ಭಟ್ರು ಪ್ರತಿವರ್ಷ ಮುಂಡಪ್ಪ ಮಾವಿನ ಹಣ್ಣುಗಳನ್ನು ಸಿಕ್ಕಿದವ್ರಿಗೆಲ್ಲಾ ಫ್ರೀಯಾಗಿ ಕೊಡ್ಳಿಕ್ಕೆ ಸುರು ಮಾಡಿದ್ರು. ಕೆಲವ್ರು, ''ಭಟ್ರೇ... ಧರ್ಮಕ್ಕೆ ಯೆಂತಕ್ಕೆ ಕೊಡುದು ನೀವು ? ಡಜ಼ನಿಗೆ ಇಷ್ಟು ಅಂತ ರೇಟು ಇಡಿ. ಒಳ್ಳೆ ದುಡ್ಡು ಮಾಡ್ಬೌದು,'' ಅಂತ ಹೇಳ್ತಿದ್ರು.

ಭಟ್ರು ಧರ್ಮಕ್ಕೆ ಮಾವಿನ ಹಣ್ಣು ಕೊಡ್ಳಿಕ್ಕೆ ಸುರು ಮಾಡಿದ್ಮೇಲೆ ಅವ್ರಿಗೆ ಸುಮಾರು ನಮಸ್ಕಾರಗಳು ಸಿಗ್ಲಿಕ್ಕೆ ಸುರುವಾಯ್ತು. ಕೆಲವ್ರಂತೂ ಮಾರ್ಚ್ ತಿಂಗಳಲ್ಲೇ ರೋಡು ಸೈಡಿಗಿದ್ದ ಅವ್ರ ಮರ ನೋಡ್ಕೊಂಡು ಎಷ್ಟು ಹೂ ಹೋಗಿದೆ, ಈ ಸಲ ಎಷ್ಟು ಮಾವಿನಹಣ್ಣು ಸಿಗ್ಬೌದು, ಭಟ್ರು ಎಷ್ಟು ಕೊಡ್ಬೌದು, ಅಂತೆಲ್ಲ ಲೆಕ್ಕ ಹಾಕ್ತಿದ್ರು. ಕೆಲವ್ರು ಬೈಕಿನಲ್ಲಿ ಸೈಕಲ್ಲಿನಲ್ಲಿ ಹೋಗುವಾಗ ಮೇಲೆ ನೋಡ್ಕೊಂಡು ಹೋಗಿ ತೋಡಿಗೆ ಬಿದ್ದು ಕೈಕಾಲು ಮುರ್ಕೊಂಡದ್ದೂ ಉಂಟು. ಜನ್ರು ಬಿಡಿ, ಕೆಮ್ಮೂರ್ತಿನ ಜಮಾದಿ ಭೂತವೂ ಸಾ ಭಟ್ರ ಮುಂಡಪ್ಪ ಮಾವಿನಹಣ್ಣನ್ನೇ ಕೇಳ್ಳಿಕ್ಕೆ ಸುರು ಮಾಡಿತು. ಮೇ ಫ಼ಸ್ಟ್ ವಾರದಲ್ಲಿ ಜಮಾದಿ ಕೋಲ. ಊರಿನವ್ರು ಕಷ್ಟ ಹೇಳಿಕೊಂಡು, ''ಜುಮಾದಿಯೇ, ಇದಕ್ಕೊಂದು ಪರಿಹಾರ ಹೇಳು'', ಅಂತ ಕೇಳಿಕೊಂಡ್ರೆ ಕೂಡ್ಲೆ ಜುಮಾದಿ, ಭಟ್ರ ತೋಟದ ಮುಂಡಪ್ಪ ಒಂದು ಡಜ಼ನ್ ಕೊಟ್ಟು ಬಿಡು. ನಿನ್ನ ಡಜ಼ನ್‌ಗಟ್ಲೆ ಕಷ್ಟಗಳೆಲ್ಲ ಮಾಯಕ ಆಗ್ತವೆ'', ಅಂತ ಅಭಯ ಕೊಡ್ತಿತ್ತು. ಭೂತ ಬಿರ್ದಾದ ಮೇಲೆ ಕಾಣಿಕೆ ಬಂದಿದ್ದ ಭಟ್ರ ಮುಂಡಪ್ಪ ಹಣ್ಣುಗಳನ್ನೆಲ್ಲ ಪಾತ್ರಿ ಸೇಲ್ ಮಾಡ್ತಿದ್ದ!

ಗುರ್ರಾಜ ಭಟ್ರು ಕೆಮ್ಮೂರ್ತು ಸರ್ಕಾರಿ ಶಾಲೆದ್ದು ಮಾಷ್ಟ್ರಾಗಿದ್ರು. ಅವ್ರಿಗೆ ಗಾಂಧೀಜಿ ಮೇಲೆ ಭಾರೀ ಭಕ್ತಿ. ಅದಕ್ಕೆ ಕಾರಣ ಏನೂಂತಂದ್ರೆ ಮಹಾತ್ಮ ಗಾಂಧೀಜಿ ಉಡುಪಿಗೆ ಬಂದಿದ್ರಲ್ವ ? ಆಗ ಗುರ್ರಾಜ ಭಟ್ರ ಅಪ್ಪ ವ್ಯಾಸಭಟ್ರು ತಮ್ಮ ಮಗ್ನನ್ನು ಗಾಂಧೀಜಿಯನ್ನು ತೋರಿಸ್ಲಿಕ್ಕೆ ಕರ್ಕೊಂಡ್ಹೋಗಿದ್ರಂತೆ. ಆಗ ಗುರ್ರಾಜ ಭಟ್ರು ಆರೇಳು ವರ್ಷದವ್ರಾಗಿದ್ರಂತೆ. ಗಾಂಧೀಜಿ ಗುರ್ರಾಜ ಭಟ್ರ ಬೆನ್ನು ತಟ್ಟಿ ಕೆನ್ನೆ ಚಿವುಟಿದ್ರಂತೆ. ವ್ಯಾಸಭಟ್ರಿಗೆ ಖುಷಿಯಾಗಿ ಮನೆಗೆ ಬಂದ್ಮೇಲೆ, ''ಮಾಣಿ... ನೀನು ಕೂಡ ಗಾಂಧೀಜಿಯ ಹಾಗೆ ದೊಡ್ಡ ಜನ ಆಗ್ಬೇಕು. ಸತ್ಯ ಹೇಳ್ಬೇಕು. ಹಿಂಸೆ ಮಾಡ್ಬಾರ್ದು. ನಿನ್ನ ಕೆಲ್ಸ ನೀನೆ ಮಾಡ್ಕೊಳ್ಬೇಕು'', ಅಂತೆಲ್ಲ ಆಗಾಗ ಹೇಳ್ಲಿಕ್ಕೆ ಸುರು ಮಾಡಿದ್ರು. ಗುರ್ರಾಜ ಭಟ್ರು ದೊಡ್ಡವರಾಗ್ತ ಬಂದ ಹಾಗೆ ಗಾಂಧೀಜಿ ಹೇಳಿದ ಹಾಗೆ ಬದುಕ್ಲಿಕ್ಕೆ ಸುರುಮಾಡಿದ್ರು. ಖಾದಿ ಜುಬ್ಬ, ಮುಂಡು ಮಾತ್ರ ಹಾಕ್ಕೊಳ್ತಿದ್ರು. ಶಾಲೆಯಲ್ಲಿ ಮಕ್ಕು ಎಂತಾದ್ರು ತಪ್ಪು ಮಾಡಿದ್ರೆ ಮಕ್ಕಳನ್ನು ಹೊಡಿಯುವ ಬದ್ಲು ತಮ್ಮ ಕೈಗೆ ತಾವೆ ಹೊಡ್ಕೊಳ್ತಿದ್ರು. ಯಾರು ಯೆಂತ ಹೇಳಿದ್ರೂ ಭಟ್ರು ತಮ್ಮ ಮಾತನ್ನು ಗಾಂಧೀಜಿಯಿಂದ್ಲೇ ಸುರು, ಗಾಂಧಿಯಿಂದ್ಲೇ ಎಂಡ್ ಮಾಡ್ತಿದ್ರು. ಭಟ್ರು ತಮ್ಮ ಮನೆಗೆ ಗಾಂಧಿಗುಡಿ ಅಂತ್ಲೇ ಹೆಸ್ರಿಟ್ಟಿದ್ರು. ಇವ್ರ ಪರೋಪಕಾರಿ ಬುದ್ಧಿ, ದುಡ್ಡು ಮಾಡ್ಳಿಕ್ಕೆ ಗೊತ್ತಿಲ್ಲದೇ ಇರುವ ಸಾಧುತನ ನೋಡಿದ ಕೆಲವ್ರು ಗಾಂಧಿಭಟ್ರು ಅಂತ ಕರೀತಿದ್ರು. ರಿಟೈರ್ ಆದ್ಮೇಲೆ ಗುರ್ರಾಜ ಭಟ್ರು ಅವ್ರು ಕಲಿಸ್ತಿದ್ದ ಶಾಲೆಯ ಅಭಿವೃದ್ಧಿ ಸಮಿತಿಯ ಸದಸ್ಯರಾಗಿಯೂ ಕೆಲ್ಸ ಮಾಡ್ತಿದ್ರು.

ಇಂಥ ಕುಕ್ಕುದ ಭಟ್ರ್, ಯಾನೆ ಗಾಂಧಿ ಭಟ್ರುಯಾನೆ ಗುರ್ರಾಜ ಭಟ್ರಿಗೆ ಇಬ್ರು ಗಂಡುಮಕ್ಕು ಮಾತ್ರ. ದೊಡ್ಡವ ಸದಾನಂದ. ಮದುವೆ ಮಾಡಿಕೊಂಡು ಬೆಂಗ್ಳೂರಲ್ಲಿ ಬ್ಯಾಂಕಿನಲ್ಲಿ ಕೆಲ್ಸ ಮಾಡ್ತಿದ್ದ. ಸಣ್ಣವ ನಿತ್ಯಾನಂದ. ಅವ್ನಿಗೆ ವರ್ಷ ಮೂವತ್ತೈದು ದಾಟಿದ್ರೂ ಮದ್ವೆ ಆಗಿರ್ಲಿಲ್ಲ. ಯೆಂತಕ್ಕೆ ಅಂದ್ರೆ ಅವ್ನಿಗೆ ಇಂಥದ್ದೂಂತ ಒಂದು ಕೆಲ್ಸ ಇರ್ಲಿಲ್ಲ. ಅದು ಯೆಂತಕ್ಕೆ ಅಂದ್ರೆ ಅವ ಓದು-ಬರಹದಲ್ಲಿ ಬರ್ಕತ್ತಾಗ್ಲಿಲ್ಲ. ಗುರ್ರಾಜ ಭಟ್ರು ಸುರುಸುರು ಭಾರೀ ತಲೆ ಬಿಸಿ ಮಾಡ್ಕೊಳ್ಳಿಲ್ಲ. ಯೆಂತಾದ್ರೂ ಮಾಡಿ ಬದುಕ್ತಾನೆ. ಗಂಡುಮಗ ಅಲ್ವಾ, ನನ್ನಿಂದ ಆಗುವಷ್ಟು ಓದಿಸಿದ್ದೇನೆ. ಇನ್ನು ಅವ್ನ ಹಣೆಯಲ್ಲಿ ಬರ್ದ ಹಾಗೆ ಆಗ್ತದೆ ಅಂತ ಯಾರಾದ್ರೂ ಕೇಳಿದ್ರೆ ಹೇಳ್ತಿದ್ರು. ಗುರ್ತು ಪರಿಚಯ ಇದ್ದವ್ರತ್ರ ಹೇಳಿ ಅಂಗಡಿಯಲ್ಲಿ ಲೆಕ್ಕ ಬರಿಯುವ ಕೆಲ್ಸ, ಎಲೆಕ್ಟ್ರಿಕ್ ರಿಪೇರಿ, ಹೋಟ್ಲು ಮ್ಯಾನೇಜರ್... ಹೀಗೆ ಎಂತೆಂಥದ್ದೋ ಸುಮಾರು ಕೆಲ್ಸ ಕೊಡ್ಸಿದ್ರು ಭಟ್ರು. ಆದ್ರೆ ಎಲ್ಲೂ ಅವ ಮೂರು-ನಾಲ್ಕು ತಿಂಗಳಿಗಿಂತ ಹೆಚ್ಚು ನಿಲ್ಲಲಿಲ್ಲ. ಯೆಂತಕ್ಕೇ ಅಂದ್ರೆ, ''ದುಡ್ಡು ಕದೀತಾನೆ. ಕುಡ್ದು ಬರ್ತಾನೆ. ಮರ್ಯಾದಸ್ಥ ಹುಡುಗಿಯರಿಗೆ ತೊಂದ್ರೆ ಕೊಡ್ತಾನೆ'', – ಇಂಥದ್ದೆಲ್ಲ ಕಂಪ್ಲೇಂಟ್ ಬರ್ಲಿಕ್ಕೆ ಸುರುವಾಯ್ತು. ಎಲ್ಲ ದಣಿಗಳೂ ಕೆಲ್ಸ ಬಿಡ್ಸಿ ಓಡ್ಸಿದ್ರು. ''ಮಾಷ್ಟ್ರೆ, ನೀವೇನೋ ಭಾರೀ ಒಳ್ಳೆಯವ್ರು. ಆದ್ರೆ ನಿಮ್ಮ ಮಗ ನಿಮ್ಗೆ ಹೇಳ್ಸಿದವ

ಅಲ್ಲ ಮಾರ್ರೆ. ನಿಮ್ಮ ಹೆಸ್ರು ಹಾಳು ಮಾಡ್ಳಿಕ್ಕೇ ಹುಟ್ಟಿದವ'', ಅಂತ ಒಬ್ರೊಬ್ರೇ ಹೇಳ್ಳಿಕ್ಕೆ ಸುರು ಮಾಡಿದ್ರು. ಭಟ್ರಿಗೆ ಈಗ ಮಂಡೆ ಬಿಸಿ ಆಗ್ಲಿಕ್ಕೆ ಸುರುವಾಯ್ತು. ಒಂದೆರ್ಡು ಸರ್ತಿ ಮಗನಿಗೆ ಬುದ್ಧಿವಾದ ಹೇಳ್ಳಿಕ್ಕೆ ನೋಡಿದ್ರು. ಆಗ ಅವ, ''ಅಪ್ಪಯ್ಯ... ನಿಮ್ಮ ಕಾಲದ ತತ್ತ್ವ ಆದರ್ಶ ಎಲ್ಲ ಕಟ್ಟಿ ಇಡಿ ಗೊತ್ತಾಯ್ತಾ? ನಂಗೆ ಎಂತ ಮಾಡ್ಬೇಕು ಅಂತ ಗೊತ್ತುಂಟು. ನೀವು ಹೇಳುದು ಬೇಡ'', ಅಂತ ಪೆದಂಬು ಮಾತಾಡಿದ್ದ. ಆಮೇಲೆ ಭಟ್ರು, ಅವರ ಹೆಂಡತಿ ಇಬ್ಬರೂ ನಿತ್ಯಾನಂದನ ಸುದ್ದಿ ಬಿಟ್ರು. ಇಂಥ ನಿತ್ಯಾನಂದ ಊರಿನ ಲೀಡರ್ ಆಗ್ಲಿಕ್ಕೆ ಟ್ರೈ ಮಾಡ್ತಿದ್ದ. ಕೇಸರಿ ಟವೆಲ್, ಕುಂಕುಮ ಹಚ್ಚಿಕೊಂಡು ಒಂದಷ್ಟು ಜನ ತನ್ನ ಹಾಗಿನ ಹುಡಗ್ರನ್ನು ಕಟ್ಟಿಕೊಂಡು ಎಲ್ಲಿಯಾದ್ರೂ ಎಂತಾದ್ರು ಗಲಾಟೆ ಮಾಡ್ಳಿಕ್ಕೆ ಸಿಕ್ತದಾ ಅಂತ ಕಾಯ್ತ ಕೂತ್ಕೊಳ್ತಿದ್ದ. ಏನಾದ್ರೂ ಆದ್ರೆ ಆ ಹುಡುಗ್ರನೆಲ್ಲ ಕಟ್ಟಿಕೊಂಡು ಅಲ್ಲಿಗೆ ಹೋಗಿ, ''ದೇಶದ ಎಲ್ಲ ಗಲಾಟೆಗೂ ಸ್ಯಾಬರೇ ಕಾರಣ. ಗಾಂಧೀಜಿ ದೇಶ ಒಡ್ದದ್ರಿಂದ ಇಷ್ಟೆಲ್ಲ ಆಯ್ತು'', ಅಂತೆಲ್ಲ ಕುಂಡೆ ತೂತು ಬಿರ್ದುಹೋಗುವ ಹಾಗೆ ಕಿರ್ಚಿ ಬರ್ತಿದ್ದ. ಇಂಥ ನಿತ್ಯಾನಂದ ತನ್ನ ಅಪ್ಪನ ವಿರುದ್ಧ ನಿಲ್ಲುವ ಹಾಗಾಯ್ತು. ಅದು ಹೇಗೆ ಅಂದ್ರೆ...

ಆ ವರ್ಷ ಮಾರ್ಚ್ ತಿಂಗಳು. ಅನ್ನಪೂರ್ಣಮ್ಮ ಗಂಡನ ಹತ್ರ, ''ಹೌದಾ... ಈ ಸರ್ತಿ ಮುಂಡಪ್ಪನಲ್ಲಿ ಕಂಡಾಬಟ್ಟೆ ಹೂ ಹೋಗಿದೆ. ಏನಿಲ್ಲಾಂದ್ರೂ ಮೂರು ಸಾವಿರ ಆದ್ರೂ ಕಾಯಿ ಆಗ್ತದಾ ಏನಾ ?'' ಅಂದ್ರು.



ಅದಕ್ಕೆ ಭಟ್ರು, ''ಆಗ್ಲಿ, ಯೆಂತ ಆಯ್ತು? ಕಳ್ದ ವರ್ಷ ಬರೇ ಕೆಮ್ಮೂರ್ತಿನವ್ರಿಗೆ ಮಾತ್ರ ಕೊಟ್ಟಿದ್ದೆ. ಈ ಸಲ ಅಲೆವೂರಿನವ್ರಿಗೂ ಕೊಡುವ'', ಅಂದ್ರು. ''ಅಲ್ಲ... ನಂಗೂ ಪ್ರಾಯ ಆಯ್ತು. ನಿಮ್ಗೂ ಪ್ರಾಯ ಆಯ್ತು. ನಿತ್ಯಾನಂದ ಯೆಂತ ಜವಾಬ್ದಾರಿಯನ್ನೂ ತಗೊಳುದಿಲ್ಲ. ಕ್ಯೊದ ಕಾಯನ್ನು ಒರ್ಸಿ ಅದ್ರ ಸುನೆ ತೆಗ್ದು ಹಣ್ಣಾಗ್ಲಿಕ್ಕೆ ಇಟ್ಟು ಅದನ್ನು ಎಲ್ರಿಗೆ ಕೊಡುದು ಅಂದ್ರೆ ತುಂಬ ಕಷ್ಟ ಆಗ್ತದೆ''.

''ಯೆಂತ ಮಾಡ್ಬೇಕು ಅದಕ್ಕೆ ?''

''ಅಲ್ಲ... ಅಬ್ಬಾಸ್ ಸುಮಾರು ಇಪ್ಪತ್ತೈದು - ಮೂವತ್ತು ವರ್ಷಗಳಿಂದ ನಮ್ಮ ಮುಂಡಪ್ಪ ಕ್ಯೊತಾ ಇದ್ದಾನೆ. ನಮ್ಮ ಮನೆಯವ್ರ ಹಾಗೆ ಇದ್ದಾನೆ. ಕಳ್ದ ಸರ್ತಿ ಮರ ವಹಿಸಿಕೊಡ್ತೀರಾ ಅಂತ ಕೇಳಿದ್ದ. ನಾನು ಇಲ್ಲ ಅಂತ ಹೇಳಿದ್ದೆ. ಈ ಸರ್ತಿಯೂ ಕೇಳ್ತಾ ಇದ್ದಾನೆ. ಅವ್ನ ಹೇಗೂ ಅದೇ ವ್ಯಾಪಾರ ಮಾಡುವವ್ನ. ಮನೆಗೆ ಎಷ್ಟು ಬೇಕಾ ಅಷ್ಟು ಕಾಯಿಗಳನ್ನು ಇಟ್ಟುಕೊಂಡು ಮರ ವಹಿಸಿ ಕೊಡುವ, ಆಗದಾ ?'' ಅನ್ನಪೂರ್ಣಮ್ಮ ಸ್ವಲ್ಪ ಹೆದ್ರಿಕೆಯಿಂದ ಕೇಳಿದ್ರು. ಭಟ್ರು ಸ್ವಲ್ಪ ಹೊತ್ತು ಸೈಲೆಂಟಾದ್ರು. ಹೆಂಡತಿ ಹೇಳುದು ಸರಿ ಅಂತ ಎಣಿಸಿದ್ರು. ''ಆಯ್ತು ಹಾಗೆ ಮಾಡುವ. ನಾಳೆಯೇ ಅಬ್ಬಾಸನಿಗೆ ಬರ್ಲಿಕ್ಕೆ ಹೇಳಿಕಳಿಸ್ತೇನೆ'' ಅಂತ ಹೇಳಿದ್ರು.

ಮರು ದಿವ್ಸ ಅಬ್ಬಾಸ್ ಬೆಳಿಗ್ಗೆಯೇ ಬಂದ. ''ನೋಡು ಅಬ್ಬಾಸ್... ಪ್ರತೀ ವರ್ಷದ ಹಾಗೆ ಇನ್ನು ಮುಂದೆ ನಿನ್ನ ಹತ್ರ ಮುಂಡಪ್ಪವನ್ನು ಕೊಯ್ಸಿ ಅದನ್ನು ಹಣ್ಣು ಮಾಡಿ ಊರಿನವ್ರಿಗೆಲ್ಲ ಕೊಡ್ಳಿಕ್ಕೆ ಇನ್ನು ನಮ್ಗೆ ಕಷ್ಟ ಆಗ್ತದೆ. ಇಷ್ಟು ದಿವ್ಸ ಜೀವದಲ್ಲಿ ತ್ರಾಣ ಇತ್ತು. ಆದ್ರೆ ಈಗ ಪ್ರಾಯ ಆಗ್ತಾ ಉಂಟು ಅಂತ ಗೊತ್ತಾಗ್ತ ಉಂಟು. ನೀನು ಕಳ್ದ ವರ್ಷವೇ ಮರ ವಹಿಸಿಕೊಡ್ತೀರಾ ಅಂತ ಕೇಳಿದ್ದಿಯಂತೆ. ಈ ವರ್ಷ ವಹಿಸಿಕೊಡ್ತೇವೆ. ನಿಂಗೆ ಎಷ್ಟು ಕೊಡ್ಬೇಕು ಅನ್ನಿಸ್ತದಾ ಅಷ್ಟು ಕೊಡು. ಯೆಂತ ಹೇಳ್ತಿ ?'' ಅಂತ ಭಟ್ರು ಕೇಳಿದ್ರು.

ಅಬ್ಬಾಸನಿಗೆ ಭಾರೀ ಖುಷಿ ಆಯ್ತು. ಭಟ್ರ ಮುಂಡಪ್ಪನ ಮರ ಸಿಕ್ಕಿದ್ರೆ, ಬಂಪರ್ ಲಾಟ್ರಿ ಹೊಡ್ದ ಹಾಗೆ ಅಂತ ಎಣಿಸಿದ. ಆದ್ರೆ ಅವ್ರತ್ರ ಕಡಿಮೆಗೆ ತಕೊಂಡು ತುಂಬ ಲಾಭ ಮಾಡಿದ್ರೆ ಅಲ್ಲಾಹ್ ತಂಗೆ ಒಳ್ಳೇದು ಮಾಡುದಿಲ್ಲ ಅಂತಲೂ ಅವ್ನ ಮನಸ್ಸು ಹೇಳಿತು. ಒಂದೊಂದು ಕಾಯಿಯೂ ಹಣ್ಣಾದಾಗ ಒಂದು ಕಿಲೋ ತೂಗ್ತದೆ; ಒಳ್ಳೆ ಪ್ಯಾಕ್ ಮಾಡಿದ್ರೆ ಬೊಂಬೈಯಲ್ಲಿ, ಗಲ್ಫ್‌ನಲ್ಲಿ ಒಳ್ಳೆ ಡಿಮ್ಯಾಂಡ್ ಬರ್ತದೆ, ಅಂತೆಲ್ಲ ಯೋಚನೆ ಮಾಡಿ ಕೊನೆಗೆ, ''ಅಯ್ಯ... ನೀವು ನನ್ನನ್ನು ಮನೆಯವ್ನ ಹಾಗೆ ನೋಡ್ಕೊಂಡಿದ್ದೀರಿ. ಬೇರೆ ಕಡೆ ಆದ್ರೆ ಈ ಮರಕ್ಕೆ ಎರ್ಡು ಸಾವಿರ ಕೊಟ್ಟು ವಹಿಸಿಕೊಳ್ತಿದ್ದೆ. ನೀವು ಆಗಿರುದ್ರಿಂದ ಮೂರು ಸಾವಿರಕ್ಕೆ ವಹಿಸಿಕೊಳ್ತೇನೆ''. ಅಂತ ಹೇಳಿ ಬಾಯಿ ಮುಚ್ಚೂದ್ರೊಳಗೆ ಮಲಗಿದ್ದ ನಿತ್ಯಾನಂದ ಲುಂಗಿ ಸಾ ಸರೀ ಕಟ್ಟಿಕೊಳ್ಳದೆ ಹೊರಗೆ ಬಂದ. ಬಂದವನೆ, ''ಯೆಂತದಾ ಬ್ಯಾರಿ ?... ಯೆಂತದು ನೀನು ಅಪ್ಪನನ್ನ ಮಂಗ ಮಾಡುದು ? ಮೂರು - ನಾಲ್ಕು ಸಾವಿರ ಕಾಯಿ ಆಗುವ ಮರಕ್ಕೆ ಮೂರು ಸಾವಿರವಾ ನೀನು ಕೊಡುದು ? ಅಪ್ಪಯ್ಯ, ನಿಮ್ಗೂ ಮಂಡೆ ಸಮ ಇಲ್ವಾ ? ಮನೆ ಮಗ ಅಂತೆ, ಮನೆಯವ ಅಂತೆ ಬೋಗಾರ್ದುಕ್ಕ ಎಲ್ಲ ಮಾತಾಡ್ಬೇಡಿ ಗೊತ್ತಾಯ್ತಾ? ಒಂದು ಕಾಯಿಗೆ ಐದು ರುಪ್ಯಾ ಲೆಕ್ಕ ಹಾಕಿದ್ರೆ ಮೂರು ಸಾವಿರಕ್ಕೆ ಎಷ್ಟಾಯ್ತು ಲೆಕ್ಕ ಹಾಕಿ. ಈ ಬ್ಯಾರಿ ಚೆಂದ ಪ್ಯಾಕ್ ಮಾಡಿ ಒಂದು ಡಜನ್ನಿಗೆ ಆರ್ನೂರು - ಏಳ್ನೂರು ರುಪ್ಯಾ ಮಾಡಿ ಬೊಂಬ್ಯಾಗೆ ದುಬ್ಯಾಗೆಲ್ಲ ಕಳಿಸ್ತಾನೆ ಗೊತ್ತುಂಟಾ ? ಏ ಬ್ಯಾರಿ, ಆಗ್ತದಾದ್ರೆ ಹದ್ನೈದು ಸಾವಿರ ಕೊಡು. ಇಲ್ಲಾಂದ್ರೆ ಕುಂಡೆಗೆ ಕಾಲು ಕೊಡು'', ಅಂತ ಬೊಬ್ಬೆ ಹೊಡ್ದ. ಅಷ್ಟು ಹೊತ್ತಿಗೆ ಅವ ಕಟ್ಟಿದ್ದ ಲುಂಗಿ ಪೂರ ಜಾರಿಬಿದ್ದಿತ್ತು. ನೋಡ್ಳಿಕ್ಕಾಗದೆ ಅಬ್ಬಾಸ್ ತಲೆ ತಗ್ಗಿಸಿದ. ಅಯ್ಯನೇ ತನ್ನನ್ನು ಒಂದು ದಿನವೂ ಹೀನಾಯವಾಗಿ ಮಾತಾಡಿಸಿರ್ಲಿಲ್ಲ. ಆದ್ರೆ ಇವ ತನ್ನ ಮಗನ ಯೇಜಿನವ ಬ್ಯಾರಿ ಅಂತ ಕರ್ದದಕ್ಕೆ ಒಂದು ಕ್ಷಣ ಗರ್ವ ಬಂತು. ಆದ್ರೂ ಯೆಂತದೂ ಎದ್ರು ಮಾತಾಡದೆ ಸುಮ್ಮನೆ ಕೂತ. ಭಟ್ರು - ಅನ್ನಪೂರ್ಣಮ್ಮ ಇಬ್ರಿಗೂ ಗಾಬ್ರಿಯಾಯ್ತು. ಭಟ್ರಂತೂ ಒಂದು ದಿವ್ಸವೂ ಹೆಂಣ್ತಿಗೂ ಗಟ್ಟಿ ಮಾತಾಡಿದವ್ರಲ್ಲ. ಮಕ್ಳಿಗಂತೂ ಹೇಳುವ ಸ್ಥಿತಿಯಲ್ಲೇ ಇರ್ಲಿಲ್ಲ. ಅದ್ರಲ್ಲೂ ನಿತ್ಯಾನಂದನಿಗೆ ಬುದ್ಧಿ ಹೇಳುವವ್ರು ಯಾರು ? ಆದ್ರೂ, ''ನಿತ್ಯಾನಂದ, ಯೆಂತ ಮಾಡ್ಬೇಕು ಈಗ ?'' ಅಂತ ಕೇಳಿದ್ರು. ''ಮಾಡದು ಎಂತದು ? ಮುಂದಿನ ತಿಂಗ್ಳು ಒಂದು ಡೇಟ್ ಫಿಕ್ಸ್ ಮಾಡಿ. ಆವತ್ತು ಮರದ ಕೆಳಗೆ ಏಲಂ ಕೂಗುವ, ಯಾರು ಹೆಚ್ಚಿಗೆ ಕೊಡ್ತಾರೋ ಅವ್ರಿಗೆ ಮರ ವಹಿಸಿಕೊಡುವ. ಕ್ರಮ ಇರುದೇ ಹಾಗೆ'' ಅಂತ ಹೇಳಿದ.

''ಅಲ್ಲ ಮಾರಾಯ, ನಾನು ಅಬ್ಬಾಸನಿಗೆ ಕೊಡುದು ಅಂತ ನಿರ್ಧಾರ ಮಾಡಿದ್ದೆ. ಇಷ್ಟು ವರ್ಷ ನಮ್ಮ ಮನೆಯವ್ರ ಹಾಗೆ ಇದ್ದ. ಒಂದೊಂದು ಕಾಯಿ ಕೊಯ್ಯುವಾಗ್ಲೂ ತನ್ನ ಪ್ರಾಣವೇ ಅದ್ರ ಒಳ್ಗೆ ಉಂಟೋ ಅನ್ನುವ ಹಾಗೆ ಕೊಯ್ದು ಇಡ್ತಿದ್ದ.''

''ನೀವು ಸ್ವಲ್ಪ ಸುಮ್ಮನೆ ಇರ್ತೀರಾ ಅಪ್ಪಯ್ಯ... ಅವ ಏನು ಧರ್ಮಕ್ಕೆ ಕೊಯ್ದು ಕೊಡ್ತಿದ್ನಾ? ನೂರು ಕಾಯಿಗೆ ಮೂವತ್ತು ರುಪೈ ಕೊಡ್ತಿದ್ರಿ. ಆದೆಲ್ಲ ಬೇಡ ಈಗ. ನಾನು ಇದನ್ನು ವಹಿಸಿಕೊಳ್ತೇನೆ. ಜವಾಬ್ದಾರಿ ನಂಗೆ ಬಿಡಿ. ಏ ಬ್ಯಾರಿ, ...ಮುಂದಿನ ತಿಂಗ್ಳು ಎಂಟನೇ ತಾರೀಕು ಗುರುವಾರ ಬೆಳಿಗ್ಗೆ ಹತ್ತು ಗಂಟೆಗೆ ಏಲಂ ಕೂಗ್ತೇನೆ. ನಿಂಗೆ ಇಷ್ಟ ಇದ್ರೆ ಬಾ. ಇಲ್ಲಾಂದ್ರೆ ನಾನು ಬೇರೆ ಯೆರೇಂಜ್‌ಮೆಂಟ್ ಮಾಡ್ತೇನೆ'', ಅಂತ ಬೊಬ್ಬೆ ಹೊಡ್ದ. ಭಟ್ರು ಎಂತದೂ ಮಾತಾಡ್ಲಿಲ್ಲ. ಅಬ್ಬಾಸನ ಮರ್ಮಕ್ಕೆ ನಿತ್ಯಾನಂದನ ಮಾತು ತಾಗಿತು. ಎಂತದೇ ಆಗ್ಲಿ ಏಲಂನಲ್ಲಿ ಭಾಗವಹಿಸುತ್ತೇನೆ. ಮುಂಡಪ್ಪವನ್ನು ಏಲಂನಲ್ಲಿ ತಕ್ಕೊಳ್ಳುವವ್ರು ಯಾರಿದ್ದಾರೆ ? ಇದ್ರೂ ಐದು ಸಾವಿರಕ್ಕಿಂತ ಹೆಚ್ಚು ಹೇಳ್ಳಿಕ್ಕಿಲ್ಲ, ಅಂತ ಎಣಿಸಿದ. ''ಆಯ್ತು... ನಾನು ಏಲಂನಲ್ಲಿ ಭಾಗವಹಿಸ್ತೇನೆ'', ಅಂತ ಹೇಳಿ ಹೋದ. ವಿಷಯ ತನ್ನ ಕೈಮೀರಿ ಹೋಗ್ತಾ ಇರುದನ್ನು ಭಟ್ರು ನೋಡಿ ತಲೆ ಅಡಿಗೆ ಹಾಕಿ ಕೂಗ್ತಾ ಕೂತ್ರು.

* * *

ಏಲಂನ ದಿನ ಬಂತು. ''ಹತ್ತು ಗಂಟೆಗೆ ಭಟ್ರ ಮುಂಡಪ್ಪ ಏಲಂ ಅಂತೆ'', ಅಂತ ಸುದ್ದಿ ಕೇಳಿಯೇ ತುಂಬ ಜನ ಬಂದಿದ್ರು. ಬಂದವ್ರೆಲ್ಲ, ''ಭಟ್ರಿಗೆ ಎಂಥ ಮಗ ಹುಟ್ಟಿದ ಮಾರ್ರೆ, ಷೈ ! ಯೆಂತಾದ್ರು ಆಗ್ಲಿ ಭಟ್ರು ಸ್ಯಾಬ್ರಿಗೆ ಕೊಡ್ಬಾರ್ದಿತ್ತು. ಅದಕ್ಕೆ ನಿತ್ಯಾನಂದ ತಿರ್ಗಿಬಿದ್ದದ್ದು ಒಳ್ಳೆದೇ ಆಯ್ತು; ಪಾಪದ ಭಟ್ರು. ತಾವು ನೆಟ್ಟದ್ದಲ್ಲಾಂತ ಹೇಳಿ ಎಲ್ರಿಗೂ ಧರ್ಮಕ್ಕೆ ಕೊಡ್ತಾ ಇದ್ರು. ಅಂಥವ್ರಿಗೆ ಕಡೇ ಕಾಲದಲ್ಲಿ ಹೀಗಾಗ್ಬಾರ್ದಿತ್ತು'', ಅಂತೆಲ್ಲ ಮಾತಾಡ್ತಾ ಇದ್ರು. ಎಲ್ಲ ಮುಂಡಪ್ಪನ ಮರದ ಕೆಳಗೆ ಸೇರಿದ್ರು. ಹತ್ತು ಗಂಟೆಗೆ ಕರೆಕ್ಟಾಗಿ ನಿತ್ಯಾನಂದ ಗುರ್ರಾಜ ಭಟ್ರೊಟ್ಟಿಗೆ ಮನೆಯಿಂದ ಹೊರಗೆ ಬಂದ. ಅವ್ರಿಬ್ರೂ ಮರದ ಹತ್ರ ಬಂದ್ರು. ಅಷ್ಟೊತ್ತಿಗೆ ಅಲ್ಲಿಗೊಂದು ಕಾರ್ ಬಂತು. ಎಲ್ಲ ಆ ಕಡೆ ತಿರ್ಗಿ ನೋಡಿದ್ರು. ದೊಡ್ಡಣ್ಣ ಶೆಟ್ರು ! ಎಲ್ರಿಗೂ ಕಂಡಾಬಟ್ಟೆ ಆಶ್ಚರ್ಯ ! ''ಶೆಟ್ರೆಂತಕ್ಕೆ ಬಂದದ್ದು ಇಲ್ಲಿಗೆ ?''

''ಇವ್ರೂ ಯೇಲಂನಲ್ಲಿ ಭಾಗವಸ್ತಾರಾಮಿನಿ ?'' ಅಂತ ಜನ ಮಾತಾಡಿಕೊಂಡ್ರು. ಶೆಟ್ರನ್ನು ಕಂಡ ಕೂಡ್ಲೆ ನಿತ್ಯಾನಂದನ ಬಾಯಿ ಕಿವಿ ತಂಕ ಹೋಯ್ತು. ಮನೆಗೆ ಓಡಿ ಹೋಗಿ ಶೆಟ್ರಿಗೊಂದು ಕುರ್ಚಿ ತಂದು ಹಾಕಿದ. ಭಟ್ರು ಮಾತ್ರ ನಿಂತೇ ಇದ್ರು ! ಶೆಟ್ರು ಗತ್ತಿನಲ್ಲಿ ಕುರ್ಚಿಯಲ್ಲಿ ಕೂತ್ರು.

ಕೆಮ್ಮೂರು ದೊಡ್ಡಣ್ಣ ಶೆಟ್ರು ಅಂದ್ರೆ ಸಾಮಾನ್ಯ ಜನ ಅಲ್ಲ, ದೊಡ್ಡ ಬಿಸಿನೆಸ್‌ಮ್ಯಾನ್. ಏಪ್ರಿಲ್ - ಮೇ ತಿಂಗ್ಳಲ್ಲಿ ಸುತ್ತುಮುತ್ತ ಇದ್ದ ಮಾವಿನ ತೋಟಗಳ ಕಾಂಟ್ರಾಕ್ಟ್ ವಹಿಸಿಕೊಂಡು ಮಾವಿನಹಣ್ಣಿ ವ್ಯಾಪಾರ ಮಾಡ್ತಿದ್ರು. ಮಣಿಪಾಲದಲ್ಲಿ ಮಾವಿನ ಜ್ಯೂಸ್ ಮಾಡುವ ಒಂದು ದೊಡ್ಡ ಫ್ಯಾಕ್ಟರಿಯೂ ಇತ್ತು. ಒಟ್ರಾಶಿ ದೊಡ್ಡಣ್ಣ ಶೆಟ್ರು ಅಂದ್ರೆ ಭಾರೀ ಕುಳವಾರು ಆಗಿದ್ರು. ಅವ್ರಿಗೆ ಊರಿನಲ್ಲಿ ಎಂತಾದ್ರೂ ಮಾಡಿ ರೈಸ್ಬೇಕೂಂತ ಭಾರೀ ಆಸೆ ಇತ್ತು. ಆದ್ರೆ ಊರಿನ ಜನ ದುಡ್ಡಿರುವ ತನ್ನನ್ನು ಮಾತಾಡ್ಸುದು ಬಿಟ್ಟು ದುಡ್ಡಿಲ್ಲದ ಭಟ್ರನ್ನು ಗೌರವದಿಂದ ಕಾಣುದು ಅವ್ರಿಗೆ ಸರಿ ಕಾಣ್ತಿರ್ಲಿಲ್ಲ. ಒಂದು ಸರ್ತಿ ಚೌತಿಯ ಟೈಮಿನಲ್ಲಿ ಶಾಲೆಯಲ್ಲಿ ಊರಿನ ಗಣಪತಿ ಮೂರ್ತಿ ಇಡ್ಬೇಕು ಅಂತ ಮೀಟಿಂಗಿನಲ್ಲಿ ಹೇಳಿದ್ರು. ಆದ್ರೆ ಭಟ್ರು ಬಿಡ್ಲಿಲ್ಲ. ''ಶಾಲೆ ಸರ್ಕಾರದ್ದು, ಸರ್ಕಾರಿ ಕಟ್ಟಡವನ್ನು ಯಾವುದೇ ಧರ್ಮದ, ಜಾತಿಯ ಆರಾಧನೆಗೆ ಕೊಡ್ಬಾರ್ದು. ಶಾಲೆಯಲ್ಲಿ ಬರೇ ಸ್ವಾತಂತ್ರ್ಯ ಹೋರಾಟಗಾರರ ಫೋಟೋಗಳಿರ್ಬೇಕು. ರಾಷ್ಟ್ರೀಯ ಹಬ್ಬಗಳನ್ನು ಮಾತ್ರ ಆಚರಿಸ್ಬೇಕು'', ಅಂತೆಲ್ಲ ಭಾಷಣ ಮಾಡಿದ್ರು. ಶಾಲೆಯ ಅಭಿವೃದ್ಧಿ ಸಮಿತಿಯ ಸದಸ್ಯನಾಗಿದ್ದ ಅಬ್ಬಾಸ್ ಕೂಡ ಭಟ್ರು ಹೇಳಿದ್ದಕ್ಕೆ ಹೌದು ಅಂತ ತಲೆ ಆಡಿಸಿದ. ಉಳ್ದ ಕೆಲವ್ರಿಗೆ ಭಟ್ರ ಬಗ್ಗೆ ಗರ್ವ ಬಂದ್ರೂ ಎಂತದೂ ಮಾತಾಡ್ಳಿಕ್ಕೆ ಆಗ್ಲಿಲ್ಲ. ಶೆಟ್ರಿಗೆ ಆಗ ಭಾರೀ ಇನ್ಸಲ್ಟ್ ಆಗಿತ್ತು. ''ಬೋಳಿಮಗ ಭಟ್ಟನಿಗೆ ಬುದ್ಧಿ ಕಲಿಸ್ಬೇಕು'' ಅಂತ ಶೆಟ್ರು ಕಾಯ್ತಾ ಇದ್ರು. ನಿತ್ಯಾನಂದ, ಭಟ್ರಿಗೆ ಎದ್ರು ನಿಂತಿದ್ದಾನೆ ಅಂತ ಕೇಳಿ ಅವ್ರಿಗೆ ಹಾಲು ಕುಡ್ದಷ್ಟು ಖುಷಿಯಾಗಿತ್ತು. ಶೆಟ್ರು ನಿತ್ಯಾನಂದನನ್ನು ಊರಿನ ಯುವಕ ಸಂಘದ ಲೀಡರ್ ಮಾಡಿದ್ರು. ಶೆಟ್ರು ಹೇಳಿದ ರಾಗಕ್ಕೆ ನಿತ್ಯಾನಂದ ಕುಣೀಲಿಕ್ಕೆ ಸುರು ಮಾಡಿದ್ದ. ಈಗ ನಿತ್ಯಾನಂದನೇ ಶೆಟ್ರಿಗೆ ಏಲಂನ ವಿಷಯ ಹೇಳಿದ್ದ. ಅದ್ರಿಂದ ಶೆಟ್ರು ಅಲ್ಲಿಗೆ ಬಂದಿದ್ರು. ಶೆಟ್ರು ಬಂದದ್ದು ನೋಡಿ ಅಬ್ಬಾಸ್‌ನಿಗೂ ಒಂದು ನಮೂನಿ ಆಯ್ತು. ನೋಡುವಾ ಯೆಂತಾದ್ರೂ ಆಗ್ಲಿ, ಅಲ್ಲಾಹ ಇದ್ದಾನೆ ಅಂತ ಎಣಿಸಿದ.

ಏಲಂ ಸುರು ಆಯ್ತು.

''ಮುಂಡಪ್ಪನ ಮರ ಈ ಸರ್ತಿ ವಹಿಸಿಕೊಡ್ಳಿಕ್ಕೇಂತ ನಾನು ಏಲಂ ಕೂಗಿಸುದು ಅಂತ ನಿಶ್ಚಯ ಮಾಡಿದ್ದೇನೆ. ಆ ಪ್ರಕಾರವಾಗಿ ಈಗ ಸುರು ಮಾಡ್ತೇನೆ. ಎರುದ್ದವರೆ ಸಾವಿರ, ಒಂದು ವಾರ್'', ಅಂತ ನಿತ್ಯಾನಂದ ಸುರು ಮಾಡಿದ.

ಯಾರೋ ಗುಂಪಿನಲ್ಲಿ ಇದ್ದವ್ರು ''ಮೂರು ಸಾವಿರ'', ಅಂತ ಕೂಗಿದ್ರು. ಅಬ್ಬಾಸ್, ''ನಾಲ್ಕೂವರೆ ಸಾವಿರ'', ಅಂತ ಹೇಳಿದ. ದೊಡ್ಡಣ್ಣ ಶೆಟ್ರು ಒಂದೇ ಸರ್ತಿಗೆ, ''ಹದ್ನೈದು ಸಾವಿರ !'' ಅಂದ್ರು. ಅಬ್ಬಾಸ್ – ಗುಂಪಿನಲ್ಲಿ ಇದ್ದವ್ರು ಒಂದೇ ಸರ್ತಿಗೆ ಸ್ಟನ್ ಆದ್ರು. ಯಾರಿಗೂ ಅದಕ್ಕಿಂತ ಹೆಚ್ಚಿಗೆ ಹೇಳುವ ಧೈರ್ಯವೇ ಇರ್ಲಿಲ್ಲ. ಹದ್ನೈದು ಸಾವಿರ ಕಂಡಾಬಟ್ಟೆ ಹೆಚ್ಚಾಯ್ತು ಅಂತ ಎಲ್ರಿಗೂ ಗೊತ್ತಿತ್ತು. ಶೆಟ್ರಿಗೆ ಅಬ್ಬಾಸ್‌ಗೆ ಬುದ್ಧಿ ಕಲಿಸ್ಬೇಕಾಗಿತ್ತು. ನಿತ್ಯಾನಂದನಿಗೆ ಉಪಕಾರ ಮಾಡ್ಬೇಕಾಗಿತ್ತು. ನಿತ್ಯಾನಂದ ಒಳಗೊಳಗೇ ಖುಷಿ ಪಟ್ಟ. ಮೂರು ಸರ್ತಿ ಹದ್ನೈದು ಸಾವಿರಕ್ಕೆ ಕೂಗಿದ. ಕಡೆಗೆ, ''ಈ ಸರ್ತಿ ಮುಂಡಪ್ಪ ಮಾವಿನ ಕಾಂಟ್ರಾಕ್ಟ್ ನಮ್ಮ ಊರಿನ ದೊಡ್ಡ ಬಿಸಿನೆಸ್‌ಮ್ಯಾನ್, ದೇಶದ ಸಂಸ್ಕೃತಿಯ ರಕ್ಷಕ ಕೆಮ್ಮೂರು ದೊಡ್ಡಣ್ಣ ಶೆಟ್ರಿಗೆ ಆಗಿದೆ. ನಮ್ಮ ಅಪ್ಪಯ್ಯನ ಕರಾಮತ್ತಿನಿಂದ ಅದು ಒಬ್ಬ ಬ್ಯಾರಿಯ ಪಾಲಾಗ್ತಿತ್ತು. ಅದನ್ನು ತಪ್ಪಿಸಿದ್ದಕ್ಕಾಗಿ ನಾನು ಶೆಟ್ರನ್ನು ಅಭಿನಂದಿಸ್ತೇನೆ'', ಅಂತೆಲ್ಲ ರೈಲು ಬಿಟ್ಟ. ಅಲ್ಲಿದ್ದವ್ರೆಲ್ಲ ಚಪ್ಪಾಳೆ, ವಿಸಿಲ್ ಎಲ್ಲ ಹೊಡ್ದ್ರು. ಶೆಟ್ರು ಕೂಡ್ಲೆ ಗರಿಗರಿ ನೋಟುಗಳನ್ನು ರಪಕ್ಕಂತ ಲೆಕ್ಕ ಮಾಡಿ ನಿತ್ಯಾನಂದನಿಗೆ ಕೊಟ್ರು. ಐದು ಸಾವಿರ ತಂಗೆ ಸಹಾಯ ಮಾಡಿದ್ದಕ್ಕೆ, ಗುರ್ರಾಜ ಭಟ್ರ ಎದ್ರು ನಿಂತದ್ದಕ್ಕೆ ಇನಾಮಿನ ರೂಪದಲ್ಲಿ ಕೊಟ್ರು. ಶೆಟ್ರ ಹಿಂಬಾಲಕರು ಬಂದಿದ್ದವ್ರು ಅವ್ರು ಏಲಂನಲ್ಲಿ ಗೆದ್ದದ್ದಕ್ಕೆ ಕೂಡ್ಲೆ ಹತ್ತು ಸಾವಿರದ್ದು ಮಾಲೆ ಪಟಾಕಿ ತರ್ಸಿ ಮರದ ಕೆಳಗೆ 'ಚಟಪಟ' 'ಚಟಪಟ' ಅಂತ ಸಿಡಿಸಿದ್ರು. ಭಟ್ರಿಗೆ ಇಲ್ಲಿಯೇ ಭೂಮಿ ಬಾಯಿ ಬಿಡ್ಬಾರ್ದಾ ಅನ್ನಿಸಿತು. ಕಣ್ಣೀರು ತುಂಬಿಕೊಂಡು ಅಬ್ಬಾಸ್‌ನನ್ನು ನೋಡಿದ್ರು. ಅವ್ನ ಕಣ್ಣಲ್ಲೂ ನೀರು. ತಂಗೆ ಮರ ಸಿಗ್ಲಿಲ್ಲಾಂತ ಅಲ್ಲ, ಅಯ್ಯನಿಗೆ ಅವಮಾನ ಆಯ್ತಲ್ಲಾಂತ. ತಲೆ ಅಡಿಗೆ ಹಾಕ್ಕೊಂಡು ವಾಪಾಸ್ ಮನೆಗೆ ಹೋದ.

* * *

ಮರುದಿವ್ಸ ಬೆಳಿಗ್ಗೆ ಇನ್ನೂ ಸರೀ ಬೆಳಕಾಗಿರ್ಲಿಲ್ಲ. ''ಅಬ್ಬಾಸ್, ಅಬ್ಬಾಸ್'', ಅಂತ ಅಂಗಳದಲ್ಲಿ ಯಾರೋ ಕರಿಯುದು ಕೇಳಿತು. ಹೊರಗೆ ಬಂದು ನೋಡಿದ್ರೆ ಭಟ್ರು. ''ಅಯ್ಯ... ಇದೇನು ಬೆಳಿಗ್ಗೆ ಬೆಳಿಗ್ಗೆ ಬಂದದ್ದು ? ಬನ್ನಿ ಒಳಗೆ'', ಅಂತ ಗಡಿಬಿಡಿಯಿಂದ ಒಳಗೆ ಕರ್ಕೊಂಡು ಹೋದ. ಭಟ್ರು ಒಳಗೆ ಬಂದು ಕುರ್ಚಿಯಲ್ಲಿ ಕೂತವರೆ, ''ಅಬ್ಬಾಸ್, ನಿಂಗೆ ಕೊಟ್ಟ ಮಾತನ್ನು ನಾನು ಉಳಿಸ್ಲಿಕ್ಕಾಗ್ಲಿಲ್ಲ. ನಂಗೊಬ್ಬ ಇಂಥ ಮಗ ಹುಟ್ತಾನೆ ಅಂತ ಕನಸು ಮನಸಿನಲ್ಲಿಯೂ ನಾನು ಎಣಿಸಿರ್ಲಿಲ್ಲ. ಹಣದ ಆಸೆ ಮನುಷ್ಯನನ್ನು ಎಂತ ಬೇಕಾದ್ರೂ ಮಾಡ್ತದೆ ನೋಡು. ಹಣ್ಣು ಕೊಡುವ ಮರ, ಹರಿಯುವ ನದಿ, ಬೀಳುವ ಮಳೆ, ಗಿಡ ಬೆಳೆಸುವ ಮಣ್ಣು, ಬೀಸುವ ಗಾಳಿ ಯಾವ್ದಕ್ಕಾದ್ರೂ ಸ್ವಾರ್ಥ, ದುರಾಸೆ ಉಂಟಾ ಹೇಳು ? ಆದ್ರೆ ಮನುಷ್ಯ ಮಾತ್ರ ದುರಾಸೆಯ ಮೂಟೆ. ನನ್ನ ಮಗ ನಿತ್ಯಾನಂದ ಹಾದಿ ತಪ್ಪಿಯಾಗಿದೆ. ಸದಾನಂದ ಯಾವ್ದಕ್ಕೂ ಬರುವವ ಅಲ್ಲ. ಇನ್ನು ನಾನು - ಹೆಂಡ್ತಿ ಇಲ್ಲಿ ಇರುವುದ್ರಲ್ಲಿ ಯಾವ ಅರ್ಥವೂ ಇಲ್ಲ. ನಾವಿಬ್ರೂ ಇವತ್ತೇ ಸಬರ್‌ಮತಿ ಆಶ್ರಮಕ್ಕೆ ಹೋಗ್ತೇವೆ. ಇನ್ನು ಸಾಯುವ ತನಕ ಅಲ್ಲೇ ಇರ್ತೇವೆ. ನಿತ್ಯಾನಂದನಿಗೆ ಹೇಳಿಯಾಗಿದೆ. ಸತ್ರೂ ಯೆಂತ ತಿಳಿಸುದು ಬೇಡ ಅಂತ ಅವ ಹೇಳಿದ್ದಾನೆ. ನಂದೊಂದು ಆಸೆ ಉಂಟು. ಈಡೇರಿಸ್ತೀಯಾ ?

''ಎಂತ ಅಯ್ಯ ಅದು ?''

''ಇಗಾ, ಇದು ಈ ವರ್ಷದ ಮೊದಲ ಫಲ. ಈ ಮುಂಡಪ್ಪವನ್ನು ನೀವೆಲ್ಲ ತಿನ್ನಿ. ಇದ್ರದ್ದೊಂದು ಗಿಡವನ್ನು ನಿನ್ನ ಜಾಗದಲ್ಲಿ ಬೆಳ್ಸು. ಫಲ ಬಿಡ್ಳಿಕ್ಕೆ ಸುರು ಮಾಡಿದ್ಮೇಲೆ ಊರಿನವ್ರಿಗೆ ನಾನು ಕೊಟ್ಟ ಹಾಗೆ ಧರ್ಮಕ್ಕೆ ಕೊಡ್ತಿಯಾ ? ಇದೇ ನನ್ನ ಆಸೆ''.

''ಆಯ್ತು ಅಯ್ಯ. ಇದಕ್ಕಿಂತ ಪುಣ್ಯ ಇನ್ನೊಂದಿಲ್ಲ. ಆದ್ರೂ ಅಯ್ಯ, ನೀವು ಊರು ಬಿಡ್ಬಾರ್ದು'', ಅಂತ ಕಣ್ಣಲ್ಲಿ ನೀರು ತುಂಬಿಕೊಂಡು ಅವ್ರ ಕಾಲಿಗೆ ಬಿದ್ದ. ಭಟ್ರು ಕಣ್ಣಲ್ಲೂ ನೀರು. ಒಂದು ಸರ್ತಿ ಅವ್ನನ್ನು ಗಟ್ಟಿಯಾಗಿ ತಬ್ಬಿ ಹಿಡ್ಕೊಂಡು ಒಂದು ಬುಟ್ಟಿ ಹಣ್ಣು ಅವ್ನ ಕೈಗೆ ಕೊಟ್ಟು ಅವ್ರು ಹೋದ್ರು.

* * *

ಇಷ್ಟೆಲ್ಲ ಕತೆಯಾಗಿ ಸುಮಾರು ಎಂಟು ವರ್ಷ ಆಗಿದೆ. ಭಟ್ರು ಆಶ್ರಮ ಸೇರಿದ ವರ್ಷವೇ ಭಾರೀ ಗಾಳಿ ಮಳೆಗೆ ಮುಂಡಪ್ಪ ಮಾವಿನ ಮರ ಮಗುಚಿ ಮನೆ ಮೇಲೆ ಬಿತ್ತು. ರಾತ್ರಿ ಮನೆಯಲ್ಲಿ ಮಲ್ಗಿದ್ದ ನಿತ್ಯಾನಂದ ಅದ್ರ ಅಡಿಗೆ ಬಿದ್ದು ಸತ್ತುಹೋದ. ಭಟ್ರು ಕೊಟ್ಟ ಮುಂಡಪ್ಪದ ಗಿಡ ಅಬ್ಬಾಸ್ ಬೆಳ್ಸಿದ. ಆದ್ರೆ ಅವ್ನ ಕೊರಗಿನಲ್ಲೇ ಹಾಸಿಗೆ ಹಿಡ್ದು ಫಲ ಬಿಡುವ ಮೊದ್ಲೇ ಸತ್ತ. ಆದ್ರೆ ಅದರ ಫಲವನ್ನು ಅಬ್ಬಾಸ್‌ನ ಮಗ ಸಯೀದ್, ''ಭಟ್ರ ಮರದ ಹಣ್ಣು'' ಅಂತ ಖುಷಿಯಿಂದ ಹೇಳಿಕೊಂಡು ಈಗ ಎಲ್ರಿಗೂ ಕೊಡ್ತಾ ಇದ್ದಾನೆ.


ಪಿ. ಬಿ. ಪ್ರಸನ್ನ
'ಶ್ರೀದೇವಿಪ್ರಭಾ', ಶಾಂತಿನಗರ, ಉಡುಪಿ - ೫೭೬ ೧೦೧


## ಸುದ್ದಿ ಚಿತ್ರ



ಹೆಚ್ಚು ಸಂಖ್ಯೆಯಲ್ಲಿ ಮಾಸ್ತಿಯವರ ಕೃತಿಗಳನ್ನು ವಿತರಣೆ ಮಾಡಿದುದಕ್ಕಾಗಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ ನೀಡುವ ಪ್ರಶಸ್ತಿಯನ್ನು ಪ್ರೊ।। ಜಿ. ವೆಂಕಟಸುಬ್ಬಯ್ಯ ಅವರಿಂದ ನವಕರ್ನಾಟಕ ಸಂಸ್ಥೆಯ ಪರವಾಗಿ ಶ್ರೀ ಎಸ್. ರಾಮಚಂದ್ರ ರಾವ್ ಸ್ವೀಕರಿಸಿದರು.

# ಕ್ರೈಸ್ತ ಮಿಷನರಿಗಳ ಕನ್ನಡ ಕಾವ್ಯ

**ಹೊ**ಸಗನ್ನಡ ಅರುಣೋದಯ ಕಾಲದಲ್ಲಿ ಕ್ರೈಸ್ತ ಮಿಷನರಿಗಳು ರಚಿಸಿದ ಗೀತ ಸಾಹಿತ್ಯವು ಕನ್ನಡ ಭಾವಗೀತ ಪರಂಪರೆಯ ಬೆಳವಣಿಗೆಗೆ ಪ್ರಮುಖ ಹಾದಿ ಹಾಕಿಕೊಟ್ಟವು. ಕರ್ನಾಟಕದಲ್ಲಿ ಗೀತೆಗಳ ಮೂಲಕ ಧರ್ಮ ಪ್ರಸಾರ ಮಾಡುತ್ತಲಿದ್ದ ಮಿಷನರಿಗಳಿಗೆ ವಿದೇಶೀ ರಾಗಗಳು ಕನ್ನಡಿಗರನ್ನು ಪ್ರಭಾವಿಸಲಾರವು ಎಂದು ತಿಳಿಯಲು ಬಹಳ ದಿನ ಹಿಡಿಯಲಿಲ್ಲ. ಟ್ಯೂಟೋನಿಕ್ ಪರಂಪರೆಯ ಕ್ರೈಸ್ತ ಗೀತಗಳು ಕರ್ನಾಟಕ ಜನತೆಯ ಸಂಪ್ರದಾಯಕ್ಕೆ ಅಷ್ಟಾಗಿ ಹೊಂದಿಕೊಳ್ಳಲಾರವು ಎಂಬ ಕಾರಣದಿಂದಾಗಿ ಕ್ರೈಸ್ತರಲ್ಲಿ ದೇಸೀಯ ಮಾದರಿಯ ಗೀತೆಗಳಿಗೆ ಪ್ರೋತ್ಸಾಹ ದೊರೆಯಿತು.

ಕಿಟೆಲ್ ಅವರು ಕೇಂದ್ರ ಸಂಸ್ಥೆಯಾದ ಬಾಸೆಲ್‌ಗೆ ೧೮.೪.೧೮೭೦ರಂದು ಪತ್ರ ಬರೆದು ''ಕ್ರೈಸ್ತ ಮತಪ್ರಸಾರ ಮಾಡುವ ಮಿಷನರಿಗಳು ಕನ್ನಡ ಕಾವ್ಯಗಳನ್ನು ಅಭ್ಯಸಿಸಬೇಕು ಮತ್ತು ಈ ವಿಷಯವು ದೈವಜ್ಞಾನ ಶಾಲೆಯಲ್ಲಿ ಓದುವವರಿಗೆ ಕಡ್ಡಾಯವಾಗಬೇಕು. ಹೀಗೆ ಕಲಿತವರು ಮುಂದೆ ಕನ್ನಡದಲ್ಲಿ ಅದೂ ದೇಸೀ ರಾಗಗಳಲ್ಲಿ ಪದ್ಯಗಳನ್ನು ರಚಿಸಬೇಕು'' ಎಂದರು.

ಕನ್ನಡ ಭಾಷೆ ಮತ್ತು ಸಾಹಿತ್ಯದ ಮೇಲೆ ಪ್ರಭುತ್ವ ಸಾಧಿಸಿ ಕಿಟೆಲ್, ವೈಗಲ್, ಮೊಗ್ಲಿಂಗ್, ಲೂಥಿ, ಮುರಾ – ಮೊದಲಾದವರು ಜನಪದ ಹಾಡು, ದಾಸರ ಕೀರ್ತನೆಗಳು, ಶರಣರ ಕೈವಲ್ಯ, ತತ್ತ್ವಪದಗಳಿಂದಲೂ, ಜನರ ನಾಲಗೆಯ ಮೇಲೆ ನಲಿಯುತ್ತಿದ್ದ 'ಕುಮಾರವ್ಯಾಸ ಭಾರತ'ದ ಪದ್ಯಗಳು – ಮುಂತಾದ ಕಾವ್ಯಗಳಿಂದಲೂ ಪ್ರಭಾವಿತರಾಗಿ ಈ ನಾಡಿನ ಜನರನ್ನು ಸ್ಫುರಿಸುವ ದೇಸೀ ಗೀತ ಪ್ರಕಾರವನ್ನು ಮನವರಿಕೆ ಮಾಡಿಕೊಂಡರು. ಆಗ ದಾಸರ ಪದಗಳ, ಕೈವಲ್ಯ ಪದಗಳ ಶೈಲಿಯಲ್ಲಿ ಕ್ರೈಸ್ತ ಗೀತೆಗಳನ್ನು ಅನುವಾದಿಸಿದರು ಮತ್ತು ಸ್ವತಂತ್ರ ಕವಿತೆಗಳನ್ನು ಬರೆದರು.

ಒಯ್ದರಾತನ ದಂಡಿನಾಳ್ಗಳು
ಹೊಯ್ದರಾತನ ಬಾರು ಹಗ್ಗದಿ
ಗೆಯ್ದರಾತನ ಹಾಸ್ಯ ರಾಜನ ಸೋಗು ತೊಡಿಸುತಲೀ
ಕೊಯ್ದರಾತನ ತಲೆಯ ಮುಳ್ಳಿಂ
ಬಯ್ದರಾತಗೆ ರಾಜ ಎನುತಲಿ
ಕೈದುವೆನುತಲಿ ಕೊಟ್ಟಬೆತ್ತದಿ ಹೊಡೆದರಾತನಿಗೆ

(ಕಿಟೆಲ್ ಕಥಾಮಾಲೆ, ೧೮೬೨)

ಕ್ರೈಸ್ತನನ್ನು ಬಂಧಿಸಿ ಶಿಲುಬೆಗೇರಿಸಲು ಕರೆತಂದ ಸೈನಿಕರು ಆತನಿಗೆ ಕೊಟ್ಟ ಶಿಕ್ಷೆ ಯಾವ ಬಗೆಯದೆಂಬುದನ್ನು ದೇಸೀ ಕಾವ್ಯಮಟ್ಟದಲ್ಲಿ ಹೇಳಿದರು. ೧೯ನೆಯ ಶತಮಾನದಲ್ಲಿ ಮಿಷನರಿಗಳು ಬರೆದ ಗೀತೆಗಳು ಹೆಚ್ಚಾಗಿ ಅನುವಾದಗಳು. ೧೮೪೫ರಲ್ಲಿ ಬಾಸೆಲ್ ಮಿಷನ್ನಿನವರು ಪ್ರಕಟಿಸಿದ ಸ್ತೋತ್ರ ಗೀತೆಗಳ ಸಂಗ್ರಹದಲ್ಲಿ ಅರವತ್ತೊಂದು ಕನ್ನಡ ಗೀತೆಗಳಿವೆ. ಇವು ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಿಂದ ಅನುವಾದಗೊಂಡಂಥವು. ಜಿ. ಎಚ್. ವೈಗಲ್ ಬಾಸೆಲ್ ಮಿಷನ್ನಿನವರಾಗಿದ್ದು ರೀಡ್ ಎಂಬಾತನೊಂದಿಗೆ ಸೇರಿ ಇಂಗ್ಲಿಷ್ ಹಾಡುಗಳ ರೀತಿಯಲ್ಲಿ ಅನೇಕ ರಚನೆಗಳನ್ನು ಮಾಡಿದ್ದಾರೆ. ವೈಗಲ್ ಎಚ್. ಮೊಗ್ಲಿಂಗ್ ಜೊತೆಯಲ್ಲಿ 'ಕ್ರೈಸ್ತ ಗೀತೆಗಳು' ಪುಸ್ತಕವನ್ನು ೧೮೪೭ರಲ್ಲಿ ಹೊರ ತಂದುದಲ್ಲದೆ ೧೮೬೨ರಲ್ಲಿ 'ಪ್ರಾರ್ಥನೆಗಳು' ಎಂಬ ಸಂಕಲನವನ್ನೂ ಹೊರತಂದರು. ಪ್ರಾರ್ಥನ ಪದ್ಯಗಳನ್ನು ಹೆಚ್ಚಾಗಿ ಬಾಸೆಲ್ ಮಿಷನ್ನಿನ ಬಿ. ಲೂಥಿ ಅನುವಾದಿಸಿದರು. ಬಿ. ಎಚ್. ರೈಸ್ ಕ್ರೈಸ್ತ ಕವಿತೆಗಳ ಪ್ರಮುಖ ಅನುವಾದಕರು. ಅವರ ರಚನೆಗಳಲ್ಲಿ ಬಹುಮಟ್ಟಿಗೆ ಕಂದ, ದಾಸರ ಕೀರ್ತನೆಗಳ ಮಾದರಿಗಳು ಕಾಣಬರುತ್ತವೆ. 'ಕನ್ನಡ ಸಂಗೀತಗಳು' ಸಂಕಲನದಲ್ಲಿ ಲಂಡನ್ ಮಿಷನ್ ಸಂಸ್ಥೆಯ ಹಲವರ ರಚನೆಗಳಿವೆಯಾದರೂ ರೈಸ್ ಅವರ ಕವಿತೆಗಳೇ ಹೆಚ್ಚಾಗಿವೆ. ಮಿಸ್ ಅನಾಸ್ಟೆ ಎಂಬುವರ 'ಕೀರ್ತನೆಗಳು' (೧೮೬೯) ಸಂಕಲನವೂ ಪ್ರಾರ್ಥನಾ ಪದ್ಯಗಳನ್ನೊಳಗೊಂಡಿದೆ. ದೇಸೀಯ ಕ್ರೈಸ್ತರ ಪ್ರಾರ್ಥನಾ ಪದ್ಯಗಳಲ್ಲಿ ಅಬ್ಬೈಜನ 'ಜ್ಞಾನ ಕೀರ್ತನೆಗಳು' (೧೮೭೧) ಮುಖ್ಯವಾದುದು. 'ಪ್ರಾಕಾವ್ಯ ಮಾಲಿಕೆ'ಯನ್ನು ೧೮೬೮ರಲ್ಲಿ ಜಿ. ವರ್ತ ಸಂಪಾದಿಸಿದ್ದು, ಇಲ್ಲಿ ಸೇರಿರುವ ಕ್ರೈಸ್ತ ಗೀತೆಗಳ ಬಗ್ಗೆ, ''ಈ ಪ್ರಾರ್ಥನಾ ಪದ್ಯಗಳು ಇಂಗ್ಲಿಷ್, ಜರ್ಮನ್ ಇತ್ಯಾದಿ ಟ್ಯುಟೂನಿಕ್ ಭಾಷೆಗಳ ಛಂದೋ ಮಾದರಿಯ ರಚನೆಗಳಾಗಿದ್ದು, ಕನ್ನಡ ವಿದ್ವಾಂಸರು ತಮ್ಮ ಭಾಷೆಯನ್ನು ಹೇಗೆ ಬಳಸಬಹುದೆಂಬುದಕ್ಕೆ ದಿಕ್ಸೂಚಿಗಳಾಗಿವೆ,'' ಎಂದಿದ್ದಾರೆ. ಪಂಜೆ, ಗೋವಿಂದಪೈ ಅವರಿಗಿಂತಲೂ ಮುಂಚೆಯೇ ಸರಳ ಭಾವದ ಪದ್ಯಗಳನ್ನು ಕ್ರೈಸ್ತ ಮಿಷನರಿಗಳೇ ರಚಿಸಿ ದಾರಿ ತೋರಿಸಿದರು. ೧೮೯೩ರಲ್ಲಿ ಪ್ರಕಟವಾದ 'ಕನ್ನಡ ಕವಿತೆಯ ಮೊದಲನೇ ಪುಸ್ತಕ' ದಲ್ಲಿರುವ ಒಂದು ಪದ್ಯದ ಕೆಲವು ಸಾಲುಗಳು ಹೀಗಿವೆ :

ಒಂದು ನಾಯಿಯು ತನ್ನ ಬಾಯೊಳು
ಚಂದವಾಗಿರ್ದೊಂದು ರೊಟ್ಟಿಯ
ಅಂದದಿಂದಲಿ ಕಚ್ಚಿಕೊಂಡು ಹೊಳೆಯ ದಾಟುತಿರೆ
ಸರಿದ ನೆರಳವ ಕಂಡು ಇದು ಮತ್ತೊಂದು
ಸೊಣಗನು ಯಿದರ ಬಾಯೊಳಗಿಂದ
ಕಸಗೊಳಬೇಕು ರೊಟ್ಟಿಯನೆಂದು ಬಗೆಯುತ್ತ

– ಇಂಥ ಪದ್ಯಗಳು ಕಂದ, ಚೌಪದಿ, ಷಟ್ಪದಿ ಮೊದಲಾದ ಪೂರ್ವಪರಿಚಿತ ಮಟ್ಟುಗಳಲ್ಲಿದ್ದವು. ಪಂಜೆಯವರು ತಮ್ಮ ಕಥನ – ಕವನಗಳನ್ನು ಇಂಥವೇ ಮಟ್ಟುಗಳಲ್ಲಿ ರಚಿಸಿದ್ದಾರೆ. ಅನೇಕ ಕ್ರೈಸ್ತ ಮಿಷನರಿ ಗೀತೆಗಳು ಆ ಕಾಲಕ್ಕೆ ಕನ್ನಡದಲ್ಲಿ ತಲೆದೋರಿದವು. ''ಈ ಉಪಕ್ರಮದಿಂದಾಗಿ ಕ್ರೈಸ್ತ ಧರ್ಮ ಪ್ರಚಾರಕ್ಕೆ ಹೆಚ್ಚು ಲಾಭವಾಯಿತಲ್ಲದೆ, ಪರ್ಯಾಯವಾಗಿ ಕನ್ನಡ ಭಾವ ಗೀತೆಗಳ ಉದಯಕ್ಕೂ ಇದು ಕಾರಣವಾಯಿತು,'' ಎನ್ನುತ್ತಾರೆ ಕನ್ನಡ ಕ್ರೈಸ್ತ ಗೀತೆಗಳ ಕುರಿತು ಅಧ್ಯಯನ ಕೈಕೊಂಡ ಡಾ॥ ಎಸ್. ಪಿ. ಗೌಡರ ಅವರು. ಈವರೆಗೆ ಕನ್ನಡದಲ್ಲಿ ಇಂಥ ಗೀತೆಗಳು ದಾಸರಿಂದ, ವಚನಕಾರರಿಂದ ರಚನೆಗೊಳ್ಳುತ್ತ ಜನಮನದಲ್ಲಿ ಹಾಸುಹೊಕ್ಕಾಗಿದ್ದರೂ ನಮ್ಮ ಪ್ರತಿಷ್ಠಿತ ಕವಿಗಳು ಇವುಗಳನ್ನು ಅಲಕ್ಷಿಸಿದ್ದರು. ಕ್ರೈಸ್ತ ಪಾದ್ರಿಗಳು ಈ ಅಲಕ್ಷಿತಗೊಂಡ ಜನಪ್ರಿಯ ಪ್ರಕಾರವನ್ನು ಗುರುತಿಸಿ ಈ ಮಾದರಿಯಲ್ಲಿ ಕ್ರೈಸ್ತ ಪದ್ಯ ಬರೆದು ಅಚ್ಚಿಸಿ ಅವುಗಳಿಗೆ ಸಾಹಿತ್ಯ ಪರಂಪರೆಯಲ್ಲಿ ಸ್ಥಾನ ಕಲ್ಪಿಸಿಕೊಟ್ಟರು. ದೇಸೀಯವೇ ಶಿಷ್ಟರ ಕೈಯಲ್ಲಿ ಮಾರ್ಗವಾಗುವ ಪ್ರಕ್ರಿಯೆಗಳಿಗನುಗುಣವಾಗಿ ಕ್ರೈಸ್ತರಿಂದ ಸ್ಥಾನಮಾನ ಪಡೆದು ಈ ದೇಸೀ ಗೀತ ಸಂಪ್ರದಾಯ ನಮ್ಮ ಭಾವಗೀತೆಯ ಸೃಷ್ಟಿಯ ಪ್ರೇರಣೆಗಳಲ್ಲಿ ಒಂದಾಯಿತು.

**ಡಾ॥ ಪ್ರಕಾಶ ಗ. ಖಾಡೆ**
ಜಿಲ್ಲಾ ಆಸ್ಪತ್ರೆ ಹತ್ತಿರ, ಸೆಕ್ಟರ್ ನಂ. ೩, ನವನಗರ, ಬಾಗಲಕೋಟ















ಕರ್ನಾಟಕ ಸಾಹಿತ್ಯ ಅಕಾಡೆಮಿ ಸಹಯೋಗದೊಂದಿಗೆ

# ರವೀಂದ್ರನಾಥ ಠಾಕೂರರ 150ನೇ ಜಯಂತಿ

## ನವಕರ್ನಾಟಕ ಪ್ರಕಾಶನದ 4 ಕೃತಿಗಳ ಲೋಕಾರ್ಪಣೆ

## ವಿಚಾರಗೋಷ್ಠಿ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ

ದಿನಾಂಕ 21 ಆಗಸ್ಟ್ 2011, ಭಾನುವಾರ. ಬೆಳಗ್ಗೆ 10ರಿಂದ ಮಧ್ಯಾಹ್ನ 1.30
ನಯನ ಸಭಾಂಗಣ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - 560 002



ಬೆಳಗ್ಗೆ 10ರಿಂದ 11.30ವರೆಗೆ

**ನಾಲ್ಕು ಕೃತಿಗಳ ಲೋಕಾರ್ಪಣೆ**

ಅಧ್ಯಕ್ಷತೆ - ಕೃತಿಗಳ ಅನಾವರಣ
ಡಾ|| ಜಿ. ರಾಮಕೃಷ್ಣ

ಕನ್ನಡ ಸಾಹಿತ್ಯದಲ್ಲಿ ರವೀಂದ್ರನಾಥ ಠಾಕೂರ್ ಅವರ ಕೃತಿಗಳ ಪ್ರಭಾವ ಕುರಿತು ಉಪನ್ಯಾಸ
ಡಾ|| ಪ್ರಧಾನ್ ಗುರುದತ್ತ

ರವೀಂದ್ರನಾಥ ಠಾಕೂರರ 1100 ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ
ಶ್ರೀ ಜಿ. ರಾಮನಾಥ ಭಟ್
ಅವರಿಗೆ ಸನ್ಮಾನ

ಬೆಳಗ್ಗೆ 11.30ರಿಂದ 12ರವರೆಗೆ
**ಗೀತಾಂಜಲಿ ನೃತ್ಯರೂಪಕ**

ಮಧ್ಯಾಹ್ನ 12ರಿಂದ 1.30ವರೆಗೆ

**ವಿಚಾರಗೋಷ್ಠಿ**

ಅಧ್ಯಕ್ಷತೆ
ಶ್ರೀ ಜಿ. ರಾಮನಾಥ ಭಟ್

ಪ್ರಬಂಧ ಮಂಡನೆ

(1) ಕನ್ನಡದಲ್ಲಿ ಠಾಕೂರ್ ಅವರ ಕೃತಿಗಳು
ಡಾ|| ಕೆ. ಸಿ. ಶಿವಾರೆಡ್ಡಿ

(2) ರವೀಂದ್ರ ಸಂಗೀತ
ಡಾ|| ಮೀರಾ ಚಕ್ರವರ್ತಿ

(3) ಶಾಂತಿ ನಿಕೇತನದ ಕಲಾ ಪರಂಪರೆ
ಶ್ರೀ ಎಚ್. ಎ. ಅನಿಲ್‌ಕುಮಾರ್

ರವೀಂದ್ರನಾಥ ಠಾಕೂರರ ಕೃತಿಗಳ
ಕನ್ನಡ ಮತ್ತು ಇಂಗ್ಲಿಷ್ ಆವೃತ್ತಿಗಳ ಪ್ರದರ್ಶನ ಮತ್ತು ಮಾರಾಟ

ಠಾಕೂರರ ಎಲ್ಲ ಕನ್ನಡ ಅನುವಾದಿತ ಕೃತಿಗಳ ಪ್ರದರ್ಶನ
ಸೌಜನ್ಯ : ಡಾ|| ಕೆ. ಸಿ. ಶಿವಾರೆಡ್ಡಿ

ಸಾಂಸ್ಕೃತಿಕ ಕಾರ್ಯಕ್ರಮ ಗೀತಾಂಜಲಿ ನೃತ್ಯರೂಪಕ ವಿಶ್ರುತ ಪ್ರದರ್ಶನ ಕಲಾಶಾಲೆಯ ವಿದ್ಯಾರ್ಥಿಗಳಿಂದ
ನಿರ್ದೇಶನ : ಗುರು ಬಿ. ಕೆ. ವಸಂತಲಕ್ಷ್ಮಿ ಮತ್ತು ವಿದ್ಯಾ ವೆಂಕಟರಾಮ್

ರಚನೆ : ಶ್ರೀಮತಿ ಎಸ್. ಮಾಲತಿ

ಕಾರ್ಯಕ್ರಮ ನಿರ್ವಹಣೆ : ಶ್ರೀಮತಿ ಬಿ. ಕೆ. ಸುಮತಿ

ತಮಗೆ ಆದರದ ಸ್ವಾಗತ

ಆರ್. ಎಸ್. ರಾಜಾರಾಮ್ ವ್ಯವಸ್ಥಾಪಕ ನಿರ್ದೇಶಕ, ನವಕರ್ನಾಟಕ ಪ್ರಕಾಶನ



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
✆ 30578022, 22203580. ಫ್ಯಾಕ್ಸ್ : 30578023. e-mail : navakarnataka@gmail.com
URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / JULY 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)